# ಸಿದ್ಧಗಂಗಾ

(ತ್ರೈಮಾಸಿಕ)

## ದಸರಾ ವಿಶೇಷ ಸಂಚಿಕೆ

೧೯೬೬



## ವಿನಮ್ರ ಪ್ರಾರ್ಥನೆ



ಮಹಾಶಯರೇ,

'ಸಿದ್ಧಗಂಗಾ' ತ್ರೈಮಾಸಿಕದ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸಿ ಪ್ರಥಮವರ್ಗದ ಪತ್ರಿಕೆಯನ್ನಾಗಿ ಮಾಡಲು ವಾಚಕವೃಂದದ ಹಾಗೂ ಜನತೆಯ ವಿಶೇಷ ಆರ್ಥಿಕ ನೆರವನ್ನು ಆಶಿಸಿದ್ದೇವೆ.

ಪತ್ರಿಕೋದ್ಯಮದ ಯಶಸ್ಸಿಗೆ ಸ್ವಂತ ಮುದ್ರಣಾಲಯ, ವಿಚಾರಪೂರಿತ ಲೇಖನಗಳೂ ಅತ್ಯಗತ್ಯ. ಇದಕ್ಕಾಗಿ ಈ ಕೆಳಕಂಡಂತೆ ಆರ್ಥಿಕ ಸಹಾಯವನ್ನು ತಮ್ಮಿಂದ ಬಯಸಿದ್ದೇವೆ.

1) 200 ರೂ. ಮೇಲೆ ನೀಡುವವರು .... ಪೋಷಕರು
2) 150 ರೂ. ಕೊಡುವವರು .... ಪ್ರೋತ್ಸಾಹಕರು
3) 100 ರೂ. ಕೊಡುವವರು .... ಸಹಾಯಕರು
4) 51 ರೂ. ಕೊಡುವವರು .... ಹಿತೈಷಿಗಳು

ಹೀಗೆ ಆದರಪೂರ್ವಕವಾಗಿ ಧನಸಹಾಯಮಾಡುವ ಮಹನೀಯರ ಹೆಸರುಗಳನ್ನು ಪತ್ರಿಕೆಯಲ್ಲಿ ಕೃತಜ್ಞತಾಪೂರ್ವಕವಾಗಿ ಸ್ಮರಿಸಿ ಪ್ರಕಟಿಸಲಾಗುವುದು.

ಪ್ರಪ್ರಥಮವಾಗಿ ತುಮಕೂರಿನ ಶ್ರೀ ಸಿದ್ಧಗಂಗಾ ಹೈಸ್ಕೂಲಿನ ಶಿಕ್ಷಕರೂ, ಉತ್ತಮ ಬರಹಗಾರರೂ ಆದ ಶ್ರೀ ಬಿ. ಎಸ್. ಮಂಜುನಾಥ್, ಎಂ.ಎಸ್‌ಸಿ.,ಬಿ.ಇಡಿ. ರವರು 200 ರೂಪಾಯಿಗಳ ಧನಸಹಾಯಮಾಡುವುದರ ಮೂಲಕ ಪತ್ರಿಕೆಯ ಪೋಷಕರಾಗಲು ಒಪ್ಪಿರುವುದನ್ನು ಪ್ರಕಟಿಸಲು ನಮಗೆ ಅತೀವ ಹೆಮ್ಮೆ.

ಎರಡನೆಯದಾಗಿ ಸಹೃದಯರೂ, ಹಿತೈಷಿಗಳೂ, ಆದ ಕಂಟ್ರಾಕ್ಟರ್ ಸಿ. ರಾಜಣ್ಣ, ಬೆಂಗಳೂರು ಅವರು ಪತ್ರಿಕೆಯ ಪುರೋಭಿವೃದ್ಧಿಗಾಗಿ 200 ರೂ.ಗಳ ಧನಸಹಾಯವಿತ್ತು ಪೋಷಕರಾಗಲು ಒಪ್ಪಿರುವುದಕ್ಕೆ ಸಂಘವು ಅತೀವ ಸಂತೋಷಪಡುತ್ತದೆ.

## ಸಿದ್ಧಗಂಗಾ


ಸಂಪಾದಕರು :

ಸಂ|| ವಿ|| ಟಿ. ವಿ. ಮುತ್ತಾಚಾರ್ಯ, ಬಿ.ಎ., (ಆನರ್ಸ್) ಬಿ.ಇಡಿ.,

ಉಪ – ಸಂಪಾದಕರು :

ಪಂಡಿತ್ ಕೆ. ಪಿ, ಶಿವಲಿಂಗಯ್ಯ ಬಿ.ಎ.,
ಕೆ. ಜಿ. ನಾಗರಾಜಪ್ಪ, ಎಂ.ಎ.,
ರಾಜೀವಲೋಚನ, ಎಂ.ಎ.,
ಕೆ. ಜಿ. ರಂಗಯ್ಯ, ಬಿ.ಎಸ್.ಸಿ., ಬಿ ಇ.ಡಿ.

ಪ್ರಕಾಶಕರು :

ಹಳೆಯ ವಿದ್ಯಾರ್ಥಿ ಸಂಘ, ಶ್ರೀ ಸಿದ್ಧಗಂಗಾ

ಮುದ್ರಕರು :

ಪೃಥ್ವಿ ಪ್ರಿಂಟರ್ಸ್, ಬಳೇಪೇಟೆ, ಬೆಂಗಳೂರು-೨

ಪತ್ರಿಕೆ ಹೊರಡುವ ಸ್ಥಳ :

ಶ್ರೀ ಸಿದ್ಧಗಂಗಾ ಕ್ಷೇತ್ರ

ಪತ್ರಿಕೆ ಹೊರಡುವ ಮಾಸಗಳು :

ಜನವರಿ
ಏಪ್ರಿಲ್
ಜುಲೈ
ಅಕ್ಟೋಬರ್


## ಲೇಖಕರಲ್ಲಿ ವಿನಂತಿ

'ಸಿದ್ಧಗಂಗಾ' ಪತ್ರಿಕೆಗೆ ಮಾನ್ಯಲೇಖಕರಿಂದ ಸಾಹಿತ್ಯದ ವಿವಿಧ ಪ್ರಕಾರಗಳ ಲೇಖನಗಳನ್ನು ಕೃತಜ್ಞತಾಪೂರ್ವಕವಾಗಿ ಸ್ವೀಕರಿಸಲಾಗುವುದು. ತಮ್ಮ ಹೆಸರು, ವಿಳಾಸಗಳ ಸಹಿತ ಕಾಗದದ ಒಂದು ಮಗ್ಗಲು ಲೇಖನಗಳನ್ನು ಸ್ಪಷ್ಟವಾಗಿ ಬರೆದು ಕಳುಹಿಸಲು ಪ್ರಾರ್ಥನೆ. ಧರ್ಮ, ಸಂಸ್ಕೃತಿ, ಕಲೆ, ಸಾಹಿತ್ಯ ವಿಜ್ಞಾನ, ಶಿಕ್ಷಣ ಮುಂತಾದ ವಿಚಾರಗಳನ್ನೊಳಗೊಂಡ ಲೇಖನಗಳಿಗೆ ಮಾನ್ಯತೆ ಹೆಚ್ಚು. ಲೇಖಕರು ತಮ್ಮಲ್ಲಿ ಲೇಖನದ ಪ್ರತಿಯನ್ನು ಕಾಯ್ದಿಟ್ಟುಕೊಳ್ಳಲು ಪ್ರಾರ್ಥನೆ. ಲೇಖನಗಳನ್ನೂ, ವಿಮರ್ಶೆಗೆ ಗ್ರಂಥಗಳನ್ನೂ, ವಿನಿಮಯಕ್ಕೆ ಪ್ರತಿಗಳನ್ನೂ ಸಂಪಾದಕರ ವಿಳಾಸಕ್ಕೆ ದಯವಿಟ್ಟು ಕಳುಹಿಸಬೇಕು.

# ಈ ಸಂಚಿಕೆಯಲ್ಲಿ

ಸಂಪಾದಕೀಯ

# ಕೃತಜ್ಞತೆ

ಸಿಧ್ಧಗಂಗಾ ತ್ರೈಮಾಸಿಕ ಇದೀಗ ಎಂಟನೆಯ ಸಂಚಿಕೆಯಾಗಿ ತಮ್ಮ ಕೈ ಸೇರುತ್ತಿರುವುದು ನಮಗೊಂದು ಹೆಮ್ಮೆಯ ಸಂಗತಿ. ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಮಹಾ ಪೋಷಕತ್ವದಲ್ಲಿ ಬೆಳೆಯುತ್ತ ಬೆಳಗುತ್ತಿರುವ ಈ ಪತ್ರಿಕೆ ವಾಚಕ ಕೋಟಿಯ ಬಲವನ್ನು ಸಂಪಾದಿಸುತ್ತ ಜನಪ್ರಿಯವಾಗುತ್ತಿರುವುದು ನಮ್ಮ ಭಾಗ್ಯ. ಲೇಖಕ ಮಹನೀಯರೂ ಹಾಗೂ ಮಹಿಳಾ ಲೇಖಕಿಯರೂ ತಮ್ಮ ಲೇಖನ ವರ್ಷಧಾರೆಯಿಂದ ನಮ್ಮ ಪತ್ರಿಕೆಯನ್ನು ಒಂದು ಸಾರಸ್ವತ ನಂದನವನವನ್ನಾಗಿ ಮಾಡದಿದ್ದರೆ ಇದು ವಾಚಕರ ಮನೋವಿಕಾಸ ಕಾರಕ ಪತ್ರಿಕೆಯಾಗಿ ಮೆರೆಯುವುದು ಸಾಧ್ಯವಾಗುತ್ತಿರಲಿಲ್ಲ. ಅನೇಕ ಮಹನೀಯರು ನಮಗೆ ಅಮೂಲ್ಯ ಸಲಹೆಗಳನ್ನೂ ಸಂದೇಶಗಳನ್ನೂ ದಯಪಾಲಿಸಿ ನಮಗೆ ಸ್ಫೂರ್ತಿ ನೀಡಿರುವುದನ್ನೂ ಸಹ ಈಗ ಅತ್ಯಂತ ಸಂತೋಷದಿಂದ ನೆನೆಯುತ್ತೇವೆ. ಜಾಹಿರಾತುದಾರರ ಅಭಿಮಾನ ವಿಶ್ವಾಸಗಳನ್ನಂತೂ ನಾವು ಎಷ್ಟು ಪ್ರಶಂಸಿದರೂ ಅಲ್ಪವೇ. ಮಾನ್ಯ ಚಂದಾದಾರರ ಸಹಕಾರವಿಲ್ಲದೆ ಹೋಗಿದ್ದರೆ ನಮ್ಮ ಪತ್ರಿಕಾ ಕಾರ್ಯದಲ್ಲಿ ಯಶಸ್ಸನ್ನು ಕಾಣುವುದೇ ಅಸಂಭವವಾಗುತ್ತಿತ್ತು. ನಮ್ಮ ಮಾನ್ಯ ವಿದ್ಯಾ ಇಲಾಖೆಯವರು ಈ ಪತ್ರಿಕೆಯನ್ನು ಎಲ್ಲಾ ವಿದ್ಯಾ ಸಂಸ್ಥೆಗಳವರೂ ಕೊಂಡು ಪ್ರೋತ್ಸಾಹಿಸುವಂತೆ ಆಜ್ಞೆ ಹೊರಡಿಸಿ ನಮಗೆ ಮಹದುಪಕಾರ ಮಾಡಿರುವುದನ್ನು ಸಹ ನಾವು ಈ ಸಂದರ್ಭದಲ್ಲಿ ಕೃತಜ್ಞತೆಯಿಂದ ಸ್ಮರಿಸುವವರಿದ್ದೇವೆ.

**ಶ್ರದ್ಧಾಂಜಲಿ :—**

ಕನ್ನಡ ಕವಿ ಕುಲದೀಪಕರಾಗಿದ್ದ ಪ್ರೊ|| ತೀ. ನಂ. ಶ್ರೀಕಂಠಯ್ಯನವರು ದಿನಾಂಕ 7-9-1966 ರಂದು ಕಲ್ಕತ್ತೆಯಲ್ಲಿ ನಿಧನರಾದುದು ಕನ್ನಡ ಸಾರಸ್ವತ ಲೋಕಕ್ಕೆ ತುಂಬಲಾರದ ನಷ್ಟವನ್ನುಂಟು ಮಾಡಿದೆ.

ದಿವಂಗತ ಶ್ರೀ ತೀ. ನಂ. ಶ್ರೀಯವರು ನಮ್ಮ ತುಮಕೂರು ಜಿಲ್ಲೆಯ ತೀರ್ಥಪುರದವರು. ಸಾರಸ್ವತ ಲೋಕದ ಉದ್ದಾಮಕವಿ ಹಾಗೂ ಮೇಧಾವಿ ವಿಮರ್ಶಕರಾಗಿದ್ದರು. "ಭಾರತೀಯ ಕಾವ್ಯಮೀಮಾಂಸೆ" ಅವರ ಅದ್ಭುತ ಪಾಂಡಿತ್ಯದ ಶ್ರೀಮಂತ ಸಾಕ್ಷಿ. ಅವರು ಕನ್ನಡ ಸಾಹಿತ್ಯ ಪರಿಷತ್ತಿನ "ಕನ್ನಡ-ಕನ್ನಡ" ನಿಘಂಟಿನ ಸಂಪಾದಕ ಮಂಡಲಿಯ ಅಧ್ಯಕ್ಷರಾಗಿ ದೊಡ್ಡ ಸೇವೆ ಸಲ್ಲಿಸುತ್ತಿದ್ದರು. ಭಾರತದ ಲಿಂಗ್ವಿಸ್ಟಿಕ್ ಸೊಸೈಟಿಯ ಅಧ್ಯಕ್ಷರಾಗಿಯೂ ಇದ್ದರು. ಮೈಸೂರು ವಿಶ್ವವಿದ್ಯಾನಿಲಯದಲ್ಲೇ ಅಲ್ಲದೆ ಕರ್ನಾಟಕ ವಿಶ್ವವಿದ್ಯಾನಿಲಯದಲ್ಲೂ ಕೂಡ 5 ವರ್ಷಗಳ ಕಾಲ ಕನ್ನಡ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿ ಶಿಷ್ಯ ಕೋಟಿಯ ಚಿರಸ್ಮರಣೀಯ ವ್ಯಕ್ತಿಗಳಾಗಿದ್ದರು. 1956ರಲ್ಲಿ ರಾಕ್‌ಫೆಲ್ಲರ್ ನಿಧಿಯ ನೆರವಿನಿಂದ ಲಂಡನ್ನಿಗೆ ಹೋಗಿ ಕನ್ನಡ, ಇಂಗ್ಲೀಷ್ ಹಾಗೂ ಸಂಸ್ಕೃತಗಳಲ್ಲಿ ಭಾಷಾ ಶಾಸ್ತ್ರದ ಉನ್ನತ ವ್ಯಾಸಂಗ ಮಾಡಿ ಬಂದರು. ದೊಡ್ಡ ಪಂಡಿತರಾಗಿದ್ದ ತೀ. ನಂ. ಶ್ರೀಯವರು ಸುಮಾರು 12ಕ್ಕೂ ಮೇಲ್ಪಟ್ಟು ಗ್ರಂಥಗಳನ್ನು ರಚಿಸಿದ್ದರು. ಸಂಖ್ಯೆಯಲ್ಲಿ ಕಡಮೆಯಾಗಿದ್ದರೂ ಅವರ ಗ್ರಂಥಗಳು ಗುಣದಲ್ಲಿ ಅಮೂಲ್ಯವಾದ ವಾಗ್ದೇವತೆಯ ಭಂಡಾರಗಳಾಗಿವೆ.

ಅವರ ಸೇವೆ ಅಗತ್ಯವಿದ್ದ ಈ ಕಾಲದಲ್ಲಿ ಅವರು ನಮ್ಮನ್ನಗಲಿದ್ದು ನಮ್ಮ ದುರ್ದೈವ ಹಾಗೂ ದೌರ್ಭಾಗ್ಯ. ಅವರ ಪವಿತ್ರಾತ್ಮ ಚಿರಶಾಂತಿ ಸುಖವನ್ನನುಭವಿಸಲೆಂದು ವಿಶ್ವಾತ್ಮನಲ್ಲಿ ಅನನ್ಯ ಭಕ್ತಿಯಿಂದ ಮೊರೆಯಿಡುತ್ತೇವೆ.

o o o o

ಶ್ರೀ ಕೃಷ್ಣಗಿರಿ ಕೃಷ್ಣರಾಯರು ಹಠಾತ್ತನೆ ನಿಧನರಾದ್ದರಿಂದ ಕನ್ನಡ ಗಮಕಕಲಾ ಕ್ಷೇತ್ರಕ್ಕೆ ದೊಡ್ಡ ಆಘಾತವಾಗಿದೆ. ಅವರು ಉದ್ದಾಮ ಗಮಕಕಲಾ ಪ್ರವೀಣರಾಗಿದ್ದರು. ಗಮಕಿಗಳಿಗೆಲ್ಲಾ ಅವರು ಆರಾಧ್ಯ ದೇವತೆಯಂತಿದ್ದರು. ಅವರ ಕಲಾ, ನೈಪುಣ್ಯವು ಶ್ರೋತೃಗಳನ್ನು ರಸರೋಮಾಂಚನ ಗೊಳಿಸುತ್ತಿತ್ತು. ಅಂತಹವರ ಜನನ ನಾಡಿನ ಪುಣ್ಯದಿಂದ ಮಾತ್ರ ಸಾಧ್ಯ. ಅವರು ಮೈಸೂರು ಸಂಸ್ಥಾನದ ಗ್ರಂಥ ಭಂಡಾರದ ಅಧಿಕಾರಿಗಳಾಗಿಯೂ ಇದ್ದು ಸೇವೆ ಸಲ್ಲಿಸುತ್ತಿದ್ದರು.

ಈ ಮಹನೀಯರನ್ನು ಕಳೆದುಕೊಂಡು ಗಮಕ ಕಲಾಭಿಮಾನಿಗಳು ಅನಾಥರಂತಾಗಿದ್ದಾರೆ. ಅವರ ವಿದ್ವತ್ ಪ್ರಭೆ ನಮಗಾದರ್ಶವಾಗಿರಲೆಂದೂ ಅವರಾತ್ಮಕ್ಕೆ ಪರಮಾತ್ಮನು ಚಿರಶಾಂತಿಯನ್ನು ಕರುಣಿಸಲೆಂದೂ ಹಾರೈಸುತ್ತೇವೆ.

○ ○ ○ ○

ಮೈಸೂರು ಸಂಸ್ಥಾನದ ಕೈಗಾರಿಕಾ ಸಚಿವರಾಗಿದ್ದ ದಿವಂಗತ ಮುಲ್ಲಪ್ಪನವರು ನಮ್ಮನ್ನಗಲಿದ್ದು ಬಹು ದಾರುಣ ವಾರ್ತೆಯೊಗಿದೆ. ಅವರ ಕಾರ್ಯಶ್ರದ್ಧೆ, ದೇಶಾಭಿಮಾನ, ಕೈಗಾರಿಕಾ ಪ್ರಗತಿಗಾಗಿ ಅವರು ಶ್ರಮಿಸುತ್ತಿದ್ದ ರೀತಿ ಸರ್ವರಿಂದಲೂ ಅನುಕರಣೀಯ್ಯವಾಗಿವೆ. ಅವರ ನಿಧನದಿಂದ ನಾಡಿಗೆ ದೊಡ್ಡ ನಷ್ಟವಾಗಿದೆ. ಪ್ರಜಾ ಹಿತೈಷಿಗಳಾದ ಪ್ರಾಮಾಣಿಕ ವ್ಯಕ್ತಿಗಳನ್ನು ಹೆಚ್ಚು ಕಾಲ ಬಾಳಗೊಡದಂತೆ ತನ್ನಲ್ಲಿಗೆ ಸೆಳೆದುಕೊಳ್ಳುವ ಕಾಲವೆಷ್ಟು ಕ್ರೂರಿಯೋ ಹೇಳಲಾಗದು! ಕಾಲಾಯ ತಸ್ಮೈನಮಃ ಎನ್ನದೆ ವಿಧಿಯಿಲ್ಲ. ದಿವಂಗತರಾತ್ಮಕ್ಕೆ ಚಿರಶಾಂತಿ ಸಿಕ್ಕಲೆಂಬುದು ನಮ್ಮ ಹಾರೈಕೆ.

## ವಿಶೇಷ ಸಂಚಿಕೆ

ಇನ್ನು ನಮ್ಮ ಪತ್ರಿಕೆಯ ವಿಶೇಷ ಸಂಚಿಕೆಯನ್ನು ಕುರಿತು ಒಂದೆರಡು ಅರಿಕೆಯ ನುಡಿಗಳು. ನಾಡಿನ ಹಿರಿಯ ಕಿರಿಯ ಸಾಹಿತಿಗಳೆಲ್ಲರ ನೆರವು ಪಡೆದು ನಮ್ಮ ಸಂಚಿಕೆಯು ಮೈ ತಳೆದಿದೆ. ನಮ್ಮ ಧ್ಯೇಯವಾದ ಆಧ್ಯಾತ್ಮ ವಿದ್ಯಾ ಪ್ರಸರಣ, ಉಚಿತವಾದಷ್ಟು ಲಘು ಸಾಹಿತ್ಯ, ಮನವುಗುವ ಕವನಗಳು, ಶ್ರೀವಾಣಿ ಇವುಗಳಿಂದ ವಿಶೇಷ ಸಂಚಿಕೆ ನಿಜವಾಗಿ ವಿಶೇಷವಾಗಿದೆ. ವಿಜ್ಞಾನವನ್ನು ಜ್ಞಾನವು ಮೈ ಗೂಡಿಸಿಕೊಂಡಿದೆ. ತ್ರೈಮಾಸಿಕ ಪತ್ರಿಕೆಗಳು ಸಾರಸರ್ವಸ್ವವಾಗಿ ಸಂಗ್ರಹಯೋಗ್ಯವಾಗಿರುವಂತೆ ಮೈತಳೆವುದು ಅಗತ್ಯವೆಂದು ಭಾವಿಸಿ ವಾಚಕರಿಗೆ ಈ ಕುಸುಮವನ್ನರ್ಪಿಸುತ್ತೇವೆ.



ಶ್ರೀವಾಣಿ

# ಪ್ರಾರ್ಥನೆಯ ಮಹತ್ವ



ಪ್ರಾರ್ಥನೆ ಬಹಿರಂಗ ಬದುಕಿನ ಸಂಯಮದ ಕಡಿವಾಣ, ಅಂತರಂಗ ಬದುಕಿನ ಆತ್ಮವಿಕಾಸದ ಮಹಾತತ್ತ್ವ ಸಾಕ್ಷಾತ್ಕಾರದ ಸುಲಭ ದಾರಿ.

ಪ್ರಾರ್ಥನೆ ಪರಮಾತ್ಮನನ್ನು ಕುರಿತ ಸ್ತೋತ್ರ. ಭಕ್ತ ಭಗವಂತನೊಂದಿಗೆ ವ್ಯವಹರಿಸುವ ಭಾಷೆಯೇ ಪ್ರಾರ್ಥನೆ. ಆರಾಧನೆ, ಆತ್ಮಾನುಸಂಧಾನ, ಸಂವೇದನ ಮತ್ತು ಇಷ್ಟಾರ್ಥಫಲಸಿದ್ಧಿಗಾಗಿ ಭಕ್ತ ವಸ್ತು ನಿರ್ದೇಶನ ರೂಪದಲ್ಲಿ, ಆಶೀರ್ವಾದ ಬೇಡಿಕೆಯ ರೂಪದಲ್ಲಿ ಮತ್ತು ನಮಸ್ಕಾರ ರೂಪದಲ್ಲಿ ಭಗವಂತನಿಗೆ ಪ್ರಾರ್ಥನೆಯನ್ನು ಸಲ್ಲಿಸುತ್ತಾನೆ.

ಅಂದರೆ ಪರಮಾತ್ಮ ಎಂಬ ತತ್ತ್ವ ಉಂಟೇ ಎಂಬ ಸಂಶಯ ಉಂಟಾಗುತ್ತದೆ. ಆದರೆ ಪರಮಾತ್ಮನ ಅಸ್ತಿತ್ವದಲ್ಲಿ ಯಾರೂ ಕಳವಳಪಡಬೇಕಾದುದಿಲ್ಲ, ಸಂಶಯಪಡಬೇಕಾದುದಿಲ್ಲ. ದಿನನಿತ್ಯದ ವ್ಯವಹಾರದಲ್ಲಿ ಈ ಸತ್ಯವನ್ನು ಮನಗಾಣಬಹುದಾಗಿದೆ. ಆದರೆ ವಿಜ್ಞಾನ ಮಾತ್ರ ಪ್ರತ್ಯಕ್ಷವಾಗಿ ಇಂದ್ರಿಯ ಗೋಚರವಾಗದ ಯಾವ ವಸ್ತುವನ್ನೂ ನಂಬುವುದಿಲ್ಲ. ಎಲ್ಲವೂ ಅದಕ್ಕೆ ಪ್ರಮಾಣೀಭೂತವಾಗಿ ಗೋಚರಿಸಬೇಕು. ಪ್ರತಿಯೊಂದನ್ನೂ ಒರೆ ಹಚ್ಚುವುದೇ ಅದರ ಸ್ವಭಾವ. ಆದರೆ ದೊಡ್ಡ ದೊಡ್ಡ ವಿಜ್ಞಾನಿಗಳೇ ವಿಜ್ಞಾನದ ಸಂಶೋಧನೆಗೆ ಸಿಲುಕದ ಒಂದು ವಸ್ತು ಉಂಟು ಎಂಬ ತೀರ್ಮಾನಕ್ಕೆ ಬಂದಿದ್ದಾರೆ. ವಿಜ್ಞಾನ ಸಂಶೋಧನೆ ಇನ್ನೂ ಲಕ್ಷಾಂತರ ವರ್ಷಗಳು ಮುಂದುವರಿದು ಅನೇಕ ಅದ್ಭುತ ರಹಸ್ಯಗಳನ್ನು ಹೊರಗೆಡಹಿದರೂ. ಅದನ್ನೂ ಮೀರಿದ, ಸಂಶೋಧನೆಗೆ ಎಟಕದ ಒಂದು ವಸ್ತು ಇದ್ದೇ ಇರುತ್ತದೆ ಈ ವಿಜ್ಞಾನದ ಸಿಲುವಿಗೆ ಸಿಲುಕದ, ಬುದ್ಧಿಗೆ ಗೋಚರಿಸದ, ನಮ್ಮ ಊಹೆಗೆ ಸಿಕ್ಕುವ, ಅನುಭಾವ ವೇದ್ಯವಾಗುವ ಶಕ್ತಿಯನ್ನೇ ಪ್ರಭು, ದೇವರು, ಪರಮಾತ್ಮ ಎಂದು ಕರೆಯುತ್ತೇವೆ. ವಿಶ್ವದ ಪ್ರತಿಯೊಂದು ವ್ಯಾಪಾರವೂ ಕ್ರಮಬದ್ಧವಾಗಿ, ಸುವ್ಯವಸ್ಥಿತವಾಗಿ ಯುಗಯುಗಗಳಿಂದ ನಡೆದು ಬಂದಿದೆ. ಇಂಥ ಒಂದು ನಿಯಮಬದ್ಧ ವಿಶ್ವದ ಬದುಕಿಗೆ ಪರಮಾತ್ಮನೇ ಕಾರಣ. ಅವನು ವಿಶ್ವನಾಯಕನಾಗಿ, ವಿಶ್ವಚಾಲಕನಾಗಿ, ವಿಶ್ವವಿಭುವಾಗಿ ಅಗೋಚರನಾಗಿದ್ದೇ ವಿಶ್ವ ವ್ಯಾಪಾರವನ್ನು ಕ್ರಮಗೊಳಿಸುತ್ತಾನೆ. ಅವನ ಅಪ್ಪಣೆ ಪ್ರಕಾರ ಸೂರ್ಯಚಂದ್ರರು ಹುಟ್ಟುತ್ತಾರೆ, ಮುಳುಗುತ್ತಾರೆ. ಗಾಳಿ ಬೀಸುತ್ತದೆ, ಅಗ್ನಿ ಸುಡುತ್ತದೆ, ಬೀಜ ಮೊಳೆಯುತ್ತದೆ. ಕಂಡೂ ಕಾಣದೆ ವ್ಯವಹರಿಸುವ ಭಗವಂತ ಕಾಣುವ ಕಣ್ಣಿದ್ದ ವ್ಯಕ್ತಿಗೆ ಖಂಡಿತ ಒಂದಲ್ಲ ಒಂದು ರೂಪದಲ್ಲಿ ಗೋಚರಿಸುತ್ತಾನೆ ಇದರಲ್ಲಿ ಯಾವ ಸಂಶಯವೂ ಇಲ್ಲ

ಮನುಷ್ಯ ವ್ಯವಹಾರವನ್ನು ತೊರೆಯದೆ, ಇದ್ದ ಸ್ಥಳವನ್ನು ಬಿಡದೆ, ಸಂಸಾರದಲ್ಲಿದ್ದೇ ಪರಮಾತ್ಮನ ಕೃಪೆಯನ್ನು ಹೊಂದಲು ಸಾಧ್ಯ. ಎಲ್ಲರೂ ಸರಿಯಾದ ಗುರಿಯನ್ನು ಮುಟ್ಟಬೇಕಾದರೆ ಯಾವ ಮಾರ್ಗವನ್ನು ಅನುಸರಿಸಬೇಕು ಎಂಬುದನ್ನು ಸಂತರು, ಮಹಾತ್ಮರು, ಸಾಧಕರು ಸಿದ್ಧಪುರುಷರು ಯೋಚಿಸಿ ಪರಿಶೀಲಿಸಿ ಉಪದೇಶಮಾಡಿದ್ದಾರೆ. ಪರಮಾತ್ಮನ ನಾಮಸ್ಮರಣೆಯೇ ಭಗವಂತನನ್ನು ಸೇರುವ ಅತ್ಯಂತ ಸುಲಭ ಸಾಧನ ಎಂದು ಬೋಧಿಸಿದ್ದಾರೆ. ಭಗವಂತನ ಸಂಬಂಧವಾದ ಶ್ಲೋಕಗಳು, ಮಂತ್ರಗಳು, ಭಜನಾವಳಿ, ಗಾಯನ, ಹಾಡುಗಳು, ಭಕ್ತಿಗೀತೆಗಳೆಲ್ಲಾ ಪ್ರಾರ್ಥನೆಯೇ. ಪರ

ಮಾತ್ಮನನ್ನು ಉದ್ದೇಶಿಸಿ ಉಚ್ಚರಿಸಿದಾಗ ಹೊರಬಿದ್ದ ಅನೇಕ ಸ್ತೋತ್ರ ಪ್ರಕಾರಗಳೇ ಇವು.

ಪ್ರಾರ್ಥನೆಯ ಸ್ತೋತ್ರಗಳನ್ನು ಪರಿಶೀಲಿಸಿದರೆ ಕೆಲವು ಪರಮಾತ್ಮನ ಅನಂತನಾಮ ನಿರ್ದೇಶನ, ಅನಂತ ಮಹಿಮೆಗಳು ಮತ್ತು ಪರಮಾತ್ಮನ ಅನಂತ ಕಲ್ಯಾಣ ಗುಣಗಳನ್ನು ಒಳಗೊಂಡಿರುತ್ತವೆ. ಮತ್ತೂ ಕೆಲವು ಕಷ್ಟಗಳನ್ನು ತೋಡಿಕೊಂಡು ಪರಮಾತ್ಮನನ್ನ ಪರಿಹಾರ ಕೇಳುವ ಭಾವಗಳಿಂದ ಕೂಡಿದ್ದು ನಿವೇದನಾತ್ಮಕವಾಗಿರುತ್ತವೆ. ಇನ್ನೂ ಕೆಲವು ಪರಮಾತ್ಮನನ್ನ ಪ್ರಾಪಂಚಿಕ ಫಲಪ್ರಾಪ್ತಿಯ ಬಯಕೆಗಳನ್ನು ಒಳಗೊಂಡಿರುತ್ತವೆ ಒಟ್ಟಿನಲ್ಲಿ ಪ್ರಾರ್ಥನೆಯ ಪ್ರಮುಖ ಉದ್ದೇಶ ಆತ್ಮವಿಕಾಸದಿಂದ ಸತ್ಸಂಗ, ಸದ್ಭಾವ ಸದ್ಗ್ರಂಥ ವ್ಯಾಸಂಗಮಾಡಿ ಭಗವಂತನ ಸಾಕ್ಷಾತ್ಕಾರಕ್ಕಾಗಿ ತೀವ್ರ ಹಂಬಲದಿಂದ ಸಲ್ಲಿಸುವ ಪ್ರಾರ್ಥನೆ ಒಂದಾದರೆ, ಮತ್ತೊಂದು ಆರ್ಥಿಕ, ಮಾನಸಿಕ, ಸಾಂಸಾರಿಕ, ಕಷ್ಟ ಬಂದಾಗ ಸಂಪತ್ತು, ಮಕ್ಕಳು, ಪದವಿ, ಆರೋಗ್ಯ ಮುಂತಾದ ಲೌಕಿಕ ಪ್ರಯೋಜನಕ್ಕಾಗಿ ಸಲ್ಲಿಸುವ ಪ್ರಾರ್ಥನೆಯ್ಯಾಗಿರುತ್ತದೆ.

ಪ್ರಾರ್ಥನೆಯಿಂದ ಮಾನವನಿಗೆ ಎಲ್ಲಾ ಬಯಕೆಗಳೂ ಈಡೇರುತ್ತವೆ. ಶರೀರ ರಕ್ಷಣೆಗೆ ಆಹಾರ ಎಷ್ಟು ಪ್ರಾಮುಖ್ಯವೋ ಆತ್ಮದ ಬೆಳವಣಿಗೆಗೆ ಪ್ರಾರ್ಥನೆ ಅಷ್ಟೇ ಮುಖ್ಯ. ಮಾನವ ಜೀವನದಲ್ಲಿ ಬೇರೆ ಸಾಧನೆಯಿಂದ ಅಸಾಧ್ಯವಾದುದನ್ನು ಪ್ರಾರ್ಥನೆಯಿಂದ ಸಾಧಿಸಿಕೊಳ್ಳಬಹುದು. ಪ್ರಾರ್ಥನೆ ಜೀವನದ ಮಹಾತತ್ತ್ವ

ಸಾಮಾನ್ಯವಾಗಿ ಪ್ರಾರ್ಥನೆ ಮಾಡುವಾಗ ಫಲಗಳು ವ್ಯಕ್ತಿಯ ಜ್ಞಾನ ಸಂಸ್ಕಾರಗಳ ಹಿನ್ನಲೆಗೆ ಅನುಗುಣವಾಗಿರುತ್ತವೆ. ಪ್ರಾರ್ಥನೆಯಿಂದ ಲೌಕಿಕ ವಸ್ತು ಪ್ರಾಪ್ತಿಯೇ ಪರಮಧ್ಯೇಯವಾಗಬಾರದು. ಅದರಿಂದ ಜೀವನ ಸುಖವಾಗದು. ತಪ್ಪುದಾರಿಯೇ ನಿಜವಾದದ್ದು ಎಂಬ ಭ್ರಮೆಯಲ್ಲಿದ್ದಾನೆ ಮಾನವ. ಭಗವತ್ ಸಾಕ್ಷಾತ್ಕಾರವೇ ಪ್ರಾರ್ಥನೆಯ ಪರಮೋತ್ಕೃಷ್ಟ ಉದ್ದೇಶ ಎಂದು ಸಂತ ಸರ್ಪಭೂಷಣ ಶಿವಯೋಗಿಗಳು ವಿವೇಚಿಸಿದ್ದಾರೆ:

ಅವರವರಿಗವರ ಮನವೊಲಿದುದೇ ಬ್ರಹ್ಮ
ಸುವಿವೇಕಿಗಳಿಗಾತ್ಮ ತತ್ತ್ವವೇ ಬ್ರಹ್ಮ ॥ ಪಲ್ಲವಿ ॥
ಚೋರರಿಗೆ ಪರಪದಾರ್ಥಾಪಹೃತಿಯೇ ಬ್ರಹ್ಮ
ಜಾರರಿಗೆ ಮನಸಾರೆ ಸುರತವೇ ಬ್ರಹ್ಮ
ಶೂರರಿಗೆ ನಿಜಶತ್ರು ಸಂಹರಣವೇ ಬ್ರಹ್ಮ
ದಾರಿದ್ರರಿಂಗಶನವಸನವೇ ಬ್ರಹ್ಮ ॥ 1 ॥

ಬಲುಲೋಭಿಗಳಿಗೆ ಗಳಿಸಿರುವ ಧನವೇ ಬ್ರಹ್ಮ
ಖಲಜನರಿಗನ್ಯರಶ್ರೀಯವೇ ಬ್ರಹ್ಮ
ಬಲಿದ ಲೌಕಿಕರಿಗೆ ಸತಿಪುತ್ರರೇ ಬ್ರಹ್ಮ
ಛಲವ-ತರಿಗೆ ವಾಕ್ಯವಿಜಯವೇ ಬ್ರಹ್ಮ ॥ 2 ॥

ವಿತತ ಶಾಸ್ತ್ರಜ್ಞರಿಗೆ ಜನದ ಮೆಚ್ಚೇ ಬ್ರಹ್ಮ
ವ್ರತಶೀಲಪರರ್ಗೆ ಸತ್ಕರ್ಮವೇ ಬ್ರಹ್ಮ
ನತಭಕ್ತಿಯುತರ್ಗಿಷ್ಟವಹ ದೈವವೇ ಬ್ರಹ್ಮ
ಯತಿಗಳಿಗೆ ಕಳೆಬಿಂದುನಾದವೇ ಬ್ರಹ್ಮ ॥ 3 ॥

ವರಮುಮುಕ್ಷುಗಳಿಂಗೆ ತತ್ವಾರ್ಥವೇ ಬ್ರಹ್ಮ
ವರಿತರ್ಗೆ ಪೂರ್ಣ ಗುರುಸಿದ್ಧನೇ ಬ್ರಹ್ಮ
ಪರವಸ್ತುವಾವೆಂಬಭಯ ಮುಖದ ಮನವರತ
ಪರವಶರ್ಗೆ ತಾವೆ ತಾವಾದುದೇ ಬ್ರಹ್ಮ ॥ 4 ॥

ಹೀಗೆ ಇಚ್ಛಾವಿಡಂಬನೆಯನ್ನು ಮಾಡಿ ನಿಜವಾದ ಪ್ರಾರ್ಥನೆ ಯಾವುದು ಎಂಬುದನ್ನು ತಿಳಿಸಿದ್ದಾರೆ.

ಕೃತಯುಗದಿಂದ ಕಲಿಯುಗದವರೆವಿಗೆ ಮಾನವನ ದೈಹಿಕ ಮಾನಸಿಕ ಆಧ್ಯಾತ್ಮಿಕ ಶಕ್ತಿ ಕ್ರಮ ಕ್ರಮವಾಗಿ ಕುಂದುತ್ತಾ ಬಂದಿದೆ. ನಾವು ಹಿಂದಿನವರಂತೆ ಉಗ್ರ ತಪಸ್ಸು ಧ್ಯಾನ ಕಠಿಣಸಾಧನೆಮಾಡಿ ಪರಮಾತ್ಮನನ್ನು ಕಾಣಲಾರೆವು. ಆದರೆ ಪರಮಾತ್ಮನನ್ನು ಕಲಿಯುಗದಲ್ಲಿ ಕಾಣಲು ನಾಮಸ್ಮರಣೆಯೇ ಮುಖ್ಯ ಸಾಧನೆ. ಆದನ್ನೇ ಬಸವಣ್ಣನವರು:

ಕರಿಯಂಜುವುದಂಕುಶಕ್ಕಯ್ಯಾ;
ಗಿರಿಯಂಜುವುದು ಕುಲಿಶಕ್ಕಯ್ಯಾ;
ತಮಂಧವಂಜುವುದು ಜ್ಯೋತಿಗಯ್ಯಾ;
ಕಾನನವಂಜುವುದು ಬೇಗೆಗಯ್ಯಾ;

ಪಂಚಮಹಾಪಾತಕವಂಜುವುದು,
ಕೂಡಲ ಸಂಗನ ನಾಮಕ್ಕಯ್ಯಾ—
ಎಂದಿದ್ದಾರೆ.

ಮತ್ತೊಬ್ಬ ಸಂತ:—

ದಿನಮಣಿ ತಾನಿರೆ ತಿಮಿರದ ಭಯವೇ
ವರಸಂಜೀವನದೌಷಧವಿರುತ್ತಿರೆ ಮರಣದ ಭಯವೇ
ಪರುಷದಖಣಿತಮ್ಮನೆಯೊಳಗಿರುತ್ತಿರೆಬಡತನಕಂಜುವರೇ
ಶರಣರ ನಿಧಿಯೆಂದೆನಿಸುವ ಪಂಚಾಕ್ಷರಿ
ಜಿಹ್ವಾಗ್ರದೊಳಿರುತಿರೆ ದುರಿತಕ್ಕಂಜುವರೇ
ಬಡಮನವೇ ನಂಬಿರು ಭಯಬೇಡ—
ಎಂದಿದ್ದಾರೆ.

ದಾಸವರೇಣ್ಯರಾದ ಪುರಂದರದಾಸರು:—

ಗಂಗಾದಿ ಸಕಲ ತೀರ್ಥಂಗಳಿಗಧಿಕ
ಹಿಂಗದೆ ನೆನೆವರ್ಗೆ ಮಂಗಳ ಫಲವೀವ ಶ್ರೀ ಹರಿಯ
ನಾಮ ॥ ಪಲ್ಲವಿ ॥

ಸ್ನಾನಜಪಂಗಳ ಸಾಧಿಸಿದವನಿಗೆ
ಜ್ಞಾನವರಿಯದ ಮೂಢಾತ್ಮನಿಗೆ ॥
ವೇದ ಶಾಸ್ತ್ರಂಗಳನೋದದ ಮನುಜಗೆ
ಸಾಧನ ನಾಲ್ಕು ಸಾಧಿಸಿದವನಿಗೆ ॥
ಕಾಲನ ದೂತರ ತರಿದು ಬಿಸುಡುವುದು
ಲೋಲ-ಶ್ರೀ ಪುರಂದರವಿಠಲನ ಒಲುಮೆಗೆ
॥ ಶ್ರೀಹರಿಯನಾಮ ॥

ಎಂದಿದ್ದಾರೆ. ಆದ್ದರಿಂದ ಪರಮಾತ್ಮನ ನಾಮಸ್ಮರಣೆ ಸಕಲ ಪಾಪ ಪರಿಹಾರ ಮಾಡಿ ದೇವ ದೇವನ ಕರುಣೆಗೆ ಯೋಗ್ಯನನ್ನಾಗಿ ಮಾಡುತ್ತದೆ. ಭಕ್ತಿ, ಶ್ರದ್ಧೆ ನಿರ್ಮಲ ಹೃದಯದಿಂದ ನಿಷ್ಕಾಮವಾಗಿ ಸಲ್ಲಿಸುವ ಪ್ರಾರ್ಥನೆಯಿಂದ ಉತ್ತಮ ಫಲ ಪ್ರಾಪ್ತಿಯಾಗುವುದು. ಭಕ್ತಿಪುಂಗವನನ್ನು ಉದಾತ್ತನನ್ನಾಗಿಸುವ ಮಹಾ ತತ್ತ್ವವೇ ಪ್ರಾರ್ಥನೆ.

(ಸಂಗ್ರಹಕಾರ : ಕೆ.ಜಿ. ನಾಗರಾಜಪ್ಪ ಎಂ.ಎ.)



# ನಮಗಾಗಲಿ !

ಚಿನ್ನ ಸೇವೆಗೆ ಚೆಲುವ ಕೊಡುಗೆಯು
ಹರಿದು ಹಾಕಿದೆ ಸ್ವಾರ್ಥ ಬಂಧನ
ತನ್ನ ತನುವಿನ ಉಳಿವೆಗೋಸುಗ
ನಿತ್ಯ ನಡೆದಿದೆ ಸತ್ಯ ಚಿಂತನ ;
ಮಾಡಿ ಮಾಡಿ ಧನ್ಯರಾದೆವು.
ಕೂಡಿ ಕೂಡಿ ಪುಣ್ಯರಾದೆವು
ಶಾಂತಿರಸವದು ಮಿಡಿವ ನೊಗದಲಿ
ತೃಪ್ತಿಭಾವವು ತೇಲಿದೆ;
ಪ್ರೀತಿ ನೂತನ ರೀತಿ ಪಾವನ
ಹೊತ್ತು ಬಾಳಿದು ನಲಿದಿದೆ.
ಸ್ತುತ್ಯ ಸಾಧನ ಜೀವನ
ಸತ್ಯ ಜ್ಯೋತಿ ಚಿರಂತನ !
ಉಸಿರು ಮೈಯೊಳು ಹೆಸರು ಬಾಯೊಳು
ಇರುವ ಪರಿವಿಗೆ ನಲಿಯಲಿ;
ಬಸರಿ ಬನದೊಳು ಹೃದಯ ಹೂವಿದು.
ಅರಳಿ ಪರಿಮಳ ಬೀರಲಿ
ಈ ಹೊಚ್ಚ ಹೊಸ ಹೊಲಬಿನಲಿ
ಈ ಅಚ್ಚು ಮೆಚ್ಚಿನ ಬಗೆಯಲಿ
ನಮ್ಮ ಸಾಧನ ಸಾಗಲಿ ;
ದಿವ್ಯಪಥ ನಮಗಾಗಲಿ !

—ಸೂರ್ಯಸಿಂಹಾಸನಾಧೀಶ್ವರ ಶ್ರೀ ಜ. ಚ. ನಿ.
ಶ್ರೀಶೈಲ ಸಂಸ್ಥಾನ, ಗೂಳೂರು.

# ಆರುಣಿ

ಅಯೋಧ ಧೌಮ್ಯರ ಗುರುಕುಲದಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದವರಲ್ಲಿ ಆರುಣಿಯೂ ಒಬ್ಬ ಶಿಷ್ಯ. ಆತ ಗುರುಗಳಿಗೆ ಬಹಳವಿಧೇಯನಾಗಿದ್ದುಕೊಂಡು ಅವರ ಸೇವೆ ನಡೆಸುತ್ತಿದ್ದ.

ಒಂದು ದಿನ ಆಯೋಧಧೌಮ್ಯರು ಆರುಣಿಯನ್ನು ಕರೆದರು.

''ಗುರುದೇವ ಅಪ್ಪಣೆ ಏನು ?"

''ಆರುಣಿ, ನನ್ನ ಗದ್ದೆಯ ಏರಿಯಲ್ಲಿ ಒಂದು ಬಿರುಕುಬಿಟ್ಟದೆ, ಅದನ್ನು ಸರಿಪಡಿಸಿ ಬರುವೆಯಾ ?"

''ಅಪ್ಪಣೆಯಂತಾಗಲಿ ಗುರುದೇವ"

''ಸರಿ ಹೋಗಿಬಾ"

ಆರುಣಿ ಗದ್ದೆಯ ಕಡೆ ಹೋದ. ಬಿರುಕುಬಿಟ್ಟದ್ದ ಸ್ಥಳವನ್ನು ಕಂಡುಹಿಡಿದ. ಅದನ್ನು ಸರಿಪಡಿಸಲು ಸರ್ವಪ್ರಯತ್ನವನ್ನೂ ಮಾಡಿನೋಡಿದ. ಆದರೆ ಅವನ ಪ್ರಯತ್ನವೆಲ್ಲಾ ವ್ಯರ್ಥವಾಯಿತು.

ಆರುಣಿ ಊಟ ನಿದ್ರೆಗಳನ್ನೆಲ್ಲಾ ಮರೆತ. ಬಿರುಕು ಮುಚ್ಚಲು ಹಗಲು ರಾತ್ರಿ ಕಷ್ಟ ಪಟ್ಟ. ಪ್ರಯತ್ನದಲ್ಲಿ ಜಯಶೀಲನಾಗದೆ ಗುರುಕುಲಕ್ಕೆ ಹಿಂದಿರುಗಕೂಡದೆಂದು ದೃಢ ಸಂಕಲ್ಪಮಾಡಿದ.

ಏನುಮಾಡಿದರೂ ಆ ದೊಡ್ಡ ರಂಧ್ರವನ್ನು ಮುಚ್ಚುವುದು ಅಸಾಧ್ಯವೇ ಆಯಿತು.

''ಗುರುವೇ, ನಿನ್ನ ಸೇವೆಮಾಡಿ ನಿನ್ನನ್ನು ಒಲಿಸಿ ಜ್ಞಾನಾರ್ಜನೆಮಾಡುವ ಪುಣ್ಯ ನನ್ನ ಪಾಲಿಗಿಲ್ಲವೆ? ಈ ಸಾಮಾನ್ಯ ಬಿರುಕು ಮುಚ್ಚುವಷ್ಟು ಸಾಮರ್ಥ್ಯ ನನಗಿಲ್ಲವಾಯಿತಲ್ಲಾ! ಏನು ಮಾಡುವುದು" ಎಂದು ಚಿಂತಿಸುತ್ತಿರುವಷ್ಟರಲ್ಲಿಯೇ ಆರುಣಿಗೆ ಒಂದು ಉಪಾಯ ಹೊಳೆಯಿತು : ''ಇರಲಿ ಗುರುದೇವನಿಗಾಗಿ ನಾನು ಪ್ರಾಣ ನೀಗಿದರೂ ಚಿಂತೆಯಿಲ್ಲ. ಇದೀಗ ಈ ಬಿರುಕಿಗೆ ನನ್ನ ತಲೆಯನ್ನಿಟ್ಟು ನೀರು ನುಗ್ಗದಂತೆ ತಡೆಯುವೆನು. ಇದು ನಿಲ್ಲುವವರೆಗೆ ನನಗೆ ಊಟ ಬೇಡ. ಬೇರೇನೂ ಬೇಡ."

ಆರುಣಿ ಬಿರುಕಿನಲ್ಲಿ ತಲೆಯಿಟ್ಟು ಮುಚ್ಚಿದನು ನೀರು ನುಗ್ಗುವುದು ನಿಂತುಹೋಯಿತು. ಅಪಾರವಾದ ಸಂತಸವಾಯಿತು ಅವನಿಗೆ.

ಹೀಗೆಯೇ ಹಲವಾರು ದಿವಸಗಳುಳಿದವು. ಅಯೊಧಧೌಮ್ಯರಿಗೆ ಶಿಷ್ಯನ ನೆನಪೇ ಆಗಲಿಲ್ಲ. ಒಂದು ದಿನ ಆರುಣಿಯನ್ನು ನೆನೆಸಿಕೊಂಡು ಶಿಷ್ಯರನ್ನು,

''ಆರುಣಿ ಎಲ್ಲಿ" ಎಂದರು.

''ಕೆಲದಿನಗಳ ಹಿಂದೆ ತಾವೇ ಆತನನ್ನು ಗದ್ದೆಯ ಬಿರುಕು ಮುಚ್ಚಲು ಕಳುಹಿಸಿದಿರಲ್ಲಾ" — ಎಂದರು ಶಿಷ್ಯರು.

''ಹೌದು ಹೌದು" ಎಂದು ಗುರು ಅವನಿಗಾಗಿ ಪ್ರಲಾಪಿಸುತ್ತ ಗದ್ದೆಯ ಕಡೆ ಬಂದರು.

''ಆರುಣಿ, ಎಲ್ಲಿರುವೆ ?''

''ಇದೋ ಗುರುದೇವ ಇಲ್ಲಿರುವೆ" ಆರುಣಿಯಿಂದ ಉತ್ತರ ಬಂತು. ಗುರುವು ಶಿಷ್ಯನ ಸೇವಾ ಪ್ರಜ್ಞೆಯನ್ನು ಗಮನಿಸಿ ಸಂತಸದಿಂದ ಹಿಗ್ಗಿದರು.

''ಎದ್ದು ಬಾ ಆರುಣಿ, ನಿನ್ನಂತಹ ವಿಧೇಯ ಶಿಷ್ಯರನ್ನು ಪಡೆದ ಗುರು ಧನ್ಯನೇ ಸರಿ. ನಿನ್ನ ಗುರು ಸೇವಾಪರಾಯಣತೆಗಾಗಿ ನಾನು ಪ್ರಸನ್ನನಾಗಿರುವೆ. ನಿನಗೆ ಎಲ್ಲ ವೇದಗಳ ಜ್ಞಾನ ಸಂಪತ್ತು ಸಿದ್ಧಿಸಲಿ. ಇನ್ನು ಮೇಲೆ ನಿನಗೆ ''ಉದ್ದಾಲಕ'' ಎಂಬ ಹೆಸರಾಗಲಿ (ನೀರನ್ನು ತಡೆಯುವ ಹಾಗೂ ಬಿಡುವ ಶಕ್ತಿಯುಳ್ಳವನು)."

ಹೀಗೆ ಗುರ್ವನುಗ್ರಹದಿಂದ ಆರುಣಿ ಉದ್ದಾಲಕನೆಂಬ ಹೆಸರು ಪಡೆದು ಮಹರ್ಷಿಯಾಗಿ ಕೀರ್ತಿ ಪಡೆದ.

—ಮುತ್ತು

## ನೀನದುವೆ ! ತತ್ವಮಸಿ

ಶ್ರೀ ವಿ|| ಎಂ. ಜಿ. ನಂಜುಂಡಾರಾಧ್ಯ

(ಛಾಂದೋಗ್ಯ ಉಪನಿಷತ್ತಿನ ಆರನೆಯ ಅಧ್ಯಾಯದ ಭಾವಾನುವಾದ)

### ಏ ಕ ವಿ ಜ್ಞಾ ನ

"ಶ್ವೇತಕೇತು" ಎಂಬ ಮಗನಿರ್ದನಾರುಣಿಗೆ
ಬಳಿಗೆ ಕರೆದಾರುಣಿಯು ಪೇಳಿದಂ ಸುತಗೊರ್ವೆ:
"ಗುರುಕುಲಕೆ ನೀಂ ತೆರಳಿ ಬ್ರಹ್ಮಚರ್ಯೆಯೊಳಿರ್ದು
ಸೋಮ್ಯವೇದಾಧ್ಯಯನಮೇಕಾಗ್ರದಿಂದೆಸಗು;
ಇರಲಿಲ್ಲವೆಂದಿಗುಂ ನಮ್ಮ ಕುಲದೊಳಗಾರು-
ಮಧ್ಯಯನಮೆಸಗದೆಯೆ ಬ್ರಹ್ಮಬಂಧು(x)ಗಳಾಗಿ! "
ಪನ್ನೆರಡನೆಯ ವರ್ಷಕವನ್ನೆದಿ ಗುರುಕುಲಕೆ
ಇಪ್ಪತ್ತು ನಾಲ್ಕವರ ಮಧ್ಯಯನಮಿರದೆಸಗಿ,
ವೇದವೇದಾಂಗಗಳ ಪಾರಮಂ ಕಂಡವನು
"ತಾಂ ಪಿರಿಯ ಪಂಡಿತಂ" ಎಂಬ ಗರ್ವವ ತಳೆದು
ಬಂದ ಸುತನಂ ಕಂಡು ತಂದೆ ಪೇಳಿದನಿಂತು
"ಸೋಮ್ಯ, ಬ್ರಹ್ಮಪ್ರಾಜ್ಞನೆಂದಭಿಮಾನಿಯಾಗಿರ್ಪೆ,
ಆದರುಂ ಪಡೆದಿಪೆಯ ಮುಖ್ಯೋಪದೇಶಮಂ?
ಆವ ಉಪದೇಶದಿಂ ಕೇಳದುದು ಕೇಳುವುದೊ,
ನೀನದಂ ಗುರುಗಳಿಂ ಕೇಳಿ ತಿಳಿದಿರ್ಪೆಯೇಂ ? "
"ಉಪದೇಶವಾವುದದು ?" ಎಂದು ಸುತ ಕೇಳಿದನ್.
ಯಾವ ತೆರದಿಂ ಸೋಮ್ಯ, ಮಣ್ಣಹೆಂಟೆಯ ತಿಳಿಯೆ
ಮೃಣ್ಮಯಾತ್ಮಕವಸ್ತುವೆಲ್ಲವುಂ ತಿಳಿಯುವುವೊ
ಮೃದ್ವಿಕಾರಗಳೆಂಬುವೆಲ್ಲ ಬರಿಮಾತುಗಳು
ಪೆಸರುಗಳು ಕೇವಲಂ, ಮಣ್ಣೆಂಬುದೊಂದೆ ನಿಜ!
ಲೋಹಮಣಿಯರಿವಾಗಲಾವಪರಿಯಿಂ ಚಿನ್ನ,
ಲೋಹಮಯ ವಸ್ತುಗಳು ತಾನಾಗಿ ತಿಳಿಯುವುವೊ;
ಲೋಹವಸ್ತುಗಳೆಂಬುವೆಲ್ಲ ಬರಿಮಾತುಗಳು,
ಪೆಸರುಗಳು ಕೇವಲಂ, ಲೋಹವೆಂಬುದೆ ಸತ್ಯ!
ಉಗುರುಗತ್ತಿ(c)ಯು ತಿಳಿಯಲಾವಪರಿಯಿಂ ಸೋಮ್ಯ!
ಉಕ್ಕಿಂದೆ ರಚಿತವಾದವುಮೆಲ್ಲ ತಿಳಿಯುವುವೊ;
ಉಕ್ಕಿನಾಯುಧಮೆಂಬುವೆಲ್ಲ ಬರಿ ಮಾತುಗಳು
ಪೆಸರುಗಳು ಕೇವಲಂ; ಉಕ್ಕೆಂಬುದೊಂದೆ ನಿಜ!
ಆತೆರದೊಳುಪದೇಶಮಿರ್ದಪುದು: ಎಲೆ ಸೋಮ್ಯ! "
ಎಂದ, ತಂದೆಯ ನುಡಿಯ ಕೇಳಿ ಮಗ ಕೇಳಿದಂ.
"ಉಪದೇಶಮಿದು ನನ್ನ ಗುರುಗಳರಿಯರು, ದಿಟಂ !
ಇಲ್ಲದೊಡಮವರೆನಗಮೊರೆಯದಿರುತಿರ್ದರೇಂ ?
ಅದರಿಂದೆ ನೀತಿ ನನಗೊರೆಯಿರೆಂ"ದಡಿಗೆರಗಿ
ಬೇಡಿದೊಡ 'ಮಾಗ'ಲೆಂದಾರುಣಿಯುಸೊಪ್ಪಿದನ್.

(x) ಬ್ರಹ್ಮಬಂಧು—ಬ್ರಹ್ಮಜ್ಞಾನಾದಿಗಳಿಲ್ಲದೆ ಹೆಸರಿಗೆ ಮಾತ್ರ ಬ್ರಾಹ್ಮಣನಾಗಿರುವವನು.
(c) ಉಗುರು ತೆಗೆಯುವ ಉಕ್ಕಿನ ಚೂರಿ.



ಶ್ರೀ ಶ್ರೀ ಶ್ರೀ ಶಿವಕುಮಾರಸ್ವಾಮಿಗಳೊಡನೆ
ಶ್ರೀಮನ್ಮಹಾರಾಜ ಶ್ರೀ ಜಯಚಾಮರಾಜೇಂದ್ರ ಒಡೆಯರ್‌ರವರು



ಬಾಗಲಕೋಟೆ ಬಸವೇಶ್ವರ ಕಾಲೇಜಿನ ಸಂಸ್ಥಾಪಕರೂ, ಸರ್ವಧರ್ಮ ಸಮ್ಮೇಳನದ ಸಂಚಾಲಕರೂ. ನವಿಲುಗುಂದ ಗವೀಮಠದ ಅಧ್ಯಕ್ಷರೂ ಆದ ಶ್ರೀ ನಿ. ಪ್ರ. ಬಸವಲಿಂಗಸ್ವಾಮಿಗಳು.

# ಭಾವನಾತ್ಮಕ ಐಕ್ಯ

ಲೇಖಕರು :

ರಂ. ಶ್ರೀ. ಮುಗಳಿ

ವಾಸ್ತವವಾಗಿ ಅನೇಕವಾಗಿದ್ದುದು ಭಾವನೆಯ ಬಲದಿಂದ ಏಕವೆಂದಾದರೆ ಅದು ಭಾವನಾತ್ಮಕ ಐಕ್ಯ. ಅನೇಕವೆಂಬುದು ಯಾವಾಗಲೂ ಇರುವ, ತಪ್ಪಿಸಲು ಬಾರದ ವಸ್ತುಸ್ಥಿತಿ. ಏಕವೆಂಬ ಭಾವನೆ ಈ ವಸ್ತುಸ್ಥಿತಿಯನ್ನು ಅಲ್ಲಗಳೆಯದೆ ತನ್ನ ತೀವ್ರತೆಯಿಂದ ಅನೇಕದ ಅಂತರಂಗವನ್ನು ಸೆರೆಹಿಡಿಯುತ್ತದೆ. ಹಲವಾದರೂ ನಾವು ಒಂದು ಎಂಬ ಒಂದು ಸ್ವರವು ಎಲ್ಲ ಹೃದಯಗಳ ತಂತಿಯಿಂದ ಹುಟ್ಟುತ್ತದೆ. ಆದರೆ ಭಾವನೆಯ ತೀವ್ರತೆ ಚಿರಕಾಲಿಕವಾಗಿ ಉಳಿಯುವುದು ಕಷ್ಟ. ಯಾವುದೋ ಸಂಕಟಸಮಯದಲ್ಲಿ ಇಲ್ಲವೇ ಸಂತೋಷ ಸಂದರ್ಭದಲ್ಲಿ ಅದು ಉಕ್ಕೇರುವ ಸಮುದ್ರದಂತೆ ತಲೆದೋರಿ ಮತ್ತೆ ಕೆಳಗಿಳಿಯಬಹುದು. ಕೆಲವು ಸಲ ಒಂದು ತುದಿಯಿಂದ ಅದು ಇನ್ನೊಂದು ತುದಿಗೆ ಹೋಗಬಹುದು. ಅಂದರೆ ಏಕತ್ವದ ತುತ್ತತುದಿಯನ್ನು ಮುಟ್ಟಿದ ಭಾವನೆ ಅಷ್ಟೇ ತೀವ್ರವಾಗಿ ಅನೇಕತ್ವದ ಇನ್ನೊಂದು ತುದಿಯನ್ನು ಮುಟ್ಟಬಹುದು.

ಭಾರತೀಯ ಜೀವನವನ್ನು ನೋಡಿದರೆ ಈ ಮಾತಿನ ಸತ್ಯ ತಿಳಿಯುತ್ತದೆ. ಭೌಗೋಲಿಕವಾಗಿ ಭಾರತವು ಬಹುವಿಸ್ತಾರವಾದ ಖಂಡಪ್ರಾಯದೇಶ. ಮೂರು ಕಡೆಗೆ ಸಮುದ್ರ, ಒಂದು ಕಡೆಗೆ ಪರ್ವತವಿದ್ದ ಈ ದೇಶ ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ ಪರಸ್ಪರ ವಿರುದ್ಧವಾದ ಮತ್ತು ಅನೇಕ ವಿಧವಾದ ಹವಾಮಾನ ಮತ್ತು ಪ್ರಾದೇಶಿಕ ಲಕ್ಷಣಗಳಿಂದ ಕೂಡಿರುತ್ತದೆ. ಅದರಿಂದ ಜನಜೀವನದಲ್ಲಿ ಹೊಂದಿಕೊಳ್ಳಲಾರದಷ್ಟು ವಿವಿಧತೆ ಎದ್ದು ಕಾಣುತ್ತದೆ. ಐತಿಹಾಸಿಕವಾಗಿ ಅನೇಕ ಜನಾಂಗಗಳು, ರಾಜ್ಯಸಾಮ್ರಾಜ್ಯಗಳು ಭಾರತೀಯ ರಂಗಮಂಚದಮೇಲೆ ಸುಳಿದಾಡಿ ಒಂದನ್ನೊಂದು ನುಂಗಿರುತ್ತವೆ. ಹೊರಗಿನಿಂದ ಬಂದ ಪರಕೀಯರ ಅಕ್ರಮಣಕ್ಕೆ ಒಳಗಾಗಿ ಅವರಿಗೆ ದೇಶವನ್ನು ಸುಲಿಯಲು ಅವಕಾಶಮಾಡಿಕೊಟ್ಟಿರುತ್ತವೆ. ಅನೇಕತೆಯ ವಸ್ತುಸ್ಥಿತಿಯಿಂದ ಎಷ್ಟು ನಷ್ಟವಾಗಬೇಕೋ ಅಷ್ಟೆಲ್ಲ ಇತಿಹಾಸಕಾಲದಲ್ಲಿ :ಆಗಿದೆ. ಅದರ ಕಚ್ಚುಕಲೆಗಳು ಇನ್ನೂ ಭಾರತೀಯ ಮುಖದಲ್ಲಿ ಎದ್ದು ಕಾಣುತ್ತದೆ. ಸುದೈವದಿಂದ ಧಾರ್ಮಿಕ ಆಧ್ಯಾತ್ಮಿಕ ಪರಂಪರೆ ಪರಿಮಿತವಾದ ರೀತಿಯಲ್ಲಿ ಆದರೂ ಒಂದು ಬಗೆಯ ಏಕತೆಯನ್ನು ಕಾಪಾಡಿಕೊಂಡು ಬರಲು ಹವಣಿಸಿತು. ಭಾರತೀಯ ವಾಙ್ಮಯದಲ್ಲಿಯೂ ಏಕತೆಯ ಅಂಶಗಳಿರುತ್ತವೆ. ಆದರೆ ರಾಜಕೀಯ ಸಾಮಾಜಿಕ ಜೀವನದಲ್ಲಿ ಭೇದವೇ ಸ್ಥಾಯಿಭಾವನಾಗಿ ಬಿಟ್ಟಿದೆ. ಕಳೆದ ನಲ್ವತ್ತು ವರ್ಷಗಳಲ್ಲಿ ಸ್ವಾತಂತ್ರ್ಯ ಸಂಗ್ರಾಮದ ಕಾಲ; ಸ್ವಾತಂತ್ರ್ಯೋತ್ತರ ಕಾಲ ಎಂದು ವಿಂಗಡಿಸಿ ನೋಡಿದರೆ ಮೊದಲನೆಯ ಕಾಲದಲ್ಲಿ ತಲೆದೋರಿದ ಐಕ್ಯಭಾವವು ಎರಡನೆಯ ಕಾಲದಲ್ಲಿ ವಿರಳವಾದಂತೆ ಕಾಣುತ್ತದೆ. ಏಕೆಂದರೆಮೊದಲನೆ ಕಾಲದಲ್ಲಿ ಐಕ್ಯವುಸ್ವಾತಂತ್ರ್ಯ ಸಂಪಾದನೆಯೆಂಬ ಧ್ಯೇಯದಿಂದ ಪ್ರೇರಿತವಾಗಿತ್ತು. ಅದು ಸಂಕಟ ಸಮಯದಲ್ಲಿಯ ಭಾವನಾತ್ಮಕ ಐಕ್ಯವಾಗಿತ್ತು. ಸ್ವಾತಂತ್ರ್ಯ ಬಂದ ಮೇಲೆ ಅದರ ಉಕ್ಕು ಇಳಿಯಿತು ........ಭಾವನಾತ್ಮಕ ಐಕ್ಯವು ಕೇವಲ ಭಾವನಾತ್ಮಕವಾದರೆ ಸಾಲದು, ಅದು ವಿಚಾರಾತ್ಮಕವಾಗಬೇಕು. ಸರ್ವಂಕಷವಾದ ಸಮಗ್ರೀಕರಣವಾಗಬೇಕು. ಅಂದರೇನೇ ಅದು ಚಿರಸ್ಥಾಯಿಯಾದ ರಾಷ್ಟ್ರೀಯ ಐಕ್ಯಕ್ಕೆದಾರಿಮಾಡಿಕೊಡುತ್ತದೆ. Integration ಅಂದರೆ ಸಮಗ್ರೀಕರಣ. ಇದು Disintegrating elements ಅಂದರೆ ಬಿಡಿಬಿಡಿಯಾಗಿ ಒಡೆದು ಹಾಕುವ ಅಂಶಗಳು ಪ್ರಬಲವಾಗಿದ್ದಲ್ಲಿ ಹೆಚ್ಚು ಅವಶ್ಯವಾಗಿರುತ್ತದೆ. ಇದು ಬರೀ ಅನೇಕದಲ್ಲಿ ಏಕತೆಯ ನು

ಸಾಧಿಸುವುದಲ್ಲ. ಅನೇಕದಿಂದ ಉಂಟಾದ, ಉಂಟಾಗ ಬಹುದಾದ ಭೇದಬೀಜಗಳನ್ನು ನಷ್ಟಗೊಳಿಸಿ ಅಭೇದ ವನ್ನು ಭಾರತೀಯ ಜೀವನ ದರ್ಶನವನ್ನಾಗಿ ಮಾಡುವ ಮಹಾಕಾರ್ಯ. ಇದೊಂದು ಸಾಂಸ್ಕೃತಿಕ ತಪಶ್ಚರ್ಯೆ ಈ ತಪಶ್ಚರ್ಯೆ ಬಹುಕಾಲ ನಡೆಯಬೇಕು. ಸ್ವಲ್ಪ ಜನರಾದರೂ ಇದನ್ನು ಸರಿಯಾಗಿ ಅರಿತುಕೊಂಡು ಇದ ರಲ್ಲಿ ತೊಡಗಿದವರಾಗಬೇಕು. ಅಂದರೆ ಇಂದಿನ ಕನಸು ನಾಳಿನ ನನಸು ಆದೀತು.

ಭಾವನಾತ್ಮಕ ಐಕ್ಯ ವಿಚಾರಾತ್ಮಕವಾಗಬೇಕಾ ದರೆ ಐಕ್ಯದ ಸಾಧ್ಯತೆ ಮತ್ತು ಮಹತ್ವ ಬುದ್ಧಿಗೆ ಒಪ್ಪಿಗೆ ಯಾಗಬೇಕು, ಹಾಗೂ ವೈವಿಧ್ಯಪೂರ್ಣ ಭಾರತೀಯ ಸಾಹಿತ್ಯ ಸಂಸ್ಕೃತಿಗಳ ಜ್ಞಾನವು ಹೆಚ್ಚುತ್ತ ಹೋಗ ಬೇಕು. ಆಡಳಿತದಿಂದ ಘಟನೆಯಿಂದ ಒಂದಾದ ಈ ರಾಷ್ಟ್ರ ತನ್ನ ಸುರಕ್ಷಿತತೆಗಾಗಿ, ಪ್ರಗತಿಗಾಗಿ, ಶಾಂತಿ ಗಾಗಿ ಐಕ್ಯವನ್ನು ಕಾಪಾಡಿಕೊಂಡು ಹೋಗುವುದರ ಅಗತ್ಯವನ್ನು ತಿಳಿದುಕೊಳ್ಳಬೇಕು. ಮತ ಭೇದ ಗಳನ್ನು ವ್ಯಕ್ತಮಾಡುವ ಸ್ವಾತಂತ್ರ್ಯವನ್ನು ಕಳೆದು ಕೊಳ್ಳದೆ ಪ್ರಜಾಪ್ರಭುತ್ವವು ಹಾಕಿಕೊಟ್ಟ ಮಿತಿಮರ್ಯಾ ದೆಗಳನ್ನು ಅರಿತುಕೊಳ್ಳಬೇಕು. ತನ್ನದೇ ಸತ್ಯವೆಂಬ ಹಟ, ಆ ಹಟಸಾಧನೆಗೆ ಸಲ್ಲದ ಆತ್ಮಕ್ಲೇಶ ಮತ್ತು ಹಿಂಸಾಚಾರ ಇವು ರಾಷ್ಟ್ರವನ್ನು ದುರ್ಬಲಗೊಳಿಸುತ್ತವೆ. ಬುದ್ಧಿಗೆ ಈ ವಿಚಾರಗಳು ಮನವರಿಕೆಯಾದರೆ ಅವು ಆಚರಣೆಯಲ್ಲಿ ಬರಬೇಕು. ಹೀಗೆ ಭಾವನೆ, ವಿಚಾರ, ಆಚಾರ ಅಥವಾ ಸಂಕಲ್ಪ ಈ ಮೂರರ ಮುಪ್ಪುರಿಯಲ್ಲಿ ಸಮಗ್ರೀಕರಣವಾದರೆ ಭಾರತೀಯರ ಐಕ್ಯ ಸೂತ್ರವು ದೊರೆಯುತ್ತದೆ.



# ವಾಲ್ಮೀಕಿಯ ವರವಾಣಿ

ಜೀವನೆಂಬುದು ಸತ್ಯ. ಎಲ್ಲ ಧರ್ಮಗಳೂ ಸತ್ಯವನ್ನೇ ಅರಸುತ್ತವೆ. ಎಲ್ಲವೂ ಸತ್ಯದಿಂದ ಮೂಡುತ್ತದೆ ಸತ್ಯಕ್ಕಿಂತಲೂ ಶ್ರೇಷ್ಠವಾದುದಿಲ್ಲ. ಕಾಣಿಕೆ, ಯಜ್ಞ, ತಪಸ್ಸು, ವೇದಗಳು ಇವೆಲ್ಲಾ ಸತ್ಯದ ತಳಹದಿಯ ಮೇಲೆ ನಿಂತಿವೆ. ಆದ್ದರಿಂದ ನೀನು ಸತ್ಯವನ್ನೇ ಹಿಂಬಾಲಿಸು.

— ವಾಲ್ಮೀಕಿ

o o • o o o

ನಿನ್ನ ಎಲ್ಲ ಕರ್ಮಗಳೂ ಧರ್ಮದ ಕಡೆಗೆ ಸಮೃದ್ಧಿಯ ಹಾಗೂ ಸಂತೋಷ ದೆಡೆಗೆ ಬಾಗಿರಲಿ. ನೀನು ಮಾಡುವುದೆಲ್ಲಾ ಧರ್ಮದ ನಿಯಮಗಳಿಗೆ ಬದ್ಧ ವಾಗಿರಲಿ.

— ವಾಲ್ಮೀಕಿ

o o o o o

ಕ್ಷಮೆಯೇ ಸ್ತ್ರೀಪುರುಷರೆಲ್ಲರ ಆಭರಣ. ಕ್ಷಮೆಯೇ ದಾನ, ಸತ್ಯ, ಯಜ್ಞ, ಪ್ರಸಿದ್ಧಿ ಮುಂತಾದವು. ಈ ಸೃಷ್ಟಿಯೆಲ್ಲಾ ಈ ಶಾಸನವನ್ನೇ ಅವಲಂಬಿಸಿದೆ.

— ವಾಲ್ಮೀಕಿ

o o o o o o

ಕೊಡಲಿಯಿಂದ ಮಾವಿನಮರವನ್ನುರುಳಿಸಿ ಅದರ ಸ್ಥಳದಲ್ಲಿ ಬೇವಿನ ಗಿಡ ವನ್ನು ನೆಟ್ಟು ಅದಕ್ಕೆ ಹಾಲನ್ನೆರೆದು ಅದರಿಂದ ಸುಮಧುರ ರುಚಿಯ ಮಾವಿನ ಹಣ್ಣನ್ನು ಪಡೆಯಲಾರೆ.

— ವಾಲ್ಮೀಕಿ

# ಅಕ್ಕನ ವಚನಗಳಲ್ಲಿ ಅಲಂಕಾರ

ಲೇಖಕ :

ಎಂ. ಎಸ್. ರಾಮಲಿಂಗಪ್ಪ

ಕನ್ನಡ ಅಧ್ಯಾಪಕ

ಗೌರ್ನಮೆಂಟ್ ಕಾಲೇಜ್, ತುಮಕೂರು



ಶಿವಶರಣೆಯಾದ ಅಕ್ಕಮಹದೇವಿಯ, ಹೆಸರನ್ನು ಕೇಳದ ಕನ್ನಡಿಗರು ವಿರಳವೇಸರಿ. ಸಾಹಿತ್ಯ ಲೋಕದಲ್ಲೂ, ಭಕ್ತಿ ಲೋಕದಲ್ಲೂ, ಅಕ್ಕನಿಗೇ ಒಂದು ವಿಶಿಷ್ಟವಾದ ಸ್ಥಾನವುಂಟು. ಹನ್ನೆರಡಯ ಶತಮಾನದ ಕನ್ನಡ ಸಾಹಿತ್ಯದಲ್ಲಿ, ಶ್ರೇಷ್ಠ ವಚನಕಾರರ ಸಾಲಿನಲ್ಲಿ, ಅಕ್ಕನಿಗೆ ಶ್ರೇಷ್ಠ ವಚನಕಾರ್ತಿಯೆಂಬ, ಅಗ್ಗಳಿಕೆಯ ಹೊಗಳಿಕೆಯ ಹೂಮಾಲೆಯುಂಟು. ಬಸವಣ್ಣ ಭಕ್ತಿ ಭಾಂಡಾರಿಯಾಗಿ, ಅಲ್ಲಮಪ್ರಭು ಜ್ಞಾನಯೋಗಿಯಾಗಿ, ಸಿದ್ಧರಾಮಣ್ಣ-ಕರ್ಮಯೋಗಿಯಾಗಿ, ಲೋಕ ಕಲ್ಯಾಣ ಕ್ಕಾಗಿ ದುಡಿದರೆ, ಅಕ್ಕ, ವೈರಾಗ್ಯ ನಿಧಿಯಾಗಿ—'ಸತಿ ಪತಿ ಭಾವದ ಭಕ್ತಿಗೆ' ಹೆಸರಾಗಿ, ಅನುಭವ ಸಾಹಿತ್ಯದ ಖನಿಯಾಗಿ, ಶ್ರೇಷ್ಠ ಶರಣೆಯಾಗಿದ್ದಾಳೆ. ಚಿಕ್ಕಂದಿನಿಂದಲೂ ಶಿವನೇ ತನಗೆ ಪತಿಯಾಗಬೇಕೆಂದು ಬಯಸಿ, ತಂದೆ ತಾಯಿಯರ-ಒಳಿತಕ್ಕಾಗಿ ಭವಿಯನ್ನೂ ವರಿಸಿದರೂ, ನಿರ್ಲಿಪ್ತವಾದ ಮನೋಭಾವದಿಂದ, ಸರ್ವವಿಧವಾದ ಐಹಿಕ ಸುಖಗಳನ್ನೂ ತ್ಯಜಿಸಿ, ಅಹರ್ನಿಶಿಯೂ ಶಿವನನ್ನೂ ಭಜಿಸಿ, ತನ್ನ-ಗುರಿಯನ್ನೂ ಸೇರಿದ ಮಹಾ ಚೇತನ. ಅಕ್ಕನ ಜೀವನದಲ್ಲಿ ಕೌಶಿಕನೆಂಬ ರಾಜನ ವೃತ್ತಾಂತ ಆಕೆಯ ನಿಷ್ಠೆಗೆ, ಚಿತ್ತ ಸ್ಥೈರ್ಯಕ್ಕೆ ಒಡ್ಡಿದ ಒರೆಗಲ್ಲಾಗಿ, ಆಕೆಯ ಚೇತನವನ್ನೂ ಪುಟಕ್ಕಿಟ್ಟ ಚಿನ್ನದಂತೆ, ಕಾಂತಿಯುತವಾಗಿ ಬೆಳಗಲು, ಒಳ್ಳೆಯ ಸಾಧನವೂ ಆಯಿತು ಕನ್ನಡ ಸಾಹಿತ್ಯದಲ್ಲಿ ಕೇವಲ ಕೆಲವೇ ಕವಿಗಳು ಮಾತ್ರ, ತಮ್ಮ ನೂತನ ಮಾರ್ಗಕ್ಕೆ ಛಂದಸ್ಸಿನ ವೈವಿಧ್ಯತೆಗೆ, ಆಲಂಕಾರಿಕ ಭಾಷೆಗೆ, ಹೆಸರಾಗಿದ್ದಾರೆ. ಮಹದೇವಿಯೂ ಸಹ ಶ್ರೇಷ್ಠ ವಚನಕಾರ್ತಿಯಾಗಿ, ಅಲಂಕಾರಭರಿತ ಭಾಷೆಯ ಮೂಲಕ,-ತನ್ನ ಅನುಭವವನ್ನೂ ಸುಂದರವಾದ, ಸರಳವಾದ, ಮಾತ್ಯಗಳಿಂದ ಸಾಮಾನ್ಯ ಜನರಿಗೂ ತಿಳಿಯುವಂತೆ, ಅಭಿವ್ಯಕ್ತಿಗೊಳಿಸಿದ್ದಾಳೆ ಎನ್ನಬಹುದು.

ಅಲ್ಲಮಪ್ರಭುವಿನಂತಹ ಶ್ರೇಷ್ಠ ಜ್ಞಾನಿಯೇ, ಅಕ್ಕನ ವಚನಗಳು ಇತರರ ವಚನಗಳಿಗಿಂತ, ಅತ್ಯುತ್ತಮವಾದುವುವೆಂದು ಅಭಿಪ್ರಾಯ ಪಟ್ಟಿದ್ದಾರೆ, ಎಂದ ಮೇಲೆ, ಅಕ್ಕನ ವಚನಗಳ ಅಗ್ಗಳಿಗೆ ಅತಿಶಯವಾದುದೇ ಸರಿ. ತಮ್ಮ ಅನುಭವಕ್ಕೆ ಬಂದ, ಅಂತರಂಗ ಶುದ್ಧಿಯ ವಿಷಯಗಳನ್ನೂ, ಜನಸಾಮಾನ್ಯರಿಗೆ, ಅರ್ಥವಾಗುವಂತೆ ತಿಳಿಸಲು, ಉಚಿತವಾದ ಮತ್ತು ಸುಂದರವಾದ, (ಸಾದೃಶ್ಯ)-ರೂಪಕ ಮತ್ತು ಉಪಮಾ ಮೊದಲಾದ ಅಲಂಕಾರಗಳನ್ನೂ ಬಳಸಿದ್ದಾರೆ. ಅಕ್ಕನವರು ತಮ್ಮ ಅನುಭವಗಳನ್ನೂ ತಿಳಿಸಲು ಉಪಯೋಗಿಸಿದ ಅಲಂಕಾರಿಕ ಭಾಷೆ, ಅವರ ಹಲವಾರು ವಚನಗಳಲ್ಲಿ ಸುಂದರವಾಗಿ ಕಂಡುಬರುತ್ತದೆ. ಅಂತಹ ಕೆಲವು ವಚನಗಳಲ್ಲಿ ಕಂಡುಬರುವ ಅಕ್ಕನ ಜೀವನ ಸಂದರ್ಶನವನ್ನು ಪಡೆಯೋಣ.

ಕೌಶಿಕನ ಅರಮನೆಯಲ್ಲಿ ಅಕ್ಕನಿದ್ದ ಕಾಲದಲ್ಲಿ ಬಹುಶಃ ಅವನ ತೊತ್ತುಗಳು ಅಕ್ಕನನ್ನು ತಮ್ಮ ರಾಜನನ್ನೂ ಒಲಿಯುವಂತೆ, ಅಶೋಕ ವನದಲ್ಲಿದ್ದ ಸೀತೆಯನ್ನೂ ರಾವಣನ ಕಡೆಯ ರಾಕ್ಷಸಿಯರಂತೆ ಒತ್ತಾಯ ಮಾಡಿರಬೇಕು. ಆ ವೇಳೆಯಲ್ಲಿ ಅಕ್ಕಕೊಟ್ಟ ಉತ್ತರದಲ್ಲಿ ಎಂತಹ ಸುಂದರ ದೃಷ್ಟಾಂತಗಳಿವೆ ನೋಡಿ :—

ಗಿರಿಯಲ್ಲಲ್ಲದೆ, ಹುಲುಮೊರಡಿಯಲ್ಲಾಡುವುದೇ ನವಿಲು?
ಕೊಳನಲ್ಲದೆ, ಕಿರುವಳ್ಳಕ್ಕೆಳಸುವುದೇ ಹಂಸೆ ?
ಮಾಮರ ತಳಿತಲ್ಲದೆ, ಸ್ವರಗೈವುದೇ ಕೋಗಿಲೆ ?
ಪರಿಮಳವಿಲ್ಲದ, ಪುಷ್ಪಕ್ಕೆಳಸುವುದೇ ಭ್ರಮರ ?
ಎನ್ನ ದೇವಚೆನ್ನಮಲ್ಲಿಕಾರ್ಜುನನಲ್ಲದೆ,ಅನ್ಯಕ್ಕೆಳಸುವುದೇ?
ಎನ್ನ ಮನ ಕೇಳಿರೆ ಕೆಳದಿಯರಿರಾ !

ಚೆನ್ನಮಲ್ಲಿಕಾರ್ಜುನ ಉತ್ತುಂಗ ಗಿರಿಶಿಖರವಾದರೆ, ಅಕ್ಕನವಿಲಾಗಿ, ಅಲ್ಲಿಯೇ ನಲಿಯಬೇಕು. ಕೌಶಿಕ ಕೇವಲ ಒಂದು ಸಾಧಾರಣವಾದ ಕಲ್ಲುಬಂಡೆಯಂತವನು ಆದ್ದರಿಂದ ಎಲ್ಲಿಗೆಲ್ಲಿಗೆ ಸಂಬಂಧ? ಸಾಮಾನ್ಯ ಕೊಳಚೆ ನೀರಿನಲ್ಲೆ ಬಾತುಕೋಳಿ ಮೊದಲಾದುವು ವಿಹಂಸ ಬಹುದು. ಆದರೆ ಅಕ್ಕನೆಂಬ ಹಂಸೆ, ಚೆನ್ನಮಲ್ಲಿಕಾರ್ಜುನನೆಂಬ, ತಿಳಿಗೊಳದಲ್ಲಿ ವಿಹರಿಸುತ್ತದೆ. ಹಾಗೆಯೆ ಕೋಗಿಲೆಯು ಸಹ ವಸಂತದ ಮಾವಿನ ಮರದ ಚಿಗುರು ತಿಂದೇ ಮಧುರವಾಗಿ ಹಾಡಬಲ್ಲದು. ಮಕರಂದವಿಲ್ಲದ —ಹೂವಿಗೆ, ಯಾವ ಭ್ರಮರ ತಾನೇ ಹೋದೀತು ? ಎಲ್ಲ ಶ್ರೇಷ್ಠತೆಯ ಆಗರ ಅಕ್ಕನೊಲಿದ ಹರ. ಮನಸ್ಸಿನ ಭಾವನೆಗಳನ್ನೂ ದೃಷ್ಟಾಂತ ಮತ್ತು ರೂಪಕಗಳ ಮೂ ಲ ಕ, ಮನೋಜ್ಞವಾಗಿ-ತಿಳಿಸಬಲ್ಲರೆಂಬುದಕ್ಕೆ ಮೇಲಿನ ವಚನವೇ ಸಾಕ್ಷಿಯಾಗಿದೆ.

ಆಸೆ ಲೋಕದ ಪ್ರತಿಯೊಬ್ಬ ಮಾನವರನ್ನೂ ಆಕರ್ಷಿಸುತ್ತದೆ. ಸಂಸಾರಿಗೆ ಒಂದು ಆಸೆಯಾದರೆ ಸನ್ಯಾಸಿಗೊಂದು ಆಸೆ. ಒಬ್ಬರಿಗೆ ಸುಖ ಭೋಗದ ಆಸೆಯಿದ್ದರೆ, ಮತ್ತೊಬ್ಬರಿಗೆ ಐಹಿಕ ಸುಖವಿಮುಖರಾಗಿ, ಮುಕ್ತಿ ಪಡೆವ ಆಸೆ. ಹೀಗೆ ಒಂದಲ್ಲ ಒಂದು ಆಸೆಯಿದ್ದೇ ಇರುತ್ತದೆ. ಆದರೆ ಯಾವುದೂ ನಮ್ಮ ಸ್ವಂತದ್ದಾಗದು.

"ಊರ ಸೀರೆಗೆ ಅಗಸ ತಡಬಡಗೊಂಬಂತೆ
ಹೊನ್ನೆನ್ನದು ಹೆಣ್ಣೆನ್ನದು ಮಣ್ಣೆನದು ಎಂದು
ನೆನೆನೆನೆದು ನಿಮ್ಮನರಿಯದ ಕಾರಣ ಕೆಮ್ಮನೆ
ಕೆಟ್ಟೆನಯ್ಯ ಚನ್ನಮಲ್ಲಿಕಾರ್ಜುನ."

ಊರ ಸೀರೆಯನ್ನು ಒಗೆಯಲು ಅಗಸ ಆತುರಗೊಳ್ಳುವಂತೆ, ಹೊನ್ನು, ಹೆಣ್ಣು, ಮಣ್ಣುಗಳ ಮೇಲಿನ ಆಸೆಯು ಅಷ್ಟೇ ವ್ಯರ್ಥವಾದುದು. ಅದನ್ನು ತಿಳಿಯದೆ ಆಶಿಸಿ, ಜನರು ಶಿವನನ್ನು ಅರಿಯದೆ ಮೋಸ ಹೋಗುತ್ತಾರೆ. ಹಾಗೆಯೆ ನಾನು ನಿಮ್ಮನ್ನು ಕಾಣದ ಕಾರಣ ತೊಂದರೆಗೆ ಒಳಗಾಗಿದ್ದೇನೆ, ಎಂದು ಮೊರೆಯಿಡುತ್ತಾರೆ.

ಪರಮಾತ್ಮನ ಸಾನ್ನಿಧ್ಯವನ್ನು ಬಯಸಿ ಅವನೊಡನೆ ಒಂದಾಗಲು ಇಚ್ಛಿಸುವ ಜೀವಾತ್ಮಕ್ಕೆ ಅದರ ಗುಣಗಳಿರಬೇಕು ತಾನೆ? ಅಂತಹ ಶಕ್ತಿಯನ್ನೂ ಪಡೆದಿದ್ದ ಅಕ್ಕನನ್ನೂ ಅರಿಯದಿದ್ದ ಹಲವರು. ಅನೇಕ ಪ್ರಶ್ನೆಗಳನ್ನೂ ಹಾಕಿರಬೇಕು, ಅದಕ್ಕೆ ಅಕ್ಕಕೊಟ್ಟ ಉತ್ತರ ನೋಡಿ—

ಗಟ್ಟಿದುಪ್ಪ ತಿಳಿದುಪ್ಪಕ್ಕೆ ಭೇದವುಂಟೆ ಅಯ್ಯ?
ದೀಪಕ್ಕೆ ದೀಪ್ತಿಗೆ ಭೇದವುಂಟೆ ಅಯ್ಯ?
ಆತ್ಮಕ್ಕೆ ಅಂಗಕ್ಕೆ ಭೇದವುಂಟೇ ಅಯ್ಯ ಎನ್ನ
ಅಂಗವನ್ನು ಶ್ರೀಗುರು ಮಂತ್ರವ ಮಾಡಿ
ತೋರಿದವನಾಗಿ
ಸಾವಯವಕ್ಕೆ ನಿರವಯ್ಯವಕ್ಕೆ ಭಿನ್ನವಿಲ್ಲವಯ್ಯ–
ಚೆನ್ನಮಲ್ಲಿಕಾರ್ಜುನನ ಸೇರಿ ಮತಿಗೆಟ್ಟವಳ ಮನ
ನುಡಿಸುವಿರಯ್ಯ?"

ಗಹನವಾದ ತತ್ವದ ವಿಷಯಗಳನ್ನೂ, ಅಕ್ಕ ಸರಳವಾಗಿ (ರೂಪಕ)ಗಳ ಮೂಲಕ ತಿಳಿಸಬಲ್ಲರು.

ತುಪ್ಪ ಗಟ್ಟಿಯಿರಬಹುದು. ಅಥವ ತಿಳಿಯಿರಬಹುದು, ಒಳ್ಳೆಯದಾದರೆ ಅದರ ರುಚಿ ಒಂದೇ ಆಗಿರುತ್ತದೆ, ಅದರಲ್ಲಿ ಭಿನ್ನತೆಯಿರಲಾರದು. ಹಾಗೆಯೆ ಶಿವನನ್ನೂ ಸೇರಬೇಕೆಂದು ನಿರಂತರವೂ ನಿಷ್ಠೆಯಿಂದ ಪ್ರಾರ್ಥಿಸುತ್ತಿದ್ದ ಅಕ್ಕನ ಅಂಗದಲ್ಲಿ ಲಿಂಗಾಂಗ ಸಾಮರಸ್ಯದ ಸದ್ಗುಣಗಳಲ್ಲದೆ ಬೇರೆಯ ವಿಚಾರಕ್ಕೆ ಎಡೆಯಿಲ್ಲ. ''ಚೆನ್ನಮಲ್ಲಿಕಾರ್ಜುನನ ಸೇರಿ ಮತಿಗೆಟ್ಟವಳು" ಎಂಬ ಮಾತು ಎಷ್ಟು ತಾತ್ವಿಕವೂ, ಅರ್ಥಪೂರ್ಣವೂ ಆಗಿದೆ. ಎಂದು ವಿಚಾರ ಮಾಡಿದಾಗ, ಲೋಕದ ರೀತಿ ನೀತಿಗಳ ಬಗ್ಗೆ ಅಕ್ಕನಿಗಿದ್ದ ಗಾಢವಾದಂತಹ ಅನುಭವ ಗೋಚರವಾಗುತ್ತದೆ.

ಶ್ರೇಷ್ಠ ತತ್ವ ಜ್ಞಾನಿಗಳು, ಮಹಾತ್ಮರು, ಕವಿಗಳು, ಭಕ್ತರು ಹೇಳುವಂತೆ, ಲೋಕವನ್ನು ನಡೆಸುವ ಒಂದು ಮಹಾಶಕ್ತಿಯುಂಟು. ಅದನ್ನು ನಾವು ಹಲವು ನಾಮಗಳಿಂದ ಕರೆಯುತ್ತೇವೆ. ಆದರೆ ಅಣ್ಣನವರು

ಹೇಳುವಂತೆ "ದೇವನೊಬ್ಬ ನಾಮಹಲವು" ವಿಶ್ವದಲ್ಲಿ ಪ್ರತಿಯೊಂದು ಕಾರ್ಯವೂ ಆ ಮಹಾ ಶಕ್ತಿಯ ಇಷ್ಟ ದಂತೆ ನಡೆಯುತ್ತದೆ.

ಮಾನವರೆಲ್ಲರೂ ಆ ಸೂತ್ರಧಾರನ ಕೈಯ ಬೊಂಬೆಗಳು ಮಾತ್ರ. ಆತ ಆಡಿಸಿದಂತೆ ನಾವು ಆಡ ಬೇಕು. ಅಕ್ಕನ ಈ ಕೆಳಗಿನ ಮಾತುಗಳನ್ನೂ ನೋಡಿ—

"ಕೋಲ ತುದಿಯ ಕೋಡಗನಂತೆ ।
ನೇಣತುದಿಯ ಬೊಂಬೆಯಂತೆ ।
ಆಡಿದೆನಯ್ಯ ನೀನಾಡಿಸಿದಂತೆ ।
ಆನು ನುಡಿದೆನಯ್ಯ ನೀನುಡಿಸಿದಂತೆ ।
ಆನು ಇದ್ದೆನಯ್ಯ ನೀನು ಇರಿಸಿದಂತೆ ।
ಜಗದ ಯಂತ್ರವಾಹಕ ಚನ್ನಮಲ್ಲಿಕಾರ್ಜುನ
ಸಾಕೆಂಬನ್ನಕ್ಕ"॥

ಹೊಟ್ಟೆಯ ಪಾಡಿಗಾಡಿ, ಪಳಗಿಸಿದ ಕೋಡಗ ವೊಂದನ್ನೂ, ಕೋಲತುದಿಯಲ್ಲಿ ಕುಣಿಸುವ ಆಟವನ್ನು ಹಳ್ಳಿಯಿಂದ ದಿಲ್ಲಿಯವರೆಗೂ ಕಾಣಬಹುದು. ಬೊಂಬೆ ಯಾಟಗಳಂತೂ ಈಚೆಗೆ ಕಣ್ಮರೆಯಾಗಿದೆ. ಆದರೆ ಈ ವಚನದಲ್ಲಿ ಕಂಡುಬರುವ ಲೌಕಿಕಾರ್ಥಕ್ಕೆ ತಾತ್ವಿಕಾ ರ್ಥವೂ ಸೇರಿ, ಅದರ ಭಾವಕೋಶ ಹೆಚ್ಚುತ್ತದೆ ಉಪಮೆ ಗಳ ಸಹಾಯದಿಂದ.

ಕೆಲವು ಕವಿಗಳು ತಮ್ಮ ಕಾವ್ಯಗಳಲ್ಲಿ ಸಾಮಾನ್ಯ ಜನರ ಭಾಷೆಯನ್ನೂ, ಗಾದೆಗಳನ್ನು, ಬಳಸುತ್ತಾರೆ. ಅಕ್ಕನವರ ವಚನಗಳಲ್ಲೂ ಅಂತಹ ಕೆಲವು ಪ್ರಯೋಗ ಗಳನ್ನೂ ಕಾಣಬಹುದು. ಅವು ಬಂದಿರುವ ಸನ್ನಿವೇಶ ಗಳಂತೂ- ಬಹು ಕರುಣಾಮಯವಾದ ಭಾವನೆಯನ್ನೂ ಒಡಮೂಡಿಸುತ್ತದೆ.

ಬಲ್ಲಿದನ ಹಗೆವು ತೆಗೆವನ್ನಬರ,
ಬಡವನ ಹರಣ ಹೋದ ತೆರನಂತಾಯಿತ್ತು ।
ನೀಕಾಡಿ ನೋಡುವನ್ನಬರ ಎನಗಿದು ವಿಧಿಯೆ
ಹೇಳಾ ತಂದೆ।
ಮೂರು ವಾರುವನ್ನಬರ ಒಮ್ಮೆ ಗಾಳಿಗೆ ।
ಹಾರಿಹೋದ ತೆರನಂತಾಯಿತ್ತು
ಎನಗೆ ನೀನಾವ ಪರಿಯಲ್ಲಿ ಕರುಣಿಸುವೆಯಯ್ಯ-
ಚೆನ್ನಮಲ್ಲಿಕಾರ್ಜುನ ॥

ದೊಡ್ಡವರು ಹಗೇವು ತೆಗೆದು, ಹಸಿದ ಬಡವರಿಗೆ ದವಸ ಕೊಡುವ ವೇಳೆಗೆ ಬಡವನ ಹರಣ ಹೋಗು ವಂತಾಗಿರುತ್ತದೆ. ಅವರಿಗೆ ಆತುರವಿಲ್ಲ — ಇವರಿಗೆ ಜೀವಿಸುವಂತಿಲ್ಲ. ಈ ಮಾತು ಗಾದೆ ಮಾತಿನಂತೆ ಹರಡಿ ಜನ ಜನಿತವಾಗಿದೆ. ಆ ಪ್ರಸಿದ್ಧ ಗಾದೆಯ ಉಪಮಾನದ, ಮುಖಾಂತರ, ಅಕ್ಕ, ತನಗಿನ್ನೂ ಚೆನ್ನಮಲ್ಲಿಕಾರ್ಜುನನೆಂಬ ಬಲ್ಲಿದ, ಕರುಣೆಯ ಕೃಪೆ ಮಾಡಿಲ್ಲವೆಂಬ ಭಾವ ಸ್ಫುರಿಸುತ್ತದೆ. ಶಿವನ ಮಹಿಮೆ ಯನ್ನೂ ಕುರಿತು ಅಕ್ಕ ವರ್ಣಿಸುವಾಗ, ಎಂತಹ ನೈಸರ್ಗಿಕವಾದ, ಸುಂದರ ಉಪಮೆಗಳನ್ನು ಬಳಸಿದ್ದಾರೆ ನೋಡಿ—

ನೆಲದ ಮರೆಯ ನಿಧಾನದಂತೆ
ಫಲದ ಮರೆಯ ರುಚಿಯಂತೆ
ಸಿಲೆಯ ಮರೆಯ ಹೇಮದಂತೆ
ತಿಲದ ಮರೆಯ ತೈಲದಂತೆ-
ಭಾವದ ಮರೆಯ ಬ್ರಹ್ಮವಾಗಿಪ್ಪ,
ಚೆನ್ನಮಲ್ಲಿಕಾರ್ಜುನನ ನಿಲವನಾರೂ
ಅರಿಯಬಾರದು ॥

ಅಣುರೇಣು ತೃಣ ಕಾಷ್ಟಗಳಲ್ಲಿಯೂ ಶಿವನ ಅಂಶವಿದೆ, ಆದರೂ ಶಿವನನ್ನೂ ಕಾಣುವುದು ಸುಲಭದ ಕಾರ್ಯವಲ್ಲ. ನಿರ್ಮಲ ಮನಸ್ಸಿನಿಂದ, ಭಕ್ತಿಯಿಂದ ಆಶಕ್ತಿಯ ಸಾನಿಧ್ಯವನ್ನು ಪಡೆಯಬಹುದು. ಆ ಶಿವನ ಇರುವಿಕೆ, ಭೂಮಿಯಲ್ಲಿ ಹುದುಗಿರುವ ಸಂಪತ್ತಿನಂತೆ, ಹಣ್ಣಿನಲ್ಲಿ ಅಡಕವಾಗಿರುವ ರುಚಿಯಂತೆ, ಕಲ್ಲಿನಲ್ಲಿ ಸೇರಿರುವ-ಚಿನ್ನದಂತೆ, ಎಳ್ಳಿನ ಒಳಗಿನ ಎಣ್ಣೆಯಂತೆ, ಭಾವದ ಮರೆಯ ಬ್ರಹ್ಮವಾಗಿರುವ ಶಿವನನ್ನು ಅರಿಯಲು ಸುಲಭ ಸಾಧ್ಯವಲ್ಲ ಎಂಬುದು ಅಕ್ಕನ ಅಭಿಪ್ರಾಯ.

ಆಸೆಯ ಬಲೆಯಲ್ಲಿ ಸಿಕ್ಕಿದ ಲೋಕದ ಜನತೆ-ಬಹುಪಾಲು, ಅದರ ಬಂಧನದಿಂದ ಬಿಡುಗಡೆಯಾಗದೆ ಅವನತಿ ಪಡೆಯುತ್ತಾರೆ. ಲೋಕದ ಜನರ ಈ ಸಾಮಾನ್ಯವಾದ ಸ್ವಭಾವವನ್ನೂ ಅಕ್ಕನವರು ಚಿತ್ರಿಸಿದ್ದಾರೆ.

ತೆರಣಿಯಹುಳು ತನ್ನ ಸ್ನೇಹದಲ್ಲಿ ಮನೆಯಮಾಡಿ।
ತನ್ನ ನೂಲು ತನ್ನ ಸುತ್ತಿ ಸಾವತೆರನಂತೆ, ಮನ
ಬಂದುದ

ಬಯಸಿ ಬೇವುತ್ತಿದ್ದೇನೆ ಅಯ್ಯ !
ಎನ್ನ ಮನದ ದುರ್ಮಾಯ ಮಾಣಿಸಿ,
ನಿಮ್ಮತ್ತ ತೋರಾ ಚೆನ್ನಮಲ್ಲಿಕಾರ್ಜುನ ॥

ತೆರಣಿಯ ಹುಳುವಿನ ಉಪಮೆ, ಲೋಕದ ಜನರ ಜೀವನ ಸ್ವರೂಪಕ್ಕೆ ಕೊಟ್ಟ ಒಂದು ಸುಂದರ ನಿದರ್ಶನ. ಅಂತಹ ಆಸೆಯ ಪಾಶದಿಂದ ನನ್ನನ್ನೂ–ಪಾರುಮಾಡಿ, ಮನಸ್ಸೆಲ್ಲಾ ನಿಮ್ಮನ್ನೂ ನೆನೆವಂತೆ ಕರುಣಿಸೆಂದು ಶಿವನನ್ನು ಬೇಡುತ್ತಾರೆ. ಈ ಮುಂದಿನ ವಚನದಲ್ಲಿ ತಮ್ಮ ಅಂತರಂಗದ ಬಯಕೆಯನ್ನೂ ಸುಂದರ ಉಪಮೆಗಳ ಮೂಲಕ ವ್ಯಕ್ತಪಡಿಸಿದ್ದಾರೆ :–

ಹಿಂಡನಗಲಿ ಹಿಡಿವಡೆದ ಕುಂಜರ ತನ್ನ ವಿಂಧ್ಯವ ನೆನೆವಂತೆ ।
ಬಂಧನಕ್ಕೆ ಬಂದಗಿಳಿ ತನ್ನ ಬಂಧುವನೆನೆವಂತೆ ನೆನೆವೆನಯ್ಯ ।
ಕಂದ ನೀನಿತ್ತ ಬಾ ಎಂದು ನೀವು ।
ನಿಮ್ಮಂದವ ತೋರಯ್ಯ ಚನ್ನಮಲ್ಲಿಕಾರ್ಜುನ ॥

ಗುಂಪಿನಿಂದ ತಪ್ಪಿಸಿಕೊಂಡ ಸಲಗದಂತೆ, ಬಂಧುಗಳನ್ನಗಲಿದ ಗಿಳಿಯಂತೆ – ಅಕ್ಕ ತನ್ನ ಬಂಧುವಾದ ಚೆನ್ನಮಲ್ಲಿಕಾರ್ಜುನನನ್ನೂ ಹುಡುಕುತ್ತ, ಅವನ ಸಾನಿಧ್ಯವನ್ನೂ ಪಡೆಯಲು, ಧೈರ್ಯದಿಂದ ನಿಷ್ಠೆಯಿಂದ, ಮತ್ತು ಭಕ್ತಿಯಿಂದ, ಪ್ರಯತ್ನಿಸುತ್ತಾರೆ. ಶಿವನ ಪಾವನ ವಾಸಸ್ಥಾನವನ್ನು ಅದರ ಮಹತ್ವನ್ನು ಕುರಿತು ಹೇಳಿರುವ ವಚನವಂತೂ ಅಕ್ಕನವರ ರೂಪಕ ಶ್ರೀಯ ಭಂಡಾರವನ್ನೇ ಸೂರೆಗೊಂಡಿದೆಯೆಂದು ಹೇಳಬಹುದು.

ವನವೆಲ್ಲ ಕಲ್ಪತರು, ಗಿಡವೆಲ್ಲ ಮರು ಜೇವಣಿ.
ಶಿಲೆಯೆಲ್ಲ ಪರುಷ, ನೆಲವೆಲ್ಲ ಅವಿಮುಕ್ತ ಕ್ಷೇತ್ರ
ಜಗವೆಲ್ಲಾ ನಿರ್ಜರಾಮೃತ, ಮೃಗವೆಲ್ಲ ಪರುಷ ಮೃಗ ।
ಎಡಹುವ ಹರಳುಗಳೆಲ್ಲ ಚಿಂತಾಮಣಿ.
ಚನ್ನಮಲ್ಲಿಕಾರ್ಜುನಯ್ಯನಮೆಚ್ಚಿನ ಗಿರಿಯ ಸುತ್ತಿ
ನೋಡುತ್ತ ಬಂದು ಕದಳಿಯ ಬನವ ಕಂಡೆನಾನು ॥

ಶಿವನ ಸುಂದರ ಗಿರಿಯನ್ನೂ ಸುತ್ತಿ ಬಂದು, ಅದರ ಮಹತ್ವವನ್ನೂ ಮನಸಾರೆ ಕೊಂಡಾಡಿ, ಆ ಪವಿತ್ರ ಸ್ಥಾನದ ಕದಳಿವನದಲ್ಲಿ ಅಕ್ಕ ತನ್ನ ಅಕ್ಕರೆಯ ಮಲ್ಲಿಕಾರ್ಜುನನನ್ನೂ ಅರಸಿಕೊಂಡು ಬಂದು ಅಲ್ಲಿ ಶಿವನರಸಿಯಾಗಿ ಅವನಲ್ಲಿ ಬೆರಸಿಹೋದಳು. ಮೇಲಿನ ವಚನದಲ್ಲಿ ಅಕ್ಕ ಕೊಟ್ಟಿರುವ ರೂಪಕಗಳು ಒಂದೊಂದು ಪರಿಭಾವಿಸದಷ್ಟೂ ಅದ್ಭುತವಾಗಿ ಅರಿದಷ್ಟು ಸುಂದರತಮವಾಗಿದೆ.

ಲೋಕದಲ್ಲಿ ಹುಟ್ಟಿದ ಪ್ರತಿಯೊಬ್ಬ ಹೆಣ್ಣುಮಗಳೂ ಕೂಡ–ತನ್ನ ತೌರುಮನೆಯ ಬಗ್ಗೆ ಅಕ್ಕರೆಯನ್ನು, ಅಪಾರವಾದ ಗೌರವವನ್ನೂ ಇಟ್ಟುಕೊಂಡಿರುತ್ತಾರೆ. ಮದುವೆಯಾಗಿ ಗಂಡನ ಮನೆಯನ್ನು ಸೇರಿದ ಹೆಣ್ಣು, ಜೀವನದಲ್ಲಿ ಎಂತಹ ಗಂಡಾಂತರಗಳು ಬಂದರೂ ಸಹಿಸಿಕೊಂಡು, ಹುಟ್ಟಿದ ಮನೆಗೆ ಕೆಟ್ಟಹೆಸರು ತರದಂತೆ ಬಾಳಬೇಕು. ಅಷ್ಟೇ ಅಲ್ಲ ಸೇರಿದ ಮನೆಯನ್ನೂ, ಶ್ರೇಷ್ಠ ಭಾವನೆಯಿಂದ ಗೌರವಿಸಿ ಬಾಳಬೇಕು. ''ಕೊಟ್ಟ ಹೆಣ್ಣು ಕುಲಕ್ಕೆ ಹೊರಗು'' ಎಂಬ ಗಾದೆ ಮಾತಿದ್ದರೂ ಭಾರತೀಯ ಸಂಸ್ಕೃತಿಯಲ್ಲಿ ಮಗಳನ್ನೂ ಮದುವೆಮಾಡಿ ಗಂಡನ ಮನೆಗೆ ಕಳಿಸಿಕೊಡುವಾಗ, ತಮ್ಮ ಕುಮಾರಿಗೆ–ಹಿತವಚನಗಳನ್ನು ಹೇಳಿ ಕಳಿಸುವುದು ಒಂದು ಪದ್ಧತಿ. ಅತ್ತೆ ಮಾವ, ಪತಿ, ಮತ್ತು ಮನೆಯಲ್ಲಿನ ಎಲ್ಲರನ್ನು ಒಳ್ಳೆಯ ಭಾವನೆಯಿಂದ ಕಾಣಬೇಕೆಂದು ತಿಳಿಸುತ್ತಾರೆ. ನಮ್ಮ ಜನಪದ ಗೀತೆಗಳಲ್ಲಿ ಈ ವಿಷಯದ ಸುಂದರ ನುಡಿ ಚಿತ್ರಗಳು ಹೇರಳವಾಗಿ ದೊರೆಯುತ್ತವೆ ಮತ್ತು ಅವು ನಮ್ಮ ಜನರ ಶ್ರೇಷ್ಠ ಸಂಪ್ರದಾಯಗಳ ಕುರುಹಾಗಿವೆ. ಅಕ್ಕನ ಜೀವನದಲ್ಲೂ ಇಂತಹ ಒಂದು ಹೃದಯಸ್ಪರ್ಶಿ ಸನ್ನಿವೇಶ ಕಂಡುಬರುತ್ತದೆ.

ಹುಟ್ಟಿದೆ ಶ್ರೀಗುರುವಿನ ಹಸ್ತದಲ್ಲಿ ಬೆಳೆದೆನು ಅಸಂಖ್ಯಾತರ–
ಕರುಣದೊಳಗೆ, ಬಾವನೆಂಬ ಹಾಲು, ಸುಜ್ಞಾನವೆಂಬ ತುಪ್ಪ.
ಪರಮಾರ್ಥವೆಂಬ ಸಕ್ಕರೆಯ ನಿಕ್ಕಿದರು ನೋಡಾ ।
ಇಂತಿಪ್ಪ ತ್ರಿವಿಧಾಮೃತವ ದಣಿಯಲೆರೆದು ಸಲಹಿದರೆನ್ನ
ವಿವಾಹವ ಮಾಡಿದಿರಿ, ಪಯವಪ್ಪ ಗಂಡಗೆ ಕೊಟ್ಟಿರಿ.

ಕೊಟ್ಟ ಮನೆಗೆ ಕಳುಹಲೆಂದು ಅಸಂಖ್ಯಾತರೆಲ್ಲರು ನೆರೆದು-
ಬಂದಿರಿ.ಬಸವಣ್ಣ ಮೆಚ್ಚಲು ಒಗೆತನವ ಮಾಡುವೆ
ಚೆನ್ನಮಲ್ಲಿಕಾರ್ಜುನನ ಕೈವಿಡಿದು ನಿಮ್ಮ ಮಂಡೆಗೆ
ಹೂವತಾಹೆನಲ್ಲದೆ ಹುಲ್ಲತಾರೆನು. ಅವಧರಿಸಿ ನಿಮ್ಮಡಿಗಳೆಲ್ಲರು
ಮರಳಿ ಬಿಜಯಂಗೈವುದು ಶರಣಾರ್ಥಿ ॥

ಅಕ್ಕನನ್ನು ಅಕ್ಕರೆಯಿಂದ ಬೆಳೆಸಿದವರು ಅಸಂಖ್ಯಾತರು. ಶಿವಭಕ್ತರೆಲ್ಲರ ಕರುಣಭಾವದಲ್ಲಿ ಬೆಳೆದ ಅಕ್ಕ ಹುಟ್ಟಿದ್ದು ಶ್ರೀ ಗುರುವಿನ ಹಸ್ತದಲ್ಲಿ. ಕುಡಿದದ್ದು-ಭಾವವೆಂಬ ಹಾಲು, ಶರಣರ ಅನುಭವದ ಸುಜ್ಞಾನವೆಂಬ ತುಪ್ಪವನ್ನು ಸವಿದಿದ್ದಾರೆ. ಅನಂತರ ಶ್ರೇಷ್ಠತಮವಾದ ಗಂಡಿಗೆ, ಅಂದರೆ ಲೋಕದ ಸಾಮಾನ್ಯನಿಗೆ ಕೊಟ್ಟಿಲ್ಲ ಆಕೆಯ ಆತ್ಮದ ಅಣ್ಮನಾದ ಚೆನ್ನಮಲ್ಲಿಕಾರ್ಜುನನಿಗೆ ಕೊಟ್ಟು ಮದುವೆ ಮಾಡಿದ್ದಾರೆ. ಅಂದರೆ ಬಹುಷಃ ಶ್ರೀಶೈಲದ ಕದಳಿವನಕ್ಕೆ ಅಣ್ಣನವರ ಮತ್ತು ಪ್ರಭುದೇವರ ಆಶೀರ್ವಾದ ಪಡೆದು ಅಸಂಖ್ಯಾತ ಭಕ್ತರ ವಾತ್ಸಲ್ಯವನ್ನು ಪಡೆದ ಅಕ್ಕ-ತಾನು ತನ್ನ ಪತಿಯನ್ನು ಸೇರಲು ಹೊರಟು ನಿಂತಾಗ 'ಆಡಿದ ಮಮತೆಯ ಮಾತುಗಳು. ತನ್ನ ಕಳಿಸಬಂದ ತೌರುಮನೆಯವರಿಗೆ, ಮಗಳು ಹೇಳುವ ಮಾತು ಎಷ್ಟೊಂದು-ಮಾರ್ಮಿಕವಾದುದು, ಮಾರ್ದವವಾದುದೆಂದು "ನಿಮ್ಮ ಮಂಡೆಗೆ ಹೂವತಾಹೆನಲ್ಲದೆ-ಹುಲ್ಲ ತಾರೆನು" ಎಂಬ ನುಡಿಗಳಲ್ಲಿ ಸುವ್ಯಕ್ತವಾಗಿದೆ. ಆ ಮಾತುಗಳು ಹೆಣ್ಣಿನ ಗುಣವನ್ನು ತೌರುಮನೆಯವರ ಘನತೆಯನ್ನು ಸೂಚಿಸುತ್ತವೆ. ಈ ಮೇಲಿನ ಎಲ್ಲ ವಿಷಯಕ್ಕೂ ಮಿಗಿಲಾಗಿ ಭಾರತೀಯ ಸಂಪ್ರದಾಯಕ್ಕೆ-ಸಂಸ್ಕೃತಿಗೆ ವಿಶಿಷ್ಟವಾದ-ಮತ್ತೊಂದು ಅಂಶವೆಂದರೆ ಹೆಣ್ಣಿನಲ್ಲಿ ಕಂಡುಬರುವ ಕಷ್ಟ ಸಹಿಷ್ಣುತೆ.

''ಮರ್ತ್ಯಲೋಕದ ಭಕ್ತರ ಮನವ ಬೆಳಗಲೆಂದು ಇಳಿತಂದ
ನಯ್ಯ ಶಿವಮ, ಕತ್ತಲೆಯ ಪಾಳೆಯವ ರವಿ ಹೊಕ್ಕಂತಾಯಿತಯ್ಯ
ಚಿತ್ತದ ಪ್ರವೃತ್ತಿಯ ಹಿಂಗಿಸಿ, ಮುಕ್ತಿಪಥವ ತೋರಿದನಲ್ಲಿ
ಅಸಂಖ್ಯಾತರುಗಳಿಗೆ ತನುವೆಲ್ಲ ಸ್ವಯಲಿಂಗ, ಮನವೆಲ್ಲ.
ಚರಲಿಂಗ, ಭಾವವೆಲ್ಲ ಮಹಾಘನದ ಬೆಳಗು.
ಚೆನ್ನಮಲ್ಲಿಕಾರ್ಜುನಯ್ಯ ನಿಮ್ಮ ಶರಣಸಮ್ಯಜ್ಞಾನಿ-
ಚನ್ನಬಸವಣ್ಣನ ಶ್ರೀ ಪಾದಕ್ಕೆ ಶರಣೆಂದು ಎನ್ನ ಭವಂ-
ನಾಸ್ತಿಯಾಯಿತ್ತಯ್ಯ ಪ್ರಭುವೇ ॥

ಸೂರ್ಯನು ಉದಯಿಸಿ ಲೋಕಕ್ಕೆ ಕವಿದಿದ್ದ ಕತ್ತಲೆಯನ್ನು ಹೋಗಲಾಡಿಸಿ-ಎಲ್ಲೆಡೆಯೂ ತನ್ನ ಬೆಳಕನ್ನು ಬೆಳಗುವನು ''ತಮಸೋಮಾ ಜ್ಯೋತಿರ್ಗಮಯಾ'' ಎಂಬ ಶ್ರೇಷ್ಠ ವಾಣಿಯಂತೆ, ಶಿವನು ತನ್ನ ಭಕ್ತರನ್ನು ಅಜ್ಞಾನದ ಅಂಧಕಾರದಿಂದ ಸುಜ್ಞಾನದ ಬೆಳಕಿನತ್ತ ಕರೆದೊಯ್ಯುವುದಲ್ಲದೆ ಅಸತ್ತಿನಿಂದ ಸತ್ತಿನ ಕಡೆಗೆ, ಮೃತ್ಯುವಿನಿಂದ, ಅಮರತ್ವದ ಕಡೆಗೂ ಕರೆದೊಯ್ಯುವನು. ಆದರೆ ಭಕ್ತನ ಅಂತರಂಗ ಮಾತ್ರ ಆಶವನ ಕೃಪೆಗೆ ಪಾತ್ರವಾಗಿ, ಅರ್ಹತೆ ಪಡೆದಿರಬೇಕು, ತಾತ್ವಿಕವಾದ ವಿಷಯಗಳನ್ನೂ ಹೇಳುವಲ್ಲಿಯೂ ಸಹ, ಅಕ್ಕ ಉಪಯೋಗಿಸಿರುವ ರೂಪಕಗಳು ಬಹು ಸುಂದರವೂ ಸರಳವೂ ಆಗಿರುವುದು ಕಂಡುಬರುತ್ತದೆ. ಇಲ್ಲಿ ಮಹದೇವಿಗೆ ಮಾರ್ಗದರ್ಶನಮಾಡಿ ಮುಕ್ತಿ ಪಥವನ್ನೂ ತೋರಿದವರಲ್ಲಿ ಶ್ರೇಷ್ಠಜ್ಞಾನಿ ಚೆನ್ನಬಸವಣ್ಣನವರೂ ಒಬ್ಬರು. ಅವರ ಶ್ರೀಪಾದಗಳಿಗೆ ನಮಿಸುವ ಅಕ್ಕನ ನಮ್ರಭಾವ ಅನುಕರಣೀಯವಾದುದು. ಕಾಡಿನಲ್ಲಿ ಮರಗಳು ಒತ್ತಾಗಿ ಬೆಳೆದಿರುವ ಕಡೆಗಳಲ್ಲಿ, ಒಂದಕ್ಕೊಂದು ತಾಕಿ ಮಥಿಸಿ ಅಲ್ಲಿ ಬೆಂಕಿಯುಂಟಾಗಿ, ಅಕ್ಕಪಕ್ಕದ ತರುಸಮೂಹವನ್ನೆ ನಾಶಮಾಡುತ್ತವೆ. ಈ ಕಾಡಿನ ಕಿಚ್ಚಿನ ವಿಷಯ ಸರ್ವಜನ ವಿಧಿತವಾದ ಸಾಮಾನ್ಯ ವಿಷಯವಾಗಿದೆ. ಆಕ್ರಿಯೆಯನ್ನೆ ದೃಷ್ಟಾಂತ ರೂಪಕ ಮತ್ತು ಉಪಮೆಗಳಿಂದ ಅಕ್ಕ ಹೇಳುವ, ಪಾರಮಾರ್ಥಿಕ ವಿಚಾರ ಹೀಗಿದೆ.

ಮರ ಮರ ಮಥನಿಸಿ ಕಿಚ್ಚುಹುಟ್ಟಿ,
ಸುತ್ತಣ ತರುಮರಾದಿಗಳ ಸುಡಲಾಯಿತ್ತು.
ಆತ್ಮವಾತ್ಮ ಮಥನಿಸಿ ಅನುಭಾವ ಹುಟ್ಟಿ
ತನುಗುಣಾದಿಗಳ ಸುಡಲಾಯಿತ್ತು.
ಇದು ಕಾರಣ ನಿಮ್ಮ ಮಹಾನುಭವಿಗಳ ಅನುಭಾವವ ತೋರಿ
ಎನ್ನೊಡಲ ನುಳಿಹಿಕೊಳ್ಳಾ ಚೆನ್ನಮಲ್ಲಿಕಾರ್ಜುನ॥

ಮರಕ್ಕೆ ಮರತಾಗಿ ಬೆಂಕಿಹುಟ್ಟಿ ಸುತ್ತಣ ತರುಗಳನ್ನೂ ಸುಡುವಂತೆ, ಆತ್ಮ ವಾತ್ಮಗಳ ಸಂಘದಿಂದ ಜ್ಞಾನದ ಜ್ಯೋತಿ ಹುಟ್ಟಿ, ತನುಗುಣಾದಿಗಳ ಕಾಳಿಕೆಗಳನ್ನೂ ನಾಶಮಾಡಿ ಆತ್ಮ ಪರಿಶುದ್ಧವಾಗಿ, ಪರಮಾತ್ಮನನ್ನೂ ಕಾಣುವ ಶಕ್ತಿಯನ್ನು ಪಡೆದುಕೊಳ್ಳುತ್ತದೆ. ಅದಕ್ಕೆ ಭಕ್ತಿಮಾರ್ಗ ಹೆಚ್ಚು ಯುಕ್ತವಾಗಿದೆ. ಅಂಥ ಭಕ್ತರ ಅನುಭಾವಿಗಳ, ಜ್ಞಾನದ ಬೆಳಕಿನಲ್ಲಿ, ಭಕ್ತಿಯ ಖನಿ, ವೈರಾಗ್ಯದ ನಿಧಿಯಾದ ಅಕ್ಕ ಮುನ್ನಡೆಯುತ್ತಾಳೆ. 'ಲಾಂಛನಕ್ಕೆ ಮಣಿವೆನಯ್ಯ' ಎಂಬ ಅಣ್ಣನವರ ಮಾತಿನಂತೆ ಶಿವಶರಣರ, ಅನುಭಾವಿಗಳ ಮಹತ್ವ ಎಂತಹ ಶ್ರೇಷ್ಠವಾದುದೆಂದು ತಿಳಿದುಬರುತ್ತದೆ.

ನೀತಿಯನ್ನೂ ಬೋಧಿಸುವ ವಿಷಯ ನಮ್ಮ ದೇಶದ ಸಂಸ್ಕೃತಿ ಮತ್ತು ಸಾಹಿತ್ಯಗಳಲ್ಲಿ ಅತಿ ಪ್ರಾಚೀನ ಕಾಲದಿಂದಲೂ ಬಂದಿರುವ ಅಂಶವಾಗಿದೆ. ಒಂದೊಂದು ಮತಧರ್ಮದವರೂ ಒಂದೊಂದು ರೀತಿಯಲ್ಲಿ, ಯುಗ ಪ್ರವರ್ತಕರು, ಧರ್ಮ ಸಂಸ್ಥಾಪಕರು, ಈ ನೀತಿ ಬೋಧೆಯ ಕಾರ್ಯವನ್ನು ಮಾಡಿದ್ದಾರೆ. ಆ ಸಂಪ್ರದಾಯದ ನಿರ್ಮಲ ಲಹರಿ, ಅಣ್ಣನವರ ಕಾಲದಲ್ಲೂ ಪೂರವಾಗಿ ಹರಿಯಿತು. ಅನಂತರ ಬಂದ ಹರಿದಾಸರ ಕೃತಿಗಳಲ್ಲೂ ಇದಕ್ಕೆ ಹೆಚ್ಚಿನ ಮನ್ನಣೆ ದೊರೆಯಿತು. ಲೋಕದಲ್ಲಿ ಒಳ್ಳೆಯ ಮತ್ತು ಕೆಟ್ಟ ಎರಡು ರೀತಿಯ ಜನರೂ ಇದ್ದಾರೆ. ನೀತಿಮಾರ್ಗದಲ್ಲಿ ನಡೆವವರು ಒಳ್ಳೆಯವರಾದರೆ, ಅನೀತಿಯನ್ನೂ ಅನುಸರಿಸುವವರು ಅಷ್ಟೇ ಕೆಟ್ಟವರಾಗಿರುತ್ತಾರೆ. ಆದ್ದರಿಂದ ನಾವು ಎಂಥವರ ಸಹವಾಸ ಮಾಡಬೇಕು ಎಂಬ ವಿಚಾರವಾಗಿ ಅಕ್ಕ, ಒಂದು ಒಳ್ಳೆಯಮಾರ್ಗದರ್ಶನ ನೀಡಿದ್ದಾರೆ.

ಅರಿಯದವರೊಡನೆ ಸಂಗವ ಮಾಡಿದರೆ,
ಕಲ್ಲು ಹೊಯ್ದು ಕಿಡಿಯ ತೆಗೆದುಕೊಂಬಂತೆ
ಬಲ್ಲವರೊಡನೆ ಸಂಗವ ಮಾಡಿದರೆ ಹೊಸೆದು
ಬೆಣ್ಣೆಯ ತೆಗೆದುಕೊಂಬಂತೆ,
ಚನ್ನಮಲ್ಲಿಕಾರ್ಜುನಯ್ಯ
ನಿಮ್ಮ ಶರಣರ ಸಂಗ ಕರ್ಪುರಗಿರಿಯ ಉರಿ
ಕೊಂಡಂತೆ ||

ಈ ವಚನದ ಒಂದೊಂದು ಮಾತು ಮುತ್ತಿನಂತಹುದು. ಕಡೆಯಲ್ಲಿ ಕೊಟ್ಟಿರುವ (ಅಕ್ಕನ) ಉಪಮೆಗಳಂತು ಭಕ್ತ ಶ್ರೇಷ್ಠಳಾದ ಅಕ್ಕಮಹದೇವಿಯ ಭಕ್ತಿ ಶ್ರೀಗಿಟ್ಟ ಕಳಶದಂತಿದೆ. ಡಾ|| ತಿಪ್ಪೇರುದ್ರ ಸ್ವಾಮಿಯವರು ಅಕ್ಕನ ಚೊಕ್ಕವಾದ ಜೀವನ ಚರಿತ್ರೆಯನ್ನೂ ಕುರಿತು ತಮ್ಮ ಕೃತಿಯೊಂದಕ್ಕೆ ''ಕದಳಿಯ ಕರ್ಪೂರ'' ಎಂಬ ಹೆಸರಿಟ್ಟಿದ್ದಾರೆ. ಬರೆದ ಕೃತಿಗೆ ಕೊಟ್ಟ ಹೆಸರು ಔಚಿತ್ಯ ಪೂರ್ಣವಾಗಿರುವುದನ್ನು ಕಾಣಬಹುದು. ಇಲ್ಲಿ ಅಕ್ಕನ ವಚನದಲ್ಲಿ ಕಂಡುಬರುವ, ''ನಿಮ್ಮ ಶರಣರ ಸಂಗ ಕರ್ಪೂರ ಗಿರಿಯ ಉರಿಕೊಂಡಂತೆ'' ಎಂಬ ಸುಂದರ ರೂಪಕ ಎಷ್ಟು ಮಹಿಮೋನ್ನತವಾದುದೆಂದು ತಿಳಿದಷ್ಟು ಅದರ ಅನುಭವ ನಮಗೆ ಅದ್ಭುತ ರಮ್ಯವಾಗಿ ಕಾಣುತ್ತದೆ. 'ಗುರುಮುಟ್ಟಿದ್ದು ಗುಡ್ಡ' ಎಂಬ ಮಾತು ಭಕ್ತ ಲೋಕದಲ್ಲಿದೆ, ಅಲ್ಲಿ ಗುರುವಿನ ಮಹಿಮೆಯನ್ನೂ ಅದು ಸಾರಿ ಹೇಳುತ್ತದೆ. ಹಾಗೆಯೆ ಶಿವಶರಣರ ಸಂಗವೆಂಬುದು–ಕರ್ಪೂರದ ಗಿರಿಯ ಉರಿಕೊಂಡಂತೆ–ಅನಂತರದಲ್ಲಿ, ಅಲ್ಲಿ ನೋಡಲು ಅವಶೇಷ ಏನೂ ಉಳಿಯಲಾರದು. ಎಲ್ಲವೂ ನಿಶ್ಶೇಷವಾಗುತ್ತದೆ. ಹಾಗೆಯೆ ಜೀವಾತ್ಮ ಪರಮಾತ್ಮನಲ್ಲಿ ಒಂದಾಗಿ, ಮುಕ್ತಿಯನ್ನೂ ಪಡೆಯುತ್ತಾನೆ. ಅಕ್ಕ–ಶ್ರೀ ಶೈಲದ ಕದಳಿ ವನದಲ್ಲಿ ಚೆನ್ನಮಲ್ಲಿಕಾರ್ಜುನನೊಡನೆ ಒಂದಾದಳು, ಎಂಬ ವಿಚಾರ, ಈ ಮೇಲಿನ ಮಾತಿಗೆ ಎಷ್ಟು ಪುಷ್ಟಿಯನ್ನು ಕೊಡುತ್ತದೆ. ಬಯಲಾಗುವುದು, ಎನ್ನುವ ಮಾತಿನ ತಾತ್ವಿಕರೂಪ, ಶಿವನೊಡನೆ ಒಂದಾಗುವುದು–ಲೀನವಾಗುವುದು, ಮುಕ್ತಿಯನ್ನು ಪಡೆಯುವುದು, ಎಂಬರ್ಥಗಳನ್ನು ಕೊಡುತ್ತದೆ. ಶಿವಶರಣರ ಶ್ರೇಷ್ಠತೆ, ಹಿರಿದಾದುದು, ಅವರಸಂಗ, ಸಿರಿಗೆ ಸಮಾನ ಅದು ಹಿರಿಮೆಯ ಗಿರಿಯನ್ನೂ ಹತ್ತಿಸಬಲ್ಲುದು. ಅದರ ಮಹಿಮೆಯಿಂದ ಭವದಭವತ್ವ ಕಳೆದು ದಿವದ ದೈವತ್ವ ದೊರೆಯುತ್ತದೆ. ಈ ಮಾತಿನ ಹಿರಿಮೆಗೆ ಸಾಕ್ಷಿಯಾಗಿ "ನನಗಿಂತ ಕಿರಿಯರಿಲ್ಲ ಶಿವಶರಣರಿಗಿಂತ ಹಿರಿಯರಿಲ್ಲ" ಎಂಬ ಅಣ್ಣನವರ ನಮ್ರ ನುಡಿಯೇ ಸಾಕ್ಷಿಯಾಗಿದೆ.

ಅಕ್ಕನವರ ವಚನಗಳಲ್ಲಿ ಕಂಡುಬರುವ, ಉಪಮಾ ರೂಪಕಗಳಲ್ಲಿ, ಮೇಲಿನ ಕೆಲವು ಸ್ವರೂಪಗಳನ್ನೂ ಈವರೆಗೆ ಅವುಗಳ ಅರ್ಥ ಸಂಕೇತ, ಔಚಿತ್ಯ ಪೂರ್ಣ ಪ್ರಯೋಗ, ಸರಳ ಮತ್ತು ಸೌಂದರ್ಯದ ದೃಷ್ಟಿಯಿಂದ ಪರಿಶೀಲನೆ ಮಾಡಿದಾಗ, ವಚನ ಸಾಹಿತ್ಯವು, ವಿಶ್ವದ ಶ್ರೇಷ್ಠ ಸಾಹಿತ್ಯಗಳ ಮಟ್ಟಕ್ಕೆ ಏರುವಲ್ಲಿ ಅಲಂಕಾರಗಳ ಪಾತ್ರದ ಹಿರಿಮೆಯೂ ಕಂಡುಬರುತ್ತದೆ. ಶ್ರೇಷ್ಠ ಸಾಹಿತ್ಯದಲ್ಲಿರಬೇಕಾದ, ಎಲ್ಲ ಲಕ್ಷಣಗಳೂ, ಕಾವ್ಯಗುಣಗಳೂ, ವಚನಕಾರರ ವಚನಗಳಲ್ಲಿ ಹೇರಳವಾಗಿ ಕಂಡುಬರುತ್ತವೆ. ಅಣ್ಣನವರ ಮತ್ತು ಮಹದೇವಿಯಕ್ಕನವರ, ವಚನಗಳಲ್ಲಂತೂ ಆ ಕಾವ್ಯಗುಣ, ಬಹುಮುಖವಾದ ಜೀವನ ರಂಗದಿಂದ ಹೊರಸೂಸಿ, ಪ್ರತಿಯೊಬ್ಬ ವ್ಯಕ್ತಿಯ ಬಾಳಿಗೂ ಬೇಕಾದ ಬೆಳಗಾಗಿ, ಆತ್ಮಕ್ಕೆ ಬೇಕಾದ ಅನುಭಾವ ದೀಪ್ತಿಯಾಗಿ ಅಂತರಂಗ ಪರಿಶುದ್ಧತೆಗೂ ಭಕ್ತನ ಮುಕ್ತಿ ಪಥಕ್ಕೂ ದಾರಿ ದೀಪವಾಗಿದೆ.

# ಅರಳ ಬಯಸುವೆ

೧

ತನ್ನ ವೃಂತದಲ್ಲಿ ತಾನೆ
ಸುಳಿದ ಗಾಳಿಯುಸಿರಿನಲ್ಲಿ
ತೆರೆದ ದಳದ ದಿವ್ಯಪುಷ್ಪ
ಅರಳಿ ಸುರಭಿ ಸಲಿಸುವಂತೆ
ಜೀವ ನಿನ್ನ ವ್ಯೂಹದಲ್ಲೆ ಅರಳ ಬಯಸುವೆ
ಮುಚ್ಚಿದರಳ ಆತ್ಮನನ್ನು ತೆರೆಯಲೆಳಸುವೆ!

೨

ಸುಖದ ಕನಸಿನಲೆಯ ಮೇಲೆ
ರೂಪುರಸದ ರಾಗಲೀಲೆ!
ತೂಗುಮಂಚ ಮೋಹಮಾಲೆ!
ದಿವ್ಯನೌಕೆ ತೇಲುತಿರಲಿ!
ಪದ್ಮಪುಷ್ಪ ನೀರಿನಲ್ಲಿ
ಸೋಂಕಿ ನಿಂದು ಸೋಂಕದಂತೆ
ಕಾಂತಿ ಶಾಂತಿ ಸಾಧಿಪಂತೆ
ಜೀವ ನಿನ್ನ ವ್ಯೂಹದಲ್ಲಿ ಅರಳಬಯಸುವೆ!
ಮುಚ್ಚಿದರಳ-ಆತ್ಮನನ್ನು ತೆರೆಯಲೆಳಸುವೆ!

೩

ದುಃಖಲಾತವೊಮ್ಮೆ ಸುಳಿದು
ಜಟಿಲ ಜೀವ ಬೆನ್ನ ಹಿಡಿದು
ಅಲಗನಿಕ್ಕಿ ಒಮ್ಮೆ ಚೀರಿ
ತೊಟ್ಟ ಹಸಿಯೆ ನೆತ್ತರಾಗಿ
ಬಿಟ್ಟ ಉಸಿರೆ ಬೆಂಕಿಯಾಗಿ
ಶಾಂತಿ ಸೈಪು ಕಳೆದರೂ
ಮೆಲ್ಲನೆವೆಯ ಭಾರವಿಳುಹಿ
ಸುಖದ ಮೋಹವನ್ನು ಕಳಚಿ ಸುಖದ ದುಃಖ.
ದುಃಖ ಸುಖದ ಸಾಮರಸ್ಯವನ್ನು ಸಾರ್ದು
ಜೀವ ನಿನ್ನ ವ್ಯೂಹದಲ್ಲೆ ಅರಳಬಯಸುವೆ!
ಮುಚ್ಚಿದರಳ-ಆತ್ಮನನ್ನು ತೆರೆಯಲೆಳಸುವೆ!

೪

ಗವಿಯ ಗೂಡು ಜಪದ ಮಣಿಯು
ಮಂತ್ರಪೂತ ಯೋಗದಂಡ
ನಿಲುಕ ಎಂದಿನೆಳೆಗೆ ಬಿಡು!
ಶಾಂತಿ ತೃಪ್ತಿ ಕಡೆಯ ಸುಖವು
ಸೊಗವು ದುಗುಡ ಒಂದೆ ಮುಖವು
ಇದೇ ಜೀವವಾದಿ ಮಂತ್ರ!
ಲೋಕಕೆಲ್ಲ ಶಾಂತಿ ಬಯಸಿ,
ಎಲ್ಲ ಜೀವ ಹಿತವ ಸಲಿಸಿ,
ಜೀವ ನಿನ್ನ ವ್ಯೂಹದಲ್ಲೆ ಅರಳಬಯಸುವೆ!
ಮುಚ್ಚಿದರಳ-ಆತ್ಮನನ್ನು ತೆರೆಯಲೆಳಸುವೆ

—ನಂದಕಿಶೋರ

# ಪ್ರಶ್ನೆ - ಉತ್ತರ

**ಶ್ರೀ ಕೆ. ಎಂ. ಮುನಿಷಿಯವರ ಉತ್ತರಗಳು**

ಪ್ರಶ್ನೆ :—ಬರಿಗೈಯಲ್ಲಿ ದೇವಾಲಯಗಳಿಗೆ ಹೋಗುವುದು ಸರಿಯಾದುದೆ?

ಉತ್ತರ :—ಸರಿಯಲ್ಲ. ನೀವು ವಿನಯ ಭಕ್ತಿಪೂರ್ಣವಾದ ಹೃದಯದಿಂದ ಏನನ್ನಾದರೂ ಅರ್ಪಿಸಬೇಕು. ನಿಮ್ಮದರಲ್ಲಿ ಒಂದಿಷ್ಟನ್ನು ದೇವರಿಗರ್ಪಿಸುವುದೇ ಒಂದು ಯಜ್ಞವೆಂದು ತಿಳಿಯಿರಿ. ಇದು ನಿಮ್ಮನ್ನು ಭಕ್ತಿಮಾರ್ಗದ ಕಡೆಗೆ ಒಯ್ಯುತ್ತದೆ.

ಪ್ರಶ್ನೆ :—ನನ್ನ ಜ್ಞಾಪಕಶಕ್ತಿಯನ್ನು ವೃದ್ಧಿಮಾಡುವಂತಹ ಔಷಧಿಯನ್ನೇನಾದರೂ ಸೂಚಿಸಬಲ್ಲಿರಾ?

ಉತ್ತರ :—ನೀವು ಮಾಡಬೇಕಾದ ಕಾರ್ಯವನ್ನು ಎಚ್ಚರಿಕೆಯಿಂದ ಏಕಾಗ್ರಚಿತ್ತದಿಂದ ನಿರ್ವಹಿಸುವುದೇ ಸರಿಯಾದ ಔಷಧಿ.

ಪ್ರಶ್ನೆ :—ನಮ್ಮ ಮತಧರ್ಮಗಳಲ್ಲಿ ಅನೇಕ ದೇವರುಗಳು ತಮ್ಮ ಕೈಯಲ್ಲಿ ಕಮಲವನ್ನು ಹಿಡಿದಿರುತ್ತಾರೆ ಇಲ್ಲವೆ ಕಮಲದ ಮೇಲೆ ಮಂಡಿಸಿರುತ್ತಾರೆ. ಇದರ ಅರ್ಥವೇನು ಹೇಳಬಲ್ಲಿರಾ?

ಉತ್ತರ :—ಕಮಲವೆಂದರೆ ಮಾನಸಿಕ ಹಾಗೂ ದೈಹಿಕ ಪರಿಶುದ್ಧತೆಯ ಸುಂದರ ಕುರುಹು.

ಪ್ರಶ್ನೆ :—ಪ್ರೇಮ ಮತ್ತು ಕಾಮ—ಇವುಗಳಲ್ಲಿ ಪರಸ್ಪರ ಭೇದವೇನು?

ಉತ್ತರ :—ಮನಃಶಾಸ್ತ್ರದ ಹಾಗೂ ಆಧ್ಯಾತ್ಮಿಕ ಐಕ್ಯಬಂಧನದ ಸಂಶೋಧನೆಯನ್ನು ಮಾಡದೆ ಪ್ರಾಣಿಗಳಂತೆ ಆಸೆಯನ್ನೀಡೇರಿಸಿಕೊಳ್ಳುವುದೇ ಕಾಮ. ಮನಃಶಾಸ್ತ್ರಾನುಸಾರವಾಗಿಯೂ, ಆಧ್ಯಾತ್ಮಿಕವಾಗಿಯೂ ಐಕ್ಯತೆಯನ್ನು ಪಡೆಯುವುದೇ ಪ್ರೇಮ.

ಪ್ರಶ್ನೆ :—ನಿರಾಕಾರನಾದ ಪರಮಾತ್ಮನಿಗೆ ಆಕಾರ ಕಲ್ಪಿಸಿರುವುದೇಕೆ?

ಉತ್ತರ :—ಅಪೂರ್ಣ ಮಾನವನು ನಿರಾಕಾರನಾದ ಪರಮಾತ್ಮನ ಅನಂತತೆಯ ಅರಿವು ಮಾಡಿಕೊಳ್ಳಲಾರ.

ಪ್ರಶ್ನೆ :—ಮಾನವದೇಹವನ್ನು ಅಜರಾಮರವನ್ನಾಗಿ ಮಾಡಿಕೊಳ್ಳುವ ಸಾಧ್ಯತೆ ಇದೆಯೆ?

ಉತ್ತರ :—ಸಾಧ್ಯವಿಲ್ಲ. ಹುಟ್ಟು ಸಾವುಗಳು ಭಗವಂತನ ನಿಯಮ.

ಪ್ರಶ್ನೆ :—ಪ್ರಾರ್ಥನೆಯಿಂದ ಯಾವ ಗುರಿಯನ್ನಾದರೂ ಸಾಧಿಸಬಹುದೆಂದು ಇತ್ತೀಚೆಗೆ ನೀವೊಂದು ಸಲ ಹೇಳಿದಿರಿ. ಹಾಗಾದರೆ ಯಾವನೇ ಆದರೂ ಹೃತ್ಪೂರ್ವಕವಾದ ಪ್ರಾರ್ಥನೆಯಿಂದ ಬಯಸಿದ್ದನ್ನು ಸಾಧಿಸಲು ಸಾಧ್ಯವೆ?

ಉತ್ತರ :—ಪರಮಾತ್ಮನಲ್ಲಿ ಅನನ್ಯ ಶ್ರದ್ಧೆಯಿಂದ ಹೃತ್ಪೂರ್ವಕವಾದ ಪ್ರಾರ್ಥನೆಯನ್ನು ನಡೆಸುವುದೇ ಆದರೆ ಅದ್ಭುತವನ್ನೇ ಸಾಧಿಸಬಹುದು. ಕಾಲಾನುಕ್ರಮದಲ್ಲಿ ನಿಮ್ಮ ಇಂತಹ ಸಾಧನೆಯಿಂದ ನೀವು "ಬಯಸಿದ ಫಲ" ವ್ಯತ್ಯಸ್ಥವೂ ಆಗಬಹುದು.

ಪ್ರಶ್ನೆ :—ಕಲೆಯಿಂದ ಸಾಧಿಸಬಹುದಾದ ಅತ್ಯುತ್ತಮ ಫಲವಾವುದು?

ಉತ್ತರ :—ಬಾಳನ್ನು ಸುಂದರವನ್ನಾಗಿ ಮಾಡುವುದು.

( Bhavan's Journalನಿಂದ ಸಂಗ್ರಹ )

# ಭಾರತಿ

ಲೇಖಕರು :
ಪಿ. ಜಿ. ಶ್ರೀನಿವಾಸನ್

'ಭಾರತಿ' ಎಂದೊಡನೆಯೆ ಅದು ವಾಗ್ದೇವಿಯನ್ನು ಸ್ಮೃತಿ ಪಥಕ್ಕೆ ತರುತ್ತದೆ ಬ್ರಹ್ಮನ ಮಡದಿಯೇ ಭಾರತಿ. ಈ ನಾಮವು ತ ಮಿ ಳ ರ ಮನಸ್ಸಿಗೆ, ಬೇರೊಂದು ವ್ಯಕ್ತಿಯನ್ನು ನೆನಪು ಮಾಡಿಕೊಡುತ್ತದೆ. ಹೀಗೆ ಪ್ರಸಿದ್ಧವಾದ ಒಂದು ಹೆಸರು ಮತ್ತೊಬ್ಬ ವ್ಯಕ್ತಿಗೆ ಅನ್ವಯಿಸುವುವೆಂದ ಮೇಲೆ ಆ ವ್ಯಕ್ತಿಯ ವಿಶೇಷ ಯೋಗ್ಯತೆಯು ತಾನಾಗಿಯೇ ವ್ಯಕ್ತವಾಗುತ್ತದೆ. ಆಸ್ಥಾನ ಪಂಡಿತರುಗಳಿಂದ ಇನ್ನೂ ಹದಿಮೂರು ವರ್ಷ ವಯಸ್ಸು ತುಂಬುವುದರೊಳಗಾಗಿ ಈ 'ಭಾರತಿ'ಯೆಂಬ ಬಿರುದನ್ನು ಪಡೆದ ವ್ಯಕ್ತಿಯು ಬದುಕಿದ್ದ ಕಾಲದಲ್ಲಿ ದಾರಿದ್ರ್ಯವನ್ನನುಭವಿಸಿದರೂ ಇಂದು ಜಗತ್ತಿನಲ್ಲಿ ವಿಶೇಷವಾಗಿ ಗೌರವಿಸಲ್ಪಡುತ್ತಿರುವರು ಅವರನ್ನು ಕುರಿತು ಸ್ವಲ್ಪಮಟ್ಟಿಗೆ ತಿಳಿಯೋಣ.

ಸುಬ್ಬಯ್ಯನೆಂದು ಕರೆಯಲ್ಪಡುತ್ತಿದ್ದ ವರಕವಿ ಚಿ. ಸುಬ್ರಹ್ಮಣ್ಯ ಭಾರತಿಯು ಜನ್ಮ ತಾಳಿದುದು 1882 ನೆಯ ಇಸವಿ ಡಿಸೆಂಬರು ತಿಂಗಳು 11ನೆಯ ತಾರೀಖಿನ ದಿನ. ಜನ್ಮಸ್ಥಳ ತಿರುನೆಲ್ವೇಲಿ ಜಿಲ್ಲೆಯ 'ಶೀವಲಪ್ಪೇರಿ' ಎಂಬ ಗ್ರಾಮ. ತಂದೆಯವರು ಚಿನ್ನಸ್ವಾಮಿಐಯ ರೆಂಬುವರು. ತಾಯಿಯವರು ಕಮಲೆಯ ಹೆಸರುಳ್ಳ ವರು. ವರಕವಿಯಾಗಿ ಬೆಳಗಲಿರುವ ಸುತನನ್ನು ಸಾಕಿ ಸಲಹಿ ಆನಂದಿಸುವ ಸುಯೋಗವು ತಾಯಿಗೆ ಲಭಿಸಲಿಲ್ಲ. ತಾಯ ಆದರ, ಪ್ರೀತಿಗಳಿಂದ ಬೆಳೆಯುವ ಭಾಗ್ಯವು ಮಗುವಿಗೂ ಇರಲಿಲ್ಲ.

ಚಿನ್ನಸ್ವಾಮಿ ಐಯರವರು 'ಎಟ್ಟೈಯಪುರದ ಜಮೀನುದಾರರ ಓಲಗದಲ್ಲಿದ್ದವರು. ತಮಿಳು, ಸಂಸ್ಕೃತ ಆಂಗ್ಲ ಭಾಷಾ ಪಂಡಿತರು. ಮಗನಿಗೆ ಪ್ರಥಮ ಗುರು ವಾಗಿದ್ದು ಅಕ್ಷರಾಭ್ಯಾಸ ಮಾಡಿಸಿದರು. ಶಾಲೆಗೆ ಸೇರಿದ ಸುಬ್ಬಯ್ಯನಿಗೆ ತಮಿಳು ಪದ್ಯವೆಂದರೆ ಕಬ್ಬು ಸಿಕ್ಕಿದಂತೆ. ವಿಶೇಷ ಕುತೂಹಲದಿಂದ ಕಲತು, ಮುಂದುವರಿದನು. ಇತರ ಪಾಠಗಳಲ್ಲಿ ಅಷ್ಟಾಗಿ ಶ್ರದ್ಧೆಯನ್ನು ತೋರಿಸಲಿಲ್ಲ. ಹುಟ್ಟಿನಲ್ಲೇ ಕವಿತಾ ಶಕ್ತಿಯನ್ನು ಪಡೆದಿದ್ದವರವರು. ಆಸ್ಥಾನ ಕವಿಗಳ ಜೊತೆಯ ಅವರಲ್ಲಿ ಹುದುಗಿದ್ದ ಈ ಶಕ್ತಿಯನ್ನು ಕೆರಳಿಸಿದುದರ ಪರಿಣಾಮವಾಗಿ ಇನ್ನೂ 'ಹುಡುಗ' ಎಂಬ ವಯಸ್ಸಿನಲ್ಲೇ ಕವಿಗಳನ್ನು ಹಾಡ ತೊಡಗಿದರು.

ಭಾಷಾ ಜ್ಞಾನವನ್ನು ಸಂಪಾದಿಸಿ ಛಂದಸ್ಸಿನ ವಿವರಗಳನ್ನೆಲ್ಲ ಚೆನ್ನಾಗಿ ತಿಳಿದುಕೊಂಡು ಪದ್ಯ ಬರೆ ಯಲು ಕುಳಿತರೆ ಪದ್ಯಗಳು ಅಷ್ಟು ಸುಲಭವಾಗಿ ರೂಪು ಗೊಳ್ಳುವುದಿಲ್ಲ. ಪದಗಳನ್ನು ಹುಡುಕಿ, ಪ್ರಾಸದ ಕಡೆಗೆ ಗಮನವಿಟ್ಟು ಚೆನ್ನಾಗಿ ಕಟ್ಟಿದ ಪದ್ಯಗಳಲ್ಲನೇಕ ಅರ್ಥ ಗಾಂಭೀರ್ಯ, ಆಳ ಮುಂತಾದುವುಗಳನ್ನೊಳಗೊಂಡಿರು ವುದಿಲ್ಲ. ಹುಟ್ಟು ಕವಿಗಳು ಹಾಗಲ್ಲ, ಸ್ಫೂರ್ತಿ ಉಕ್ಕಿ ಹಾಡಲು ಉ ಪ ಕ್ರ ಮಿ ಸಿ ದ ರೆ ಪದಗಳು ಕಾದಿದ್ದು, 'ನಾಮುಂದು, ನೀಮುಂದು' ಎಂದು ರಭಸದಿಂದ ಹೊರ ಬೀಳುತ್ತವೆ. ಪದ್ಯ ಪದ್ಯವಾಗಿ ರೂಪುಗೊಳ್ಳುತ್ತದೆ, ಯಾವ ಶ್ರಮವೂ ಇಲ್ಲದೆ. ಈ ಬಗೆಯ ಕವಿ ಸುಬ್ಬಯ್ಯ 'ಏನೋ ಮಗು. ನಮ್ಮನ್ನು ಅನುಕರಣ ಮಾಡುತ್ತಿದೆ ಎಂದ ಪಂಡಿತರ ಗಮನವನ್ನು ಸೆಳೆದು 'ಭಾರತಿ' ಎಂಬ ಬಿರುದನ್ನು ತಂದುಕೊಟ್ಟ ಅನುಕರಣವಾಗಿ ಅದು ಪರಿಣಮಿಸಿತು.

ಆಸ್ಥಾನದಲ್ಲಿ ಕಾಂತಿಮತಿನಾಥಪಿಳ್ಳೈಯೆಂಬುವ ರೊಬ್ಬರಿದ್ದರು. ಕವಿತಾ ರಚನೆಯಲ್ಲಿ ಹೆಸರು ಪಡೆದಿ ದ್ದರು 'ಇಷ್ಟು ಚಿಕ್ಕ ವಯಸ್ಸಿನಲ್ಲಿ ಇವನಿಗೆ ಹೆಸರೆ' ಎಂಬ ಅಸೂಯೆಯು ಅವರಲ್ಲಿ ಮೂಡಿತು. ಹೇಗಾದರೂ ಅವರನ್ನು ಅಪಮಾನ ಗೊಳಿಸಬೇಕೆಂದು ಸಮಯ ನಿರೀಕ್ಷಣೆ ಮಾಡುತ್ತಿದ್ದರು. ಒಂದು ದಿನ ಎಲ್ಲರ ಮುಂದೆ ಭಾರತಿಯನ್ನು ಕುರಿತು, "ಎಲ್ಲಿ, ನಿನ್ನ ಕವಿತಾ ಶಕ್ತಿಯನ್ನು ನೋಡೋಣ. 'ಭಾರತಿ ತಿನ್ನಪ್ಪಯಲ್' ಎಂಬ ಕೊನೆಯ ಪಾದವನ್ನಿಟ್ಟು ಒಂದು (ವೆಣ್ಬಾ) ಪದ್ಯ ಬರಲಿ" ಎಂದರು. ತತ್‌ಕ್ಷಣ ಪದ್ಯವು ಹೊರ ಹೊಮ್ಮಿತು. ಮೂರನೆಯ ಪಾದದ ಕೊನೆಯ ಪದವಾಗಿ 'ಕಾಂತಿಮತಿ ನಾಥನ್ನೈ' ಎಂದಿಟ್ಟು. 'ಭಾರತಿ ತಿನ್ನಪ್ಪಯಲ್

ಎಂದು ಅದು ಮುಗಿದಿತ್ತು. [ತಮಿಳಿನಲ್ಲಿ ವರ್ಗೈಕ ಅಕ್ಷರ, 'ಭಾ' ಪಾ ಎಂದು ಬರೆಯಲ್ಪಡುತ್ತದೆ.] 'ಪಾರತಿ' ಎಂಬುದು 'ಪಾರ್—ಅತಿ' ಎಂದಾಗಿ, 'ಕಾಂತಿಮತಿ ನಾಥನನ್ನು ನೋಡು. ಅತಿ ಕೀಳಾದವನು' ಎಂದು ಕೊನೆಯ ಪಾದವು ಅರ್ಥಕೊಟ್ಟಿತು. ಪೊಗರು ಉಡುಗಿ ಹೋಯಿತು. 'ವರಕವಿ ಅಲ್ಲವೆ!'

ಭಾರತಿಯು ಗೃಹಸ್ಥರಾದುದು ತಮ್ಮ ಹದಿನೈದ ನೆಯ ವಯಸ್ಸಿನಲ್ಲಿ. ಪತ್ನಿಯ ಹೆಸರು ಶೆಲ್ಲಮ್ಮ. ಮೂರನೆಯ ವರ್ಷ ತಂದೆಯು ಈಶನನ್ನು ಸೇರಿದರು. ಭಾರತಿಯು ಕಾಶಿಗೆ ತೆರಳಿದರು. ಅಲ್ಲಿ ತಮ್ಮ ಸೋದರ ತ್ತೆಯ ಮನೆಯಲ್ಲಿದ್ದರು. ಅಲ್ಲಿ ಹಿಂದುಸ್ಥಾನಿ, ಸಂಸ್ಕೃತ ಗಳನ್ನು ಕಲಿತು ಸಂಸ್ಕೃತದ ಪರೀಕ್ಷೆಯಲ್ಲಿಯೂ ಉತ್ತೀರ್ಣರಾದರು. ಮೂರು ವರ್ಷಗಳ ಕಾಲ ಅಲ್ಲಿ ವ್ಯಾಸಂಗವು ಜರುಗಿತು.

ಎಟ್ಟೈಯಪುರದ ಜಮೀನ್ದಾರರು ಆಹ್ವಾನಿಸಲು ಭಾರತಿಯವರು ಅಲ್ಲಿಗೆ ಬಂದು ಆಸ್ಥಾನ ಕವಿಯಾದರು. ತಮ್ಮ ಕವಿತೆಯಿಂದ ಜಮೀನ್ದಾರರನ್ನೂ ಇತರರನ್ನೂ ಆನಂದಗೊಳಿಸುತ್ತಿದ್ದರು.

ಕವಿಗಳ ಮನೋಭಾವವೇ ಒಂದು ವಿಚಿತ್ರ ರೀತಿ ಯದು. ವರಕವಿಗಳಾಗಿದ್ದರೆ ಅದು ವಿಚಿತ್ರದಲ್ಲೂ ವಿಚಿತ್ರ. ವರಕವಿಗಳಾದ ಭಾರತಿಯವರಿಗೆ ಆಸ್ಥಾನದ ಬಾಳ್ವಿಕೆಯಲ್ಲಿ ಬೇಸರಹುಟ್ಟಿತು. ಮದುರಾ ನಗರಕ್ಕೆ ಹೋಗಿ ಅಲ್ಲಿ ಸೇತುಪತಿ 'ಹೈಸ್ಕೂಲ್'ನಲ್ಲಿ ಕೆಲಕಾಲ ತಮಿಳು ಅಧ್ಯಾಪಕರಾಗಿ ಕೆಲಸ ಮಾಡಿದರು. ಅಲ್ಲಿಂದ ಮದರಾಸಿಗೆ ತೆರಳಿದರು. 'ಸ್ವದೇಶ ಮಿತ್ರನ್' ಎಂಬ ಪತ್ರಿಕೆಯಲ್ಲಿ ಉಪ ಸಂಪಾದಕರಾದರು. "ಚಕ್ರವರ್ತಿನಿ" ಎಂಬ ಮಾಸ ಪತ್ರಿಕೆ, "ಇಂಡಿಯಾ" ಎಂಬ ವಾರ ಪತ್ರಿಕೆಗಳನ್ನು ಪ್ರಕಟಿಸಿದರು. ಈ ಸಂದರ್ಭದಲ್ಲಿ ಅವರು ಅನೇಕ ಕವಿತೆಗಳನ್ನು ರಚಿಸಿದುದಲ್ಲದೆ ಉತ್ತಮ ಪ್ರಬಂಧ ಗಳನ್ನೂ ಬರೆದರು.

ಈ ಸಂದರ್ಭದಲ್ಲಿ ಸ್ವಾತಂತ್ರ್ಯ ಚಳುವಳಿಯು ಬಿಸಿಯೇರುತ್ತಿತ್ತು. ಕವಿಯ ಮನಸ್ಸು ಸೆಳೆಯಲ್ಪಟ್ಟು ಹೊಸ ಕವಿತೆಗಳು ರೂಪುಗೊಂಡುವು. ಇಂದು ಪ್ರಪಂ ಚಕ್ಕೆ ಭಾರತಿಯು ವಿಶೇಷವಾಗಿ "ಸ್ವಾತಂತ್ರ್ಯ ಕವಿ" ಎಂದು ಪ್ರಸಿದ್ಧರಾಗಿದ್ದಾರೆ. ಅವರ ಆ ಕಾಲದ ಕೃತಿಗಳೇ ಇದಕ್ಕೆ ಕಾರಣ. ಬಾಲಗಂಗಾಧರ ತಿಲಕರು ಭಾರತಿಯ ಆದರ್ಶ ಪುರುಷರಾದರು.

ಆಗ ನಡೆದ ಅನೇಕ ಸಭೆಗಳಲ್ಲಿ ಭಾರತಿಯವರು ಭಾಷಣ ಮಾಡಿದರು. ಸಮಯೋಚಿತವಾದ ಕವಿತೆಗಳು ಅಲ್ಲಲ್ಲೇ ರೂಪುಗೊಂಡುವು. ತಮ್ಮದೇ ಆದ ಪ್ರತ್ಯೇಕ ವಾಣಿಯಲ್ಲಿ ಅವುಗಳನ್ನು ಹಾಡಿ ಜನರ ಮನಸ್ಸುಗಳನ್ನು ಅವರು ಕೆರಳಿಸಿದರು. ಆ ಕೃತಿಗಳು ಎಲ್ಲವೂ ಇಂದಿಲ್ಲ. ಬರೆದಿಟ್ಟಿದ್ದರಲ್ಲವೆ? ಸಮಯ ಸ್ಫೂರ್ತಿಯ ಕಾರಣ ಹೊರ ಹೊಮ್ಮಿದ ಅವು ಇದ್ದಿದ್ದರೆ, ಅವುಗಳನ್ನು ರಚಿಸಿದ ಶಕ್ತಿಯ ಅರಿವು ಇನ್ನೂ ಹೆಚ್ಚಾಗುತ್ತಿತ್ತು.

ತಮ್ಮನ್ನು ಸೆರೆ ಹಿಡಿಯಬಹುದೆಂದು ಭಾರತಿಯು ಪುದುಚ್ಚೇರಿಗೆ (ಪಾಂಡುಚೆರಿ) ಹೊರಟುಹೋದರು. ಆಗ ಫ್ರೆಂಚರ ಆಡಳಿತದಲ್ಲಿದ್ದ ಅಲ್ಲಿ ಆಂಗ್ಲೇಯರು ಅವರನ್ನೇನೂ ಮಾಡುವಂತಿರಲಿಲ್ಲ. ಅಲ್ಲಿ ಅವರಿಗೆ ದೇಶ ಭಕ್ತಾಗ್ರಣಿ ವಿ. ವಿ. ಎಸ್. ಐಯರ್ ಅವರ ಸ್ನೇಹವು ದೊರಕಿ ಅದರ ಪರಿಣಾಮವಾಗಿ ದೇಶಭಕ್ತಿಯು ಹೆಚ್ಚಿತು. ಅರವಿಂದ ಘೋಷರ ಪರಿಚಯದಿಂದ ಯೋಗ ಮಾರ್ಗ ವನ್ನೂ ತಿಳಿದುಕೊಂಡರು. ಅಲ್ಲಿದ್ದು "ಇಂಡಿಯಾ" ವನ್ನು ಪ್ರಕಟಿಸಿದರು. ಅನೇಕಾನೇಕ ಕವಿತೆಗಳೂ ಲೇಖನಗಳೂ ಹೊರಬಿದ್ದುವು.

ಕಡು ಬಡತನ: ಮಿಸುಕಿದರೆ ಉಗ್ರಕೋಪ; ಪಕ್ಷಿಯಂತೆ ಸ್ವತಂತ್ರ ಮನಸ್ಸು; ಯಾವ ತೊಂದರೆಯೂ ತಡೆಗಟ್ಟದೆ ಹೊರಡುತ್ತಿದ್ದ ಕವಿತೆಗಳು, ಲೇಖನಗಳು; ಕೆಲವರೇ ತಿಳಿದ ಮಿತ್ರರಲ್ಲಿ ಸಲ್ಲಾಪ; ತಮ್ಮ ಕವಿತೆ ಗಳನ್ನು ಕೇಳಲಪೇಕ್ಷಿಸಿದವರಿಗೆ ಹಾಡಿತೋರಿಸಿ ಅವರನ್ನು ಸಂತೋಷ ಗೊಳಿಸುವುದು–ಹೀಗೆ ಕಾಲ ಸಾಗಿತು ಪುದು ಚ್ಚೇರಿಯಲ್ಲಿ. ತಮ್ಮವರನ್ನು ಕಾಪಾಡುವುದರಲ್ಲಿ ಜಾಗರೂಕತೆಯಿದ್ದ ಅವರಿಗೆ ತಮ್ಮನ್ನು ಕುರಿತು ಯಾವ ವ್ಯಥೆಯೂ ಇದ್ದಂತೆ ಕಾಣಲಿಲ್ಲ. ಮಾತನಾಡುತ್ತ ಕುಳಿತಿದ್ದವರು ಆವೇಶ ಬಂದಂತೆ ಎದ್ದು ಕವಿತೆಗಳನ್ನು ರಭಸದಿಂದ ಹಾಡಲುಪಕ್ರಮಿಸುವರಂತೆ! ಮಗುವಿ ನಂತೆ ಮನಸ್ಸುಳ್ಳ ಇವರು ತಮ್ಮ ಜೊತೆಯಲ್ಲಿದ್ದವರನ್ನು ತಮ್ಮ ಕೋಪದಿಂದ ಸ್ವಲ್ಪ ಕಷ್ಟಕ್ಕೆ ಗುರಿ ಮಾಡಿದರೂ ಇವರ ಪ್ರೀತಿಯು ಅದನ್ನು ಮರೆಯಿಸಿ ಇವರ ಜೊತೆ ಯಲ್ಲಿ ಸಂತೋಷಾನುಭವವನ್ನೂ ಮಾಡಿಸಿತು.

1918ನೆಯ ಇಸವಿ ನವಂಬರಿನಲ್ಲಿ ಭಾರತಿಯವರು "ಬ್ರಿಟಿಷ್" ಇಂಡಿಯಾಕ್ಕೆ ಬಂದರು. ಪುದುಚ್ಚೇರಿಯನ್ನು ದಾಟಿದ ಕೂಡಲೇ ಸರಕಾರ ಅವರನ್ನು ಬಂಧಿಸಿ ಕಡಲೂರು ಸೆರೆಯಲ್ಲಿಟ್ಟಿತು. ಸ್ನೇಹಿತರೊಬ್ಬರ ಪ್ರಯತ್ನದ ಫಲವಾಗಿ ಬಿಡುಗಡೆಯಾದರು.

ಅನಂತರ, ಮದರಾಸಿಗೆ ಬಂದು "ಸ್ವದೇಶ ಮಿತ್ರ" ಸೇರಿದರು. ಕಷ್ಟ ಜೀವನ, ದೇಹದಮೇಲೆ ಅಭಿಮಾನವಿಲ್ಲದಿದ್ದದ್ದು ಮುಂತಾದ ಕಾರಣಗಳಿಂದ ಅವರ ಆರೋಗ್ಯವು ಕೆಟ್ಟಿತ್ತು; ಆದರೂ, ಮನಶ್ಶಕ್ತಿಯು ಮಾತ್ರ ಕುಂದದೆ ಕವಿತೆಗಳು ಬರುತ್ತಲೇ ಇದ್ದುವು.

ಪ್ರತಿದಿನ ಪಾರ್ಥಸಾರಥಿಯ ದೇವಸ್ಥಾನಕ್ಕೆ ಹೋಗಿಬರುವ ಪದ್ಧತಿಯೂ, ಆಲಯದ ಆನೆಗೆ ತೆಂಗಿನ ಕಾಯಿ ಹಣ್ಣು ಕೊಡುವ ವಾಡಿಕೆಯೂ ಅವರಲ್ಲಿದ್ದುವು. ಒಂದು ದಿನ ಆನೆಗೆ ಮದ ಹಿಡಿದಿದ್ದನ್ನರಿಯದೆ ಹಣ್ಣು ಕೊಡಲು ಹೋದ ಇವರನ್ನು ಅದು ಎತ್ತಿ ಕುಕ್ಕಿತು. ಇದಾದ ಕೆಲವೇ ದಿನಗಳಲ್ಲಿ ಇವರು ಪಾರ್ಥಿವ ಶರೀರವನ್ನು ತ್ಯಜಿಸಿ ಒಡೆಯನಲ್ಲಿ ಸೇರಲು ಹೊರಟರು

ಭಾರತಿಯವರು ವಿಚಿತ್ರ ಮನೋಭಾವವುಳ್ಳವರು ಮಾತ್ರವಲ್ಲದೆ ದೀರ್ಘದರ್ಶಿಗಳಾಗಿದ್ದರು. ಸ್ವತಂತ್ರ ಭಾರತವನ್ನು ಅವರು ರೂಪುಗೊಳಿಸಿದ್ದರು! ಕವಿತೆಗಳಲ್ಲಿ ಸ್ವಾತಂತ್ರ್ಯ ಪಡೆದ ಭಾರತವನ್ನು ಅವರು ನೋಡಬಹುದಾಗಿತ್ತು. ಈಗ ನಮ್ಮೊಡನಿದ್ದಿದ್ದಲ್ಲಿ ಅವರಿಗೆ ಎಂಭತ್ತುನಾಲ್ಕು ವರ್ಷಗಳಾಗುತ್ತಿತ್ತು. ಆದರಲ್ಲರ್ಧವನ್ನೂ ಅವರು ಇಹಲೋಕದಲ್ಲಿ ನೋಡಲಿಲ್ಲ. ಅದು ನಮ್ಮೆಲ್ಲರ ದೌರ್ಭಾಗ್ಯ!

ಭಾರತಿಯು ಕಂಡ ಕನಸು ಈ ಮಾತುಗಳಲ್ಲಿ ಸ್ವಲ್ಪಮಟ್ಟಿಗೆ ತಿಳಿಯಬರುವುದು:

"ಜಾತಿ ಮತಗಳನ್ನು ನೋಡೆವು. ಉತ್ತಮ ಜನ್ಮ ಈ ಭಾರತ ಭೂಮಿಯಲ್ಲುಂಟಾದಲ್ಲಿ ಅಂಥ ಎಲ್ಲರೂ ಒಂದೇ. ಇಲ್ಲಿ ಸಾವಿರ ಜಾತಿಗಳಿವೆ ಎಂದರೂ ಅನ್ಯರು ಬಂದು ಹೋಗುವುದಾವ ನೀತಿ? ಒಬ್ಬ ತಾಯಿಯ ಹೊಟ್ಟೆಯಲ್ಲಿ ಹುಟ್ಟಿದವರು ತಮ್ಮಲ್ಲಿ ಜಗಳಮಾಡಿಕೊಂಡರೂ ಸೋದರರಲ್ಲವೆ? ಒಗ್ಗಟ್ಟಿದ್ದರೆ ಬಾಳ್ವಿಕೆ, ಅದು ನೀಗಿದರೆ ನಮ್ಮೆಲ್ಲರಿಗೂ ಪತನವು ಎಂಬುದನ್ನರಿತುಕೊಳ್ಳಬೇಕು, ಈ ಜ್ಞಾನವುಂಟಾದರೆ ಮತ್ತೇನು ಬೇಕು? ಎಂಥ ಪದವಿ ದೊರಕಿದರೂ ಅದು ಎಲ್ಲರಿಗೂ ಸಮಾನವಾಗಿ ಅನುಭವಿಸತಕ್ಕದು. ಬದುಕಿದರೆಲ್ಲರೂ ಬದುಕೋಣ, ಬಿದ್ದರೆ ಒಬ್ಬನುಳಿಯದೆ ಬೀಳೋಣ. ಇನ್ನು ನೀಚ ಗುಲಾಮಗಿರಿಯ ನೆನವು ಇಲ್ಲದಾಗಲಿ."

ಅವರ ದೀರ್ಘದರ್ಶಿತ್ವಕ್ಕೆ ಒಂದು ಉದಾಹರಣೆ:

"ಭಾರತವೆಂದುಸಿರುವವರು ದಾರಿದ್ರ್ಯ ಭಯ ಕೊಲ್ಲುವರು, ದುಃಖ ಹಣೆಯ ಗೆಲ್ಲುವರು.

ಬೆಳ್ಳಿಯ ಬೆಟ್ಟದ ಮೇಲೆ ಅಲೆದಾಡುವೆವು; ಪಶ್ಚಿಮ ಕಡಲು ಪೂರ್ತಾ ಜಹಜು ತುಂಬುವುವು; ವಿದ್ಯಾ ಸಂಸ್ಥೆಗಳೆಲ್ಲವನ್ನೂ ದೇಗುಲವಾಗಿಸುವೆವು; ನಮ್ಮ ಭಾರತವೆಂದು ಭುಜ ತಟ್ಟುವೆವು.

ಸಿಂಹಳಕ್ಕೆ ಸೇತುವೆ ಕಟ್ಟುವೆವು, ಸೇತುವನ್ನು ಎತ್ತರಿಸಿ ಬೀದಿಗಳು ಹಾಕುವೆವು, ಬಂಗಾಳದಲ್ಲಿ ಹರಿಯುವ ಹೆಚ್ಚಾದ ನೀರನ್ನು ತಂದು ಮಧ್ಯ ದೇಶದಲ್ಲಿ ಬೆಳೆ ಬೆಳೆಯುವೆವು" [ಎಂಥ ಎಂಜಿನೀರ್!]

"ಗಂಗಾ ದಡದ ಗೋಧಿಯನ್ನು ಕಾವೇರಿಯ ವೀಳೆದೆಲೆಗೆ ವಿನಿಮಯ ಮಾಡಿಕೊಳ್ಳುವೆವು. ಸಿಂಹ ಮರಾಠರ ಕವಿತೆಯಗೊಂಡು ಅದಕ್ಕೆ ಚೇರದ (ಕೇರಳ) ದಂತವನ್ನು ಕೊಡುವೆವು. ಕಾಶಿ ಪಂಡಿತರ ಮಾತನ್ನು ಕಾಂಚಿಯಲ್ಲಿ ಕೇಳುವ ಯಂತ್ರ ಮಾಡುವೆವು. ರಾಜಪುತನದ ವೀರರಿಗೆ ನಮ್ಮ ಉತ್ತಮ ಕನ್ನಡ ನಾಡಿನ ಚಿನ್ನವನ್ನು ಕೊಡುವೆವು"

"ಎಲ್ಲ ಕಬ್ಬಿಣ, ಉಕ್ಕಿನ ಸಾಮಾನುಗಳನ್ನೂ ತಯಾರಿಸುವೆವು; ಹಾರುವ ವಾಹನ ನಿರ್ಮಿಸುವೆವು; ಭೂಮಿ ನಡುಗುವಂತೆ ಬರುವ ಜಹಜುಗಳನ್ನು ಕಟ್ಟುವೆವು; ಕಾವ್ಯಗಳು, ಕಾಡುಗಳು, ಕಲೆಗಳನ್ನು ಬೆಳೆಸುವೆವು, ಲೋಕದ ಎಲ್ಲ ಕೈಗಾರಿಕಾ ವಸ್ತುಗಳನ್ನೂ ಆನಂದದಿಂದ, ಆದರದಿಂದ ಮಾಡುತ್ತೇವೆ."

ನಮ್ಮ ಭಾರತದಲ್ಲಿ ಎರಡೇ ಜಾತಿ: ನೀತಿವಂತರು ಉತ್ತಮ ಜಾತಿ, ನೀತಿಯಿಲ್ಲದವರು ಅಧಮರು."

ನಮ್ಮದೇಶ, ನದಿಗಳು. ಉಪನಿಷತ್ತುಗಳು, ಋಷಿಗಳಿಗೆ ಎಲ್ಲೂ ಎಣೆಯಿಲ್ಲ ಎಂದು ಮುಂತಾಗಿ ಕೊಂಡಾಡಿರುತ್ತಾರೆ.

ಭಾರತಿಯವರು ಪ್ರಬಂಧಗಳು, ಸಣ್ಣ ಕಥೆಗಳು, ಮುಂತಾದುವಲ್ಲದೆ ಭಗವದ್ಗೀತೆಗೆ ಟೀಕೆಯನ್ನೂ ಬರೆದಿರುತ್ತಾರೆ. ಪದ್ಯಗಳಲ್ಲಿ ಬಿಡಿ ಪದ್ಯಗಳು, ತಿಲಕರು, ಗೋಖಲೆಯವರು, ಲಜಪತಿರಾಮ್, ಶಿವಾಜಿ ಮುಂತಾದವರ ಮೇಲೆ ಪದ್ಯಗಳು, ಪರಾಶಕ್ತಿ, ಗಣೇಶ, ಸುಬ್ರಹ್ಮಣ್ಯ, ಸರಸ್ವತಿ ಇವರ ಮೇಲೆ ಪದ್ಯಗಳು ; ಸ್ವಾಮಿ ವಿವೇಕಾನಂದರ ಮೇಲೆ ಪದ್ಯಗಳು, "ಪಾಂಚಾಲಿ ಶಪಥ", "ಕುಯಿಲ್ ಪಾಟ್ಟು" ಎಂಬ ವೇದಾಂತವ ನೊಳಗೊಂಡ ದೊಡ್ಡ ಕೃತಿ ಪಾಪಾಪಾಟ್ಟು ಮುಂತಾದುವಿಹೆ. ಶ್ರೀ ಕೃಷ್ಣನನ್ನು ದೇವ, ಸ್ನೇಹಿತ, ಆಟದ ಹುಡುಗ, ಪ್ರೇಯಸಿ, ಆಳು ಮುಂತಾಗಿ ರೂಪಿಸಿಕೊಂಡುಹಾಡಿರುವ ಪದ್ಯಗಳನ್ನು ಓದಿ ತಿಳಿದು ಆನಂದಿಸಬೇಕು.

ಕೃಷ್ಣ ನನ್ನ ಸೇವಕ ಎಂಬ ಕೃತಿಯು ಹೀಗಿವೆ :

ಇತರ ಸೇವಕರುಗಳ ವಿಷಯವಾಗಿ ಹೀಗೆ ಹೇಳುತ್ತಾರೆ : "ಕೂಲಿ ಹೆಚ್ಚು ಕೇಳುವರು, ಕೊಟ್ಟುದುದನ್ನೆಲ್ಲ ಮರೆಯುವರು, ಕೆಲಸ ಹೆಚ್ಚಿದೆಯೆಂದರಿತಲ್ಲಿ ಮನೆಯಲ್ಲೇ ತಂಗಿಬಿಡುವರು, ಏಕಯ್ಯಾ ನಿನ್ನೆ ಬರಲಿಲ್ಲವೆಂದರೆ, ಮಡಿಕೆಯಲ್ಲಿ ಚೇಳಿದ್ದು ಹಲ್ಲಿನಿಂದ ಕಚ್ಚಿತೆನ್ನುವರು, ಮನೆಯಲ್ಲಿ ಹೆಂಗಸಿಗೆ ಭೂತ ಹಿಡಿದಿತ್ತೆನ್ನುವರು, ಅಜ್ಜಿ ಸತ್ತ ಹನ್ನೆರಡನೆಯ ದಿನವೆನ್ನುವರು, ಎಡೆಯಿಲ್ಲದೆ ಹುಸಿ ಹೇಳುವರು, ಹೇಳಿದುದೊಂದಾದರೆ ಮಾಡುವುದು ಇನ್ನೊಂದು, ದಾಯಾದಿಗಳಲ್ಲಿ ಹೋಗಿ ರಹಸ್ಯ ಮಾತಾಡುವರು ಮನೆಯ ಗುಟ್ಟನ್ನೆಲ್ಲ ಹೊರಗೆಡಹುವರು. ಮನೆಯಲ್ಲಿ ಎಳ್ಳಿಲ್ಲವೆಂದರೆ ತಮಟೆ ಹೊಡೆದು ಸಾರುವರು (ಹೀಗೆ) ಸೇವಕರಿಂದ ಪಟ್ಟ ಶ್ರಮ ಅತಿ ಹೆಚ್ಚು, ಸೇವಕರಿಲ್ಲದಿದ್ದರೆ. ಕೆಲಸ ನಡೆಯದು...." ಮುಂದೆ: ಎಲ್ಲಿಂದಲೋ ಬಂದ, ಗೊಲ್ಲರವನು ನಾನೆಂದ, ಹಸು ಕರುಗಳ ಮೇಯಿಸುವೆನು, ಮಕ್ಕಳನ್ನು ಕಾಯುವೆನು ಮನೆ ಗುಡಿಸಿ ದೀಪಮುಟ್ಟಿಸಿ ಬೆಳಗಿಸುವೆನು. ಹೇಳಿದಂತೆ ಕೇಳುವೆನು, ಬಟ್ಟೆಗಳನೊಗೆಯುವೆನು, ಚಿಕ್ಕ ಕೂಸಿಗೆ ಸಿಂಗರದ ಹಾಡು ಹಾಡಿ ತೂಗಿ ಮಲಗಿಸಿ ಅಳದಂತೆ ನೋಡಿಕೊಂಬೆನು, ಕಾಡುದಾರಿ ಯಾಗಲಿ, ಕಳ್ಳಕಾಕರ ಕಾಟವಿರಲಿ, ರಾತ್ರಿ, ಹಗಲು ಯಾವ ಹೊತ್ತಿನಲ್ಲೂ ಶ್ರಮವೆಂದೆಣಿಸೆನು ತಮ್ಮೊಡನೆ ಸುತ್ತುವೆನು, ತಮಗಾದ ತೊಂದರೆಯೂ ಒದಗವೆ ಕಾಯುವೆನು. ಕಲಿತ ವಿದ್ಯೆಯಂತು ಇಲ್ಲ ಕಾಡುಜನ, ಸ್ವಾಮಿ ಆದರೂ ಕೋಲಾಡುವೆನು, ಮಲ್ಲಯುದ್ಧ ತಿಳಿದವರು, ಮುಷ್ಠಿ ಯುದ್ಧವೂ ಬಲ್ಲೆ, ತುಸ ವಂಚನೆ ಎಣಿಸೆನು" ಎಂದು ಹಲವು ಹೇಳಿಸಿಂತ, ಹೆಸರೇನು ? ಹೇಳೆಂದ, ಏನೂಇಲ್ಲ, ಅಣ್ಣನೆಂಬುವರೆನ್ನ ಊರಿನವರೆಲ್ಲ, ಎಂದ. ಕಟ್ಟುಮಸ್ತಾದ ದೇಹ, ಹೊಳೆಯುವ ಕಣ್ಣಗಳು, ಹಿತ ನುಡಿ, ಇವು ಅವನನ್ನರಿಸಿಕೋ ಎನ್ನಲು, "ಮಾತಿನ ಮಲ್ಲ ನೀ ಬಹುವಾಗಿ ಹೇಳುತಿಹೆ, ಕೂಲಿ ಏನು ಕೇಳುವೆ ?" ಎಂದವನಿಗೆ, "ಸ್ವಾಮಿ, ತಾಳಿಕಟ್ಟಿದ ಮಡದಿಯಿಲ್ಲ, ಸಂತತಿಯಿಲ್ಲ. ನಾನೊಬ್ಬಂಟಿಗ, ನರೆ ತೋರದಿದ್ದರೂ ವಯಸ್ಸು ಲೆಕ್ಕವಿಲ್ಲದೆ ಆಗಿವೆ. ಮನಸ್ಸಿನ ಪ್ರೀತಿ ಹೆಚ್ಚಿನಗೆ ಕಾಸು ಹೆಚ್ಚಲ್ಲ" ಎಂದುತ್ತರ ಕೊಟ್ಟ.

ಹಳೆಯ ಕಾಲದ ಹುಚ್ಚನೆಂದು ತಿಳಿದು ಆಳಾಗಿರೆಂದೆ, ಅಂದಿನಿಂದ ಹಿಡಿದು ದಿನೇ ದಿನೇ ನನಗೆ ಕೃಷ್ಣನಲ್ಲಿ ಪಾಶ ಹೆಚ್ಚುತ್ತಿರುವಂತಿದೆ; ಅವನಿಂದಾದ ಉಪಕಾರಕ್ಕೆ ಮಿತಿಯಿಲ್ಲ, ವರ್ಣಿಸಿ ತೀರದು ; ಕಣ್ಣುಗಳನ್ನು ಎಲೆಗಳು ಕಾಯುವಂತೆ ನನ್ನ ಕುಟುಂಬವನ್ನು ಕಾಪಾಡುತ್ತಿದ್ದಾನೆ. ಗೊಣಗುವುದನ್ನು ಕಂಡರಿಯೆ, ಬೀದಿ ಗುಡಿಸುತ್ತಾನೆ. ಮನೆ ಸ್ವಚ್ಛ ಮಾಡುತ್ತಾನೆ. ದಾಸಿಯರ ಕುತ್ತವನ್ನು ಹಿಡಿದು ಗದರಿಸುತ್ತಾನೆ, ಮಕ್ಕಳಿಗೆ ಸಾಕು ತಾಯಿ, ಉಪಾಧ್ಯಾಯ, ವೈದ್ಯ, ಶೀಲತೆಯನ್ನು ತೋರಿಸುತ್ತಾನೆ, ಮನೆಗೆ ಬೇಕಾದ ಸಾಮಾನುಗಳನ್ನು ತೆಗೆದಿಟ್ಟು ಹಾಲು ಕಾಯಿಸಿ, ಹೆಪ್ಪಿಟ್ಟು ಹೆಂಗಸರಿಗೆ ತಾಯಂತೆ ಇದ್ದು, ಸ್ನೇಹಿತ, ಮಂತ್ರಿ, ಉತ್ತಮ ಗುರು, ಸಂಸ್ಕೃತಿಯಲ್ಲಿ ದೇವತೆ, ನೋಡುವುದಕ್ಕೆ ಸೇವಕ ಹೀಗಿರುತ್ತಿರುವನು. ಎಲ್ಲಿಂದಲೋ ಬಂದ, ಗೊಲ್ಲ ಜಾತಿಯವನೆಂದ, ಇವನನ್ನು ಪಡೆಯಲು ನಾನೇನು ಪುಣ್ಯ ಮಾಡಿದೆ ! ಕೃಷ್ಣ ಮನೆಯಲ್ಲಿ ಕಾಲಿಟ್ಟಂದಿನಿಂದ ಸಕಲೈಶ್ವರ್ಯಗಳೂ ತುಂಬಿ ತುಳುಕುತ್ತಿವೆ. ಕಣ್ಣನನ್ನು ನಾನು ಸೇವಕನಾಗಿ ಮಾಡಿಕೊಂಡೆ, ಅವನನ್ನರಿತುಕೊಂಡೆ, ಹೀಗೆ ಸೇವಕನಾಗಿ ಅವನನ್ನು ಮಾಡಿಕೊಳ್ಳಲು ಕಾರಣಗಳೂ ಉಂಟು."

ಶುಭಂ

# ಬಿಡುಗಡೆಯ ಬದುಕಿನಲಿ ನೆಚ್ಚಿರಲಿ

ಸಾಕಿದವ ಪಂಜರದಿ ಹಾಕಿದುದ ಅಂಜುತ್ತ
ಭುಂಜಿಸಿದ ದಿನಗಳನು ಮರೆತುಬಿಡು ಹಕ್ಕಿ
ಬಂಧನದ ಕಹಿನೆನಪು ಬಿಡುಗಡೆಯ ಹಾಲಿನಲಿ
ನಂಜುಗೂಡಿಸದಿರಲಿ ನೆಮ್ಮದಿಯ ನೆಕ್ಕಿ

ಮಂಜರನಿಗಂಜುತ್ತ ಪಂಜರದಿ ದಿನಗಳೆದೆ
ಹಂಗಿನಾಹಾರವನು ಹೇಗೋ ತಿಂದು !
ಬಂಧ ಸ್ವಚ್ಛಂದವಾಗಿರುವಂದು ಆನಂದದಿಂದಿರದೆ
ನವೆಯುವುದೆ ನಿರ್ನೆರಂ ನೊಂದು ?

ಪಂಜರದಿ ನೀನಿಲ್ಲ ಏಕಾಂಗಿ ನೀನಲ್ಲ
ಹೆಮ್ಮರದಿ ನೆಲಸಿರುವೆ ಹಲವರೊಡನೆ
ಹಕ್ಕಿಗಳು ಹೆಚ್ಚಿದರು ಹಣ್ಣುಗಳ ಬರವಿಲ್ಲ
ಹಿಗ್ಗುವುದ ಕಲಿ ಸವಿದು ಸರ್ವರೊಡನೆ

ಮರವೊಂದು ತೆರವಾಗೆ ಕರೆದಾವು ಬೇರೆ ಮರ
ಹೊಸ ಹಣ್ಣ ಹೊರೆಯಿಂದ ಬಾಗಿ ತೂಗಿ
ಹಣ್ಣಿಲ್ಲ ನನಗೆಂಬ ಸಣ್ಣತನ ಬಿಟ್ಟುಬಿಡು
ಹೊಟ್ಟೆ ಬಂದೀತೊಂದೆ ಹಣ್ಣಿನಿಂ ಬೀಗಿ

ವನವು ಘನ, ಕರು ಬಹಳ, ಫಲ ವಿಪುಲ
ಕರು ಬೇಕೆ, ಕೊರಗೇಕೆ, ಹೊಟ್ಟೆಯುರಿಯೇಕೆ ?
ವನದಗಲ ಮನವಿರಲಿ ದೊಡ್ಡ ದೃಷ್ಟಿಯು ಬರಲಿ
ಬಿಡುಗಡೆಯ ಬಾಳಿನಲಿ ಅಲ್ಪತನವೇಕೆ ?

ಉಲಿದಾಡೆ ಕಾನಿಹುದು ಅಲೆದಾಡೆ ಬಾನಿಹುದು
ಕೆಲೆದಾಡೆ ಹಕ್ಕಿಗಳ ಬಳಗವಿಹುದು
ತೊಡರೆ ತೊಡವಾಗುವುವು ಬಿಡುಗಡೆಯ ಕೈಕಾಲ್ಗೆ
ದುಗುಡವೇ ಸೊಗವಾಗಿ ಬಳಿಗೆ ಬಹುದು

ಬಿಡುಗಡೆಯ ಬದುಕಿನಲಿ ನೆಚ್ಚಿರಲಿ, ಕೆಚ್ಚಿರಲಿ
ಬೇಡಿಕೊಳ್ಳದ ಬಾಳ ಬಾಳ್ವೆನೆಂಬ
ಪಂಜರದ ಹುಚ್ಚೇಕೆ ಮಚ್ಚರದ ಕಿಚ್ಚೇಕೆ
ಬನವು ನೀಡಿದೆ ನಿನಗೆ ಸಾಕಷ್ಟು ಇಂಬ

— ಕಾವ್ಯಾನಂದ

# ಸರ್ ಹಂಫ್ರಿಡೇವಿ

## ( ೧೭೭೮ - ೧೮೨೯ )

ಸರ್ ಹಂಫ್ರಿ ಡೇವಿ ಎಂಬ ಮಹಾಶಯನು ಪ್ರಪಂಚದ ದೊಡ್ಡ ವಿಜ್ಞಾನಿಯಾಗುತ್ತಾನೆಂದು ಹಿಂದೆ ಯಾರೂ ಭಾವಿಸಿರಲಿಲ್ಲ. ಈತನು ಬಾಲ್ಯದಲ್ಲಿ ತನ್ನ ಪ್ರತಿಭೆಯನ್ನು ಪ್ರದರ್ಶಿಸಲಿಲ್ಲ. ಮೊದಮೊದಲು, ಇವನಿಗೆ ಪದ್ಯಗಳಲ್ಲಿ ಆಸಕ್ತಿ ಹೆಚ್ಚಾಗಿದ್ದು, ಅನಂತರ, ಪ್ರಯೋಗಗಳಲ್ಲಿ ಅಭಿಲಾಷೆಯು ಹೆಚ್ಚಾಯಿತು. ಇವನು ಚಿಕ್ಕ ವಯಸ್ಸಿನಲ್ಲೇ ಒಬ್ಬ ವೈದ್ಯನಿಗೆ ಸಹಾಯಕನಾಗಿದ್ದನು. ಔಷಧಗಳ ವಿಚಾರವಾಗಿ ಸಂಶೋಧನೆಗಳನ್ನು ನಡೆಸುತ್ತಿದ್ದ ಪ್ರಯೋಗಶಾಲೆಗಳಲ್ಲಿ ಕೆಲಸ ನಡೆಸುತ್ತಿದ್ದಾಗ, ಈತನು ರಾಸಾಯನಿಕ ಮತ್ತು ಇತರ ಸಂಶೋಧನೆಗಳಲ್ಲಿ ಕುತೂಹಲವುಳ್ಳವನಾದನು. ಇವನು ''ನೈಟ್ರಸ್ ಆಕ್ಸೈಡ್" ಎಂಬ ಅನಿಲವನ್ನು ಕಂಡುಹಿಡಿದದ್ದು ದೊಡ್ಡ ಪ್ರಸಂಗವೇ ಸರಿ. ಇದನ್ನು ''ನಗಿಸುವ ಅನಿಲ" (Laughing gas) ಎಂದು ಈಗಲೂ ಕರೆಯುತ್ತಾರೆ.

### ನಗಿಸುವ ಅನಿಲ
(Nitrous Oxide)

ಈತನು 1798ರಲ್ಲಿ ಕೆಲವು ಅನಿಲಗಳನ್ನು ತಯಾರಿಸುತ್ತಿದ್ದ ಸಂದರ್ಭದಲ್ಲಿ ಅವು ಮನುಷ್ಯರ ನರಗಳ ಮೇಲಾಗಲಿ, ಅವರ ದೇಹದ ಮೇಲಾಗಲಿ ಯಾವ ರೀತಿಯ ಪರಿಣಾಮಗಳನ್ನುಂಟುಮಾಡುತ್ತಿದ್ದವು. ಎಂಬ ಪರೀಕ್ಷೆಗಳಲ್ಲಿ ತೊಡಗಿದನು. ಈ ಪ್ರಯೋಗಗಳಲ್ಲಿ ಒಂದು ಮುಖ್ಯವಾದುದನ್ನು ಇಲ್ಲಿ ವಿವರಿಸಿದೆ. ಅಮೋನಿಯಂ ನೈಟ್ರೇಟ್ ಎಂಬ ಲವಣವನ್ನು ಕಾಯಿಸಿದಾಗ, ಅದು ವಿಭಜನೆಹೊಂದಿ, ಒಂದು ವರ್ಣವಿಲ್ಲದ ಅನಿಲವು ಉತ್ಪತ್ತಿಯಾದುದನ್ನು ಇವನು ಕಂಡನು. ಇದಕ್ಕೆ ವಿಶೇಷ ಗುಣವಿತ್ತು. ಅವರ ಹತ್ತಿರ ಇದ್ದವರು, ಅದನ್ನು ಉಸಿರಾಡಿದ ತಕ್ಷಣವೇ ಮದೋನ್ಮತ್ತರಾಗಿ ಚೋದಿಸಲ್ಪಟ್ಟು ನಗುವುದಕ್ಕೆ ಪ್ರಾರಂಭಿಸುತ್ತಿದ್ದರು. ಡೇವಿಯೂ ಕೂಡ ಅದನ್ನು ತಯಾರಿಸಿದ ತಕ್ಷಣವೇ ಪ್ರಯೋಗಶಾಲೆಯಲ್ಲಿ ನರ್ತನಮಾಡಿದನು. ಆದರಿಂದ ಈ ಅನಿಲಕ್ಕೆ ''ನಗಿಸುವ ಅನಿಲ" (Laughing gas) ಎಂಬ ಹೆಸರು ಬಂದಿತು.

ನೈಟ್ರಸ್ ಆಕ್ಸೈಡ್ ಅನಿಲವು ದೇಹದಲ್ಲಿ ಉಂಟುಮಾಡುತ್ತಿದ್ದ ,ಪರಿಣಾಮಗಳಿಂದ ದಂತ ಚಿಕಿತ್ಸೆಯಲ್ಲಿ ಕೆಲವು ಭಾಗಗಳ ಚಟುವಟಿಕೆಯನ್ನು ತಾತ್ಕಾಲಿಕವಾಗಿ ನಿಲ್ಲಿಸುವುದಕ್ಕೋಸ್ಕರ ಬಳಸಲಾಯಿತು. (Anaesthesia) ಇವನು ಕಂಡುಹಿಡಿದ ಈ ಅನಾವರಣವನ್ನು ಅನೇಕರು ಮೆಚ್ಚಿದರು ಈತನು ಸುಂದರ ಪುರುಷನೂ ಆಗಿದ್ದನು. ಇವೆಲ್ಲವನ್ನೂ ಗಣನೆಗೆ ತೆಗೆದುಕೊಂಡು, Royal Institution ಸಂಸ್ಥೆಯವರು ಈತನಿಗೆ 1801ರಲ್ಲಿ ''ಲಕ್ಚರರ್" ಹುದ್ದೆಯನ್ನು ದೊರಕಿಸಿದರು. ಇವನು ಇದರಲ್ಲಿ ಜಯಶೀಲನಾಗಿ 1812ರಲ್ಲಿ, ನೈಟ್ ಪದವಿಯನ್ನು (Knight hood) ಸಂಪಾದಿಸಿದನು. 1818ರಲ್ಲಿ ''ಬ್ಯಾರೋನೆಟ್" (Baronet) ಎಂಬ ಪದವಿಯನ್ನು ಗಳಿಸಿ, ತನ್ನ 50ನೆಯ ವರ್ಷದಲ್ಲೇ ಮೃತಿಹೊಂದಿದನು ಇವನು ತನ್ನ ಅಲ್ಪಾವಧಿಯಲ್ಲಿಯೇ ಎಷ್ಟು ಬಗೆಯ ಮಹತ್ಕಾರ್ಯಗಳನ್ನು ಸಾಧಿಸಿದನೆಂಬುದು ಅವನ ಜೀವನ ಚರಿತ್ರೆಯಿಂದಲೇ ವ್ಯಕ್ತವಾಗಿದೆ.

ವಿದ್ಯುಚ್ಛಕ್ತಿಯ ವಿಚಾರದಲ್ಲಿ ಹೆಚ್ಚು ಆಸಕ್ತಿ ವಹಿಸಿದ ಮತ್ತು ಅದರ ಶೋಧನೆಗಳಿಗೆ ಕಾರಣನಾದ, ಮೈಕೇಲ್ ಫಾರಡೆ(Michael Faraday)ಎಂಬಾ

ತನು ಮುಂದೆ ವಿಜ್ಞಾನದ ಅನೇಕ ಸಂಶೋಧನೆಗಳಿಗೆ ತಳಹದಿ ಹಾಕಿದನು. ಈತನ ವಾಕ್ಚಾತುರ್ಯವು ಅಸಾಧಾರಣವಾದುದು ಎಂದು ತಿಳಿಸಬಹುದು.

## ಡೇವಿಯು ಕಂಡುಹಿಡಿದ "ರಕ್ಷಣೆಯ ದೀಪ" (Safety Lamp)

ಡೇವಿಯು, ತನ್ನ 24ನೆಯ ವರ್ಷದಲ್ಲೇ ಪ್ರೊಫೆಸರ್ ಹುದ್ದೆಯಲ್ಲಿದ್ದು, ವಿದ್ಯುಚ್ಛಕ್ತಿಯ ವಿಚಾರವಾಗಿಯೂ, ಹಲವಾರು ಸಂಶೋಧನೆಗಳನ್ನು ನಡೆಸಿದನು. ಆದರೆ, ಇವನು ಹೆಚ್ಚು ಕೀರ್ತಿಯನ್ನು ಗಳಿಸಿದ್ದಕ್ಕೆ ಇವನ "ರಕ್ಷಣೆಯ ದೀಪ"ವೇ (Safety Lamp) ಕಾರಣ. ಈ ದೀಪವನ್ನು ಕಲ್ಲಿದ್ದಲಿನ ಗಣಿಗಳಲ್ಲಿ ಕೆಲಸಮಾಡುತ್ತಿದ್ದ ಕಾರ್ಮಿಕರು ಬಳಸಿ, ಅಲ್ಲಿ ಉಂಟಾಗುತ್ತಿದ್ದ ಆಕಸ್ಮಿಕಗಳಿಂದ ರಕ್ಷಣೆ ಪಡೆಯುತ್ತಿದ್ದರು. ಇದಕ್ಕಿಂತ ಮುಂಚೆ, ಆ ಗಣಿಗಳಲ್ಲಿ "ಮಿಥೇನ್" ಎಂಬ ದಹ್ಯ ಅನಿಲವು ಆಗಿಂದಾಗ್ಯೆ ಶೇಖರಿಸಿ, ಸ್ಫೋಟನೆಗಳಿಗೆ ಕಾರಣವಾಗುತ್ತಿತ್ತು. ಅದು ಶೇಖರಿಸಿದಾಗೆಲ್ಲಾ ಕಾರ್ಮಿಕರು ಬಳಸುತ್ತಿದ್ದ ಪಂಜುಗಳ ದೀಪದಿಂದ ಬುಗ್ಗನೆ ಹತ್ತಿಕೊಂಡು, ಸ್ಫೋಟನೆಯ ಸಹಿತ ಉರಿಯುತ್ತಿತ್ತು. ಇದನ್ನು ನಿರೀಕ್ಷಿಸದೆ ದುಡಿಯುತ್ತಿದ್ದ ಸಹಸ್ರಾರು ಕೆಲಸಗಾರರು ಅಲ್ಲಿಯೇ ಮೃತಿಹೊಂದುತ್ತಿದ್ದರು. ಡೇವಿಯು ಇದರ ವಿಷಯವಾಗಿ ಪ್ರಯೋಗ ನಡೆಸಿ, ಕಂಡುಹಿಡಿದ ಅದ್ಭುತ ದೀಪವು ಇದನ್ನು ತಪ್ಪಿಸಿತು. ಇದರಲ್ಲಿ ಒಂದು ತತ್ವವಿದೆ. ಬೆಂಕಿಯನ್ನು ತಂತಿಯ ಜ್ವಾಲೆಯಿಂದ ಆವರಿಸಿದರೆ, ಅದು ಅಷ್ಟು ಅಪಾಯಕರವಲ್ಲ ಎಂಬುದೇ. ಬೆಂಕಿಯ ಶಾಖವು ತಂತಿಯ ಬಲೆಯ ಹೊರಗೆ, ಹರಡದಿರುವುದರಿಂದ ಗಣಿಯಲ್ಲಿ ಉತ್ಪತ್ತಿಯಾಗುವ ಅನಿಲವು ದಹಿಸುವುದಿಲ್ಲ. ಈ ದೀಪದ ಬಳಕೆಯಲ್ಲಿರುವ ತತ್ವವನ್ನು ವಿಶದವಾಗಿ ಈ ರೀತಿ, ವಿವರಿಸಬಹುದು.

ಎಣ್ಣೆಯಲ್ಲಿ ಅದ್ದಿರುವ ಮತ್ತು ಉರಿಯುತ್ತಿರುವ ಒಂದು ಬತ್ತಿಯನ್ನು ಹಾಗೆಯೇ ದಹ್ಯ ವಸ್ತುವಾದ "ಮಿಥೇನ್". ಅಥವಾ ಬೇರೆ ಯಾವುದಾದರೂ ಅನಿಲದಲ್ಲಿ ಇರಿಸಿದರೆ, ಆ ಅನಿಲವು ಬೇಗನೆ ಹತ್ತಿಕೊಂಡು ಉರಿದು, ಆಸ್ಫೋಟನೆಯನ್ನುಂಟುಮಾಡುತ್ತದೆ. ಆದರೆ, ಈ ಉರಿಯುವ ಬತ್ತಿಯು ಒಂದು ತಂತಿಯ ಬಲೆಯಿಂದ ಆವರಿಸಲ್ಪಟ್ಟಾಗ ದಹ್ಯ ಅನಿಲವು ಬಲೆಯ ಒಳಗಡೆಯೇ ಹೀರಲ್ಪಟ್ಟು, ಅಲ್ಲಿಯೇ ದಹಿಸುವುದರಿಂದ, ಆ ಬಲೆಯ ಹೊರಗಡೆ ಅದಕ್ಕೆ ಉರಿಯುವುದಕ್ಕೆ ಸಾಕಾದಷ್ಟು ಶಾಖವು ಒದಗದೆ. ಅದು ಹಾಗೆಯೇ ಉಳಿಯುವುದರಿಂದ ಗಣಿಯಲ್ಲಿರುವವರು ರಕ್ಷಿಸಲ್ಪಡುತ್ತಾರೆ. ಇದನ್ನು ಪ್ರಯೋಗಶಾಲೆಗಳಲ್ಲೂ ಪ್ರದರ್ಶಿಸಬಹುದು. ಯಾವ ಪದಾರ್ಥವು ದಹಿಸಬೇಕಾದರೂ ಅದಕ್ಕೆ ಅನುಗುಣವಾದ ಉಷ್ಣತೆಗೆ (Ignition temperature) ಅದನ್ನು ತರಬೇಕು. ಈ ಉಷ್ಣತೆಗಿಂತಲೂ ಕಡಿಮೆ ಇದ್ದಾಗ, ಆ ಪದಾರ್ಥವು ದಹನ ಹೊಂದುವುದಿಲ್ಲ ಮೇಲೆ ತಿಳಿಸಿದ ರಕ್ಷಣಾ ದೀಪದ ಮುಖ್ಯ ಉಪಯೋಗವೇನೆಂದರೆ, ಗಣಿಯಲ್ಲಿರುವ ಅನಿಲಗಳ ಉಷ್ಣತೆಯು ದಹಿಸುವ ಉಷ್ಣತೆಗೆ ಏರದಂತೆ ನೋಡಿಕೊಳ್ಳುವುದೇ.

## ವಿದ್ಯುತ್ಸಂಬಂಧವಾದ ಪ್ರಯೋಗಗಳು

ಇವನು ವಿದ್ಯುಚ್ಛಕ್ತಿಯ ಉಪಯೋಗಗಳನ್ನು ಒಂದೊಂದಾಗಿ ಪ್ರದರ್ಶಿಸಿದನು. ಕಾಸ್ಟಿಕ್ ಪೊಟಾಷ್ (KOH) ಎಂಬ ಕ್ಷಾರವನ್ನು ವಿದ್ಯುಚ್ಛಕ್ತಿಯ ಸಹಾಯದಿಂದ ವಿಭಜಿಸಿ. "ಪೊಟಾಸಿಯಂ" ಲೋಹವನ್ನು ತಯಾರಿಸಿದನು "ಪೊಟಾಸಿಯಂ" ಲೋಹವು ಸಂಯುಕ್ತ ವಸ್ತುವಿನ ರೂಪದಲ್ಲಿ ಸಸ್ಯಗಳ ಬೆಳವಣಿಗೆಗೆ ಪೋಷಕವಸ್ತು. ಇದರ ಬಳಕೆಯಿಂದ ಒಳ್ಳೆಯ ಪರಿಣಾಮಗಳುಂಟಾಗುತ್ತವೆ. ಮೂಲ ವಸ್ತುವಿನ ರೂಪದಲ್ಲಿ ಇದು ಚುರುಕಾಗಿ ವರ್ತಿಸುತ್ತದೆ ಇದನ್ನು ನೀರಿನ ಮೇಲೆ ಹಾಕಿದರೆ ತತ್‌ಕ್ಷಣವೇ ನೀರಿನೊಡನೆ ವರ್ತಿಸಿ, ಜಲಜನಕವನ್ನು ಉತ್ಪತ್ತಿಮಾಡಿ, ಆ ಅನಿಲವು ದಹನ ಹೊಂದುವಂತೆಯೂ ಮಾಡುತ್ತವೆ

ವಿದ್ಯುಚ್ಛಕ್ತಿಯನ್ನು ಬಳಸಿ, ಸೋಡಿಯಂ ಲೋಹವನ್ನೂ ಈತನು ಪಡೆದನು ಇದಾದ ನಂತರ ಕ್ಷಾರಕಗಳನ್ನು ಕೊಡುವ ಕ್ಯಾಲ್ಸಿಯಂ, ಮೆಗ್ನೀಸಿಯಂ ಮುಂತಾದ ಲೋಹಗಳೆಲ್ಲವೂ ತಯಾರಾದವು. ಈ ಪ್ರಯೋಗಗಳಿಂದ ಡೇವಿಯು ಮುಖ್ಯವಾದ ತತ್ವವನ್ನು ಹೊರಪಡಿಸಿದನು ಅದೇನೆಂದರೆ, ಪದಾರ್ಥಗಳ ಸಂಯೋಜನೆಯಲ್ಲೂ, ವಿಭಜನೆಯಲ್ಲೂ ವಿದ್ಯುಚ್ಛ

ಕ್ರಿಯೆ [illegible] ಹಿಡಿದ ಎಂಬುದು. ರಾಸಾಯನಿಕ ವಸ್ತುಗಳಲ್ಲಿರುವ ವಿದ್ಯುಚ್ಛಕ್ತಿಯನ್ನು ಅವುಗಳಿಂದ ಪಡೆಯಬಹುದು ಮತ್ತು ವಿದ್ಯುಚ್ಛಕ್ತಿಯ ಸಹಾಯದಿಂದ ರಾಸಾಯನಿಕ ವಸ್ತುಗಳನ್ನು ವರ್ತಿಸುವಂತೆ ಮಾಡಿ, ಅನೇಕ ಸಂಯುಕ್ತ ವಸ್ತುಗಳನ್ನು ಪಡೆಯಬಹುದು ಎಂಬುದೇ ಈ ತತ್ವದ ಸಾರಾಂಶ. ಇದರಿಂದ ವಿದ್ಯುಚ್ಛಕ್ತಿಗೂ, ವಸ್ತುಗಳಿಗೂ ಇರುವ ಸಂಬಂಧವನ್ನು ಇವನು ಎಲ್ಲರಿಗೂ ತಿಳಿಸಿದನು.

## ಕ್ಲೋರೀನ್ ಅನಿಲದ ಪರಿಚಯ

ಇತರ ಮೂಲ ವಸ್ತುಗಳ ವಿಷಯವಾಗಿಯೂ, ಡೇವಿಯು ಸಂಶೋಧನೆ ನಡೆಸಿದನು. ಅವುಗಳ ಪೈಕಿ ಅಲೋಹವಾದ ಕ್ಲೋರೀನ್ ಮುಖ್ಯವಾದುದು. ಕ್ಲೋರೀನ್ ಅನಿಲವನ್ನು ಮುಂಚೆ ಅನೇಕರು, ಒಂದು ಆಕ್ಸೈಡೆಂದು ಭಾವಿಸಿದ್ದರು. ಅಂದರೆ, ಇದರಲ್ಲಿ ಆಮ್ಲ ಜನಕವೂ ಅಡಗಿದೆ ಎಂದರ್ಥ. ಇದು ತಪ್ಪು ಅಭಿಪ್ರಾಯ ಎಂದು ಡೇವಿಯು ಪ್ರಯೋಗಗಳ ಮೂಲಕ ತಿಳಿಸಿ, ಕ್ಲೋರೀನ್ ಸಂಯುಕ್ತ ವಸ್ತುವಲ್ಲ. ಅದರಲ್ಲಿ ಆಮ್ಲಜನಕವಿಲ್ಲ. ಅದು ಒಂದು ಮೂಲ ವಸ್ತು ಎಂದು ಇವನು ತಿಳಿಸಿ, ಕ್ಲೋರೀನಿನ ಇತರ ಲಕ್ಷಣಗಳನ್ನೂ ಪರಿಚಯ ಮಾಡಿಸಿದನು.

ಡೇವಿ ಎಂಬಾತನು ಸಮುದ್ರದ ಮೇಲೆ ಸಂಚರಿಸುವ ನೌಕೆಗಳಲ್ಲಿ ಉಂಟಾಗಬಹುದಾದ, ತೊಂದರೆಗಳನ್ನು ನಿವಾರಿಸಿದನು. ಮುಂಚೆ ಜಹಜುಗಳ ತಳದಲ್ಲಿ ತಾಮ್ರದ ಪದರವನ್ನು ಕೊಟ್ಟಿರುತ್ತಿದ್ದರು. ಅದು ನೀರಿನ ಸಂಪರ್ಕದಲ್ಲಿ ಸವೆಯಲ್ಪಟ್ಟು, ಸ್ವಲ್ಪ ಕಾಲದಲ್ಲಿಯೇ ಕುಸಿದುಬೀಳುತ್ತಿತ್ತು. ಸತುವಿನ ಪದರವನ್ನು ಕೊಡಲ್ಪಟ್ಟ ತಾಮ್ರವು ಈ ರೀತಿ ಕೆಡುವುದಿಲ್ಲ ಎಂಬುದನ್ನು ಕಂಡುಹಿಡಿದವನು ಈತನೇ.

ಡೇವಿಯ ಜೊತೆಯಲ್ಲಿ ಕೆಲಸ ಮಾಡುತ್ತಿದ್ದ ಮೈಕೇಲ್ ಫಾರಡೆಯು ಇವನನ್ನು ಮೀರಿಸಿ, ಅನೇಕ ಸಂಶೋಧನೆಗಳನ್ನು ನಡೆಸಿದ್ದುದನ್ನು ಡೇವಿಯು ಮೆಚ್ಚಿ, ಅವನಿಗೆ ತಕ್ಕ ಮರ್ಯಾದೆಯನ್ನು ಸಲ್ಲಿಸಿದನು. ಈಗಲೂ, ಡೇವಿಯ ಪಾರಿತೋಷಕವನ್ನು ರಾಸಾಯನ ವಿಜ್ಞಾನದ ಮುಖ್ಯವಾದ ಹೊಸ ವಿಷಯಗಳನ್ನು ಕಂಡುಹಿಡಿದವರಿಗೆ ಸಲ್ಲಿಸುತ್ತಾರೆ.

## ವಸ್ತು-ಚೈತನ್ಯ ಸಂಬಂಧ

ಡೇವಿಯು ವಸ್ತುಗಳ ವಿಚಾರವಾಗಿ ಕೆಲವು ಮುಖ್ಯ ಸಂಗತಿಗಳನ್ನು ತಿಳಿಸಿದನು. ಪದಾರ್ಥಗಳು ಅನೇಕ ರೂಪಗಳನ್ನು ತಾಳುತ್ತವೆ. ಅವು ಘನ ರೂಪದಲ್ಲೂ (Solids), ದ್ರವ ರೂಪದಲ್ಲೂ (Liquids) ಅನಿಲ ರೂಪದಲ್ಲೂ (Gases) ಇರುತ್ತವೆ. ಇದಲ್ಲದೆ ಈಥರ್ (Ether) ಎಂಬ ಅದೃಶ್ಯವಾದ ರೂಪವೂ ಇದೆ. ಈಥರ್ ರೂಪದಲ್ಲಿದ್ದಾಗ ಪದಾರ್ಥಗಳು ನಮ್ಮ ಜ್ಞಾನೇಂದ್ರಿಯಗಳ ಮೇಲೆ ಉಂಟುಮಾಡುವ ಪರಿಣಾಮಗಳಿಂದಲೇ ಗುರ್ತಿಸಲ್ಪಡುತ್ತವೆ. ಉದಾಹರಣೆಗೆ ಬೆಳಕನ್ನು ತೆಗೆದುಕೊಳ್ಳೋಣ. ಬೆಳಕಾಗಲಿ, ಶಾಖವಾಗಲಿ, ನಮಗೆ ಗೋಚರವಾಗಬೇಕಾದರೆ ಅದು ಪದಾರ್ಥಗಳ ಮೇಲೆ ಬಿದ್ದು ಪರಿಣಾಮಗಳನ್ನುಂಟು ಮಾಡಿದಾಗಲೇ ಶಾಖವನ್ನು ನಾವು ಅನುಭವಿಸುತ್ತೇವೆ. ಅದನ್ನು ನೋಡುವುದಕ್ಕಾಗುವುದಿಲ್ಲ. ಯಾವುದಾದರೂ ಒಂದು ವಸ್ತುವಿನ ಮೇಲೆ ಬಿದ್ದ ಶಾಖವು ಆ ವಸ್ತುವಿನ ಉಷ್ಣತೆಯನ್ನು ಏರಿಸುವುದರಿಂದ ನಾವು ಶಾಖವನ್ನು ಗುರ್ತಿಸಬಹುದು ಮತ್ತು ಅಳೆಯಲೂ ಬಹುದು.

ಬೆಳಕಿನ ಸಹಾಯದಿಂದ ಅನೇಕ ರಾಸಾಯನಿಕ ಬದಲಾವಣೆಗಳನ್ನುಂಟು ಮಾಡಬಹುದು. ಅದರ ಸಹಾಯದಿಂದಲೇ ಪದಾರ್ಥಗಳನ್ನು ಕಾಣುವುದು. ಆದರೆ, ಬೆಳಕನ್ನೇ ನೋಡುವುದು ಅಸಾಧ್ಯ. ಬೆಳಕು, ಶಾಖ, ಶಬ್ದ, ಇವುಗಳೆಲ್ಲವೂ 'ಇಥೀರಿಯಲ್ ಮ್ಯಾಟರ್" (Ehtereal Matter) ಎಂಬುದಾಗಿ ಕರೆಯಲ್ಪಡುತ್ತವೆ. ಆದರೆ, ಇವೆಲ್ಲವೂ ನಾನಾರೂಪದ ಚೈತನ್ಯಗಳು. ಆದರೂ ಈಗ ವಸ್ತುಚೈತನ್ಯಗಳು ಪರಸ್ಪರ ಬದಲಾವಣೆ ಹೊಂದಬಲ್ಲವು ಎಂದು ತಿಳಿದಿದೆ. ವಸ್ತುವಿನಿಂದ ಚೈತನ್ಯವನ್ನೂ ಚೈತನ್ಯದಿಂದ ವಸ್ತುವನ್ನೂ ಪಡೆಯಬಹುದಾದುದರಿಂದ ಅವುಗಳಿಗೇನೂ ಅಷ್ಟು ವ್ಯತ್ಯಾಸವಿಲ್ಲ. ವಸ್ತುವನ್ನು ಸಂಕುಚಿಸಿ ಅಡಗಿಸಿದ ಚೈತನ್ಯವೆಂದೇ ಭಾವಿಸಬಹುದು (Matter is Condensed Energy). ಆಲ್ಬರ್ಟ್ ಐನ್‌ಸ್ಟೈನ್

(Albert Einstein) ಎಂಬ ಪ್ರಖ್ಯಾತ ತತ್ವ ವಿಜ್ಞಾನಿಯು. ಇವೆರಡಕ್ಕೂ ಇರುವ ಸಂಬಂಧವನ್ನು E= MC 2 ಎಂಬ ಸೂತ್ರದಲ್ಲಿ ತಿಳಿಸಿದ್ದಾನೆ. ಇದರಲ್ಲಿ E ಅಂದರೆ Energy ಅಥವಾ ಚೈತನ್ಯವೆಂಬುದಾಗಿಯೂ, M ಅಂದರೆ Mass, ಅಥವಾ ವಸ್ತುವಿನ ಭಾರ, ಎಂಬುದಾಗಿಯೂ, C ಅಂದರೆ ಬೆಳಕಿನ ವೇಗ ಎಂಬುದಾಗಿಯೂ ತಿಳಿಸಬಹುದು.

## ವಸ್ತುಗಳ ಸ್ವಭಾವ ಮತ್ತು ಲಕ್ಷಣಗಳು.

ಪದಾರ್ಥಗಳು ಹೊಂದುವ ಅನೇಕ ಲಕ್ಷಣಗಳನ್ನು ಡೇವಿಯು ವಿವರಿಸಿದ್ದಾನೆ. ಅವು ಗುರುತ್ವಾಕರ್ಷಣೆ (Gravitation), ಅಂಟಿಕೊಳ್ಳುವ ಸ್ವಭಾವ (Cohesion), ಶಾಖ, ಮುಂತಾದ ನಿಯಮಗಳಿಗೆ ಒಳಪಟ್ಟಾಗ, ಅವು ಯಾವ ಬಗೆಯ ಬದಲಾವಣೆಗಳನ್ನು ಹೊಂದಬಹುದು ಎಂಬುದನ್ನೂ ವರ್ಣಿಸಿದ್ದಾನೆ. ಘನ ವಸ್ತುಗಳಿಗೂ, ದ್ರವರೂಪದ ವಸ್ತುಗಳಿಗೂ, ಏಕೆ ವ್ಯತ್ಯಾಸವಿವೆ ? ದ್ರವರೂಪದ ವಸ್ತುಗಳಲ್ಲಿರುವ ಅಂಟಿಕೊಳ್ಳುವ ಸ್ವಭಾವವೇ (Cohesion) ಅವು ಹರಿಯುವುದಕ್ಕೆ ಕಾರಣ. ಘನವಸ್ತುಗಳಲ್ಲಿ, ಈ ಲಕ್ಷಣವು ಇಲ್ಲದಿರುವುದರಿಂದ ಅವು ಇರುವ ಸ್ಥಳದಲ್ಲಿಯೇ ಸ್ಥಿರವಾಗಿ ನಿಲ್ಲುತ್ತವೆ ದ್ರವಗಳ ಒಂದೊಂದು ಭಾಗದಲ್ಲೂ, ಒಂದು ಭಾಗವು ಮತ್ತೊಂದು ಭಾಗವನ್ನು ಆಕರ್ಷಿಸುವ ಶಕ್ತಿಯನ್ನು ಪಡೆದಿರುವುದರಿಂದಲೇ ಹನಿಗಳು ಉಂಟಾಗುವುದು (Fromation of drops).

ಶಾಖವು ಒಂದು ಮುಖ್ಯವಾದ ಲಕ್ಷಣವನ್ನು ಪಡೆದಿದೆ. ಅದೇನೆಂದರೆ, ಪದಾರ್ಥಗಳನ್ನು ವಿಸ್ತರಿಸುವುದು ದ್ರವರೂಪದಲ್ಲಿರುವ ವಸ್ತುಗಳು ಘನರೂಪದ ವಸ್ತುಗಳಿಗಿಂತಲೂ, ಹೆಚ್ಚುಪ್ರಮಾಣದಲ್ಲಿ ವಿಸ್ತರಿಸುತ್ತವೆ. ಶಾಖವು ಅಂಟಿಕೊಳ್ಳುವ ಲಕ್ಷಣಕ್ಕೆ ವಿರೋಧವಾದದ್ದು. ಇದರ ಸಹಾಯದಿಂದ ಪದಾರ್ಥನಲ್ಲಿರುವ ಅಂಟುವ ಸ್ವಭಾವವನ್ನು ಕಡಿಮೆ ಮಾಡಬಹುದು.

## ಶಾಖದ ಪರಿಣಾಮಗಳು.

ಶಾಖದಿಂದ ಉಂಟಾಗುವ ಪರಿಣಾಮಗಳನ್ನು ಈತನು ತನ್ನ ಭಾಷಣಗಳಲ್ಲಿ ವಿವರಿಸಿದ್ದಾನೆ. ಶಾಖವು ಕಣಗಳ ರೂಪದಲ್ಲಿ, ಕಾದ ಪದಾರ್ಥಗಳ ಸುತ್ತಲೂ ಹರಡಿ, ಸಮೀಪದಲ್ಲಿರುವ ಇತರ ಪದಾರ್ಥಗಳ ಮೇಲೆ ತನ್ನ ಪ್ರಭಾವವನ್ನು ಬೀರುತ್ತದೆ. ಇದಲ್ಲದೆ, ಒಂದು ಕಾಯಿಸಿದ ಪದಾರ್ಥದಲ್ಲಿರುವ ಶಾಖದ ಕಣಗಳು. ಯಾವಾಗಲೂ ಸ್ಪಂದಿಸುತ್ತವೆ (Vibration) ಎಂದು ಈತನು ತಿಳಿಸಿದನು. ಈ ಸ್ಪಂದನದ ವೇಗವು ಹೆಚ್ಚಬೇಕಾದರೆ ಪದಾರ್ಥವನ್ನು ಇನ್ನೂ ಹೆಚ್ಚಾಗಿ ಕಾಯಿಸಬೇಕು. ಪದಾರ್ಥಗಳನ್ನು ಕಾಯಿಸಿದಷ್ಟೂ. ಅವುಗಳಲ್ಲಿರುವ ಶಾಖದ ಕಣಗಳೂ ಸ್ಪಂದನದ ವೇಗವೂ ಹೆಚ್ಚುತ್ತವೆ. ಇದೇ ಇವನ ತತ್ವ. ದ್ರವಗಳಲ್ಲಿರುವ ಶಾಖದ ಕಣಗಳು, ಬೇರೆ ಬೇರೆ ರೀತಿಯಲ್ಲಿ ಸ್ಪಂದಿಸುವುದರಿಂದ, ಅಂದರೆ, ಅವುಗಳ ಅಕ್ಷಗಳ ಸುತ್ತಲೂ ಹೆಚ್ಚು ವೇಗದಲ್ಲಿ ಸುತ್ತುವುದರಿಂದ, ಆ ವಸ್ತುಗಳು ಹರಡುವುದಕ್ಕೆ ಸಹಾಯಕವಾಗಿದೆ.

## ವಸ್ತುಗಳ ರಾಸಾಯನಿಕ ಮತ್ತು ಆಕರ್ಷಣ ಶಕ್ತಿಗಳು.

ನೀರು ಮತ್ತು ಎಣ್ಣೆಗಳು, ಏಕೆ ಪರಸ್ಪರ ಹೊಂದಿಕೊಳ್ಳುವುದಿಲ್ಲ ಎಂಬುದಕ್ಕೆ ಕಾರಣವುಂಟು. ಅವುಗಳಿಗೆ ಪರಸ್ಪರ ರಾಸಾಯನಿಕ ಆಕರ್ಷಣೆ ಇಲ್ಲ (Chemical Affinity) ಅಂದರೆ, ಎಣ್ಣೆಯೂ, ಕ್ಷಾರಕವೂ, ಪರಸ್ಪರ ಸೇರಿ, ಸಾಬೂನನ್ನೇ ಉತ್ಪತ್ತಿ ಮಾಡುವುದಕ್ಕೆ ಅವುಗಳಿರುವ ರಾಸಾಯನಿಕ ಆಕರ್ಷಣೆಯೇ ಕಾರಣ. ಒಂದೊಂದು ಪದಾರ್ಥಕ್ಕೂ ಇರುವ ವ್ಯತ್ಯಾಸವನ್ನು. ಅವುಗಳ ವಿದ್ಯುತಾಕರ್ಷಣಾ ಶಕ್ತಿಯ ಆಧಾರದ ಮೇಲೆ ಕಂಡುಹಿಡಿಯಬಹುದು. ರೇಶ್ಮೆಯ ನೂಲನ್ನು ಗಾಜಿನ ತಟ್ಟೆಯ ಮೇಲೆ ಉಜ್ಜಿದಾಗ ಅದು ಬೇಗನೇ, ವಿದ್ಯುತ್ತಾಕರ್ಷಣಾ ಶಕ್ತಿಯನ್ನು (Static Electricity) ಪಡೆಯುವುದರಿಂದ, ಅದು ಗಾಜನ್ನು ಆಕರ್ಷಿಸುವ ಶಕ್ತಿಯನ್ನು ಪಡೆಯುತ್ತದೆ ಇದಲ್ಲದೆ, ಹಗುರವಾದ ಯಾವ ಪದಾರ್ಥವನ್ನಾಗಲೀ, ಉಜ್ಜಿದ ನಂತರ ಇದು ಆಕರ್ಷಿಸುತ್ತದೆ. ಈ ಆಕರ್ಷಣಾಶಕ್ತಿಯನ್ನು ಎಲ್ಲಾ ವಸ್ತುಗಳೂ ಪಡೆಯುವುದಿಲ್ಲ ಗಾಜು ರೇಶ್ಮೆಯಲ್ಲಿ ಉತ್ಪತ್ತಿಮಾಡುವ ವಿದ್ಯುಚ್ಛಕ್ತಿಯು (+Ve) ಲೋಹಗಳಿಂದ ಉಂಟಾಗುವ ಶಕ್ತಿಯು.

(–Ve) ಆಗಿರುತ್ತದೆ. ಗಾಜನ್ನೂ ಲೋಹವನ್ನೂ ಬೇರೆಯ ರೀತಿಯಲ್ಲೂ ಹೋಲಿಸಬಹುದು. ಗಾಜಿನ ಮೂಲಕ ವಿದ್ಯುಚ್ಛಕ್ತಿಯು ಹರಿಯಲಾರದು (Non-Conductor) ಆದರೆ ಲೋಹದ ಮೂಲಕ ಅದು ಹರಿಯಬಲ್ಲದು. Conductor.

ವಿದ್ಯುಚ್ಛಕ್ತಿಯನ್ನು ಹೇಗೆ ಉತ್ಪತ್ತಿಮಾಡಬಹುದು ಮತ್ತು ಅದು ಅನೇಕ ರಾಸಾಯನಿಕ ಬದಲಾವಣೆಗಳಿಗೆ ಹೇಗೆ ಕಾರಣ ಎಂಬುದನ್ನು ಡೇವಿಯು ವರ್ಣಿಸಿದ್ದಾನೆ. ತಾಮ್ರವು ಸಾಮಾನ್ಯವಾಗಿ, ನೀರಿನ ಸಂಪರ್ಕದಲ್ಲಾಗಲೀ, ಆಮ್ಲಸಂಪರ್ಕದಲ್ಲಾಗಲೀ ವರ್ತಿಸುವುದಿಲ್ಲ. ಆದರೆ, ಸತುವಿನ ಜೊತೆಯಲ್ಲಿದ್ದಾಗ ಇದು, ಅವುಗಳ ಜೊತೆಯಲ್ಲಿ ವರ್ತಿಸಿ, ಜಲಜನಕವನ್ನು ಉತ್ಪತ್ತಿಮಾಡುತ್ತದೆ. ಇದಕ್ಕೆ ಕಾರಣ, ಈ ಎರಡು ಲೋಹಗಳಿಗೂ ಇರುವ ವಿದ್ಯುಚ್ಛಕ್ತಿಯನ್ನು ಹೀರುವುದರಲ್ಲಿ ಇರುವ ವ್ಯತ್ಯಾಸವೇ. ಒಂದೊಂದು ಲೋಹಕ್ಕೂ ಅದರ ವಿದ್ಯುಚ್ಛಕ್ತಿಯ ಉತ್ಪಾದನೆಯಲ್ಲಿ ವ್ಯತ್ಯಾಸವಿರುವುದರಿಂದ ಈ ಶಕ್ತಿಯನ್ನು ಅಳೆದು ಅವು ಪಡೆದಿರುವ ಶಕ್ತಿಯ ಮೊತ್ತದ ಆಧಾರದ ಪ್ರಕಾರ ಒಂದು ಪಟ್ಟಿಯನ್ನು ತಯಾರಿಸಿದ್ದಾರೆ (Electro chemical Series) ಅವುಗಳಲ್ಲಿರುವ ಈ ಶಕ್ತಿಯ ವ್ಯತ್ಯಾಸವನ್ನು ನಾವು ಕಾಣುವುದರಿಂದ, ಒಂದು ಲೋಹವು, ರಾಸಾಯನಿಕ ಬದಲಾವಣೆಗಳಲ್ಲಿ ಯಾವ ರೀತಿಯಲ್ಲಿ ವರ್ತಿಸುತ್ತದೆ, ಎಂಬುದನ್ನು ಕಂಡುಹಿಡಿಯಲು ಸಾಧ್ಯವಾಗಿದೆ.

**ಕೆ. ಎಸ್. ಲಕ್ಷ್ಮಣರಾವ್.**

---

# ಇದುವೆ ಪಥ

೧

ಅರಿತುಕೋ ಜಾಗತಿಕ ವಿರಸ..ವಿಷಮುತೆಗಳನು
ಮನದ ಮೂಷಿಕೆಗಿಳಿದು ಸರಸಗೊಳಲಿ ;
ಪ್ರೇಮಗಂಗಾದೇವಿ ಶಕ್ತಿ–ಶಾರದೆಯರನು
ಕರೆದು ಕೆಲಬಲಗಳಲಿ ಇರಿಸಿಕೊಳಲಿ.

೨

ಚಿನ್ಮಯ ಜ್ಯೋತಿ - ಪರಮಪ್ರೀತಿಗಳನೊಗಕೆ
ಶಕ್ತಿ ಬಾಗುತೆ ಕೊರಳ ಕೊಡುತಲಿರಲಿ ;
ಮಾನವೀಯತೆಯ ನಿಜಕಲ್ಯಾಣಸಾಧನೆಗೆ
ಇದುವೆ ಪಥವೆಂದು ಜಗವರಿಯುತಿರಲಿ !

**ಸೇತುರಾಮು.**

# ಓ ಸ್ತುತಿಪಾಠಕ ಶುಕವೆ

ದಿಕ್ಕು ದಿಕ್ಕಿಂದ ತಿರಿದೊಕದ್ದೊ ಕೊಂಡೊಕಣ್ತಪ್ಪಿಸಿಯೊ
ಕುಯುಕ್ತಿಯಿಂದ ಸಂಗ್ರಹಿಸಿದ ಕಳ್ಳ ವಸ್ತುವಿನ
ಮೂಲ ರೂಪನ್ನೇ ವಿಕಾರಗೊಳಿಸಿ ದಕ್ಕಿಸಿಕೊಂಡು
ಅದಕೊಂದು ಅಧಿಕಾರದ ದೊಡ್ಡ ಮುದ್ರೆಯೊತ್ತಿ
ಕಾಲಕ್ಕೆ ತಕ್ಕ ರೂಪಧಾರಣೆ ಮಾಡಿ
ಸ್ವಂತ ನಾಲೆಂದು ಪಕ್ಕನ್ನ ಕಾದಿರಿಸಿ
ರಾತ್ರೋರಾತ್ರಿ ನಿದ್ರೆ ಗೆಟ್ಟು
ಓದುವಭ್ಯಾಸದ ಸರ್ಕಸ್ ಮಾಡಿ
ಮುದ್ರಿಸಿದ ಸಾವಿರಾರು ಕರಡನ್ನ ಹಂಚಿ
ವೇದಿಕೆಯ ಮೇಲೆ ಧ್ವನಿವರ್ಧಕದ ಮುಂದೆ
ನಿಂತು ಅದುರು ತುಟಿ ಒದರು ವಾಯುವಿನ
ತೊದಲಿ ಬಿಕ್ಕುವ ತಲೆ ತಿರುಕ
ಓ ಸ್ತುತಿ ಪಾಠಕ ಶುಕವೆ
ಗಳಪು ಎಲ ಎಲವೋ ಗಿಲಿಟ್ಟಿನ ಗಿಳಿಯೆ.

ಬೆವರು ಸುರಿದು ಕೊಳೆ ಹುಂಡೆಗಟ್ಟಿದರೂ
ಗಂಟಲ ನರ ಹರಿದು ನೆತ್ತರು ತೊಟ್ಟಿಕ್ಕಿದರೂ
ನಿನ್ನ ಹೊಗಳಿಕೆಯ ಹೊನ್ನ ಶೂಲದ ಮನೆ ಮಾತ್ರ
ಯುಗ ಯುಗದಿಂದ ತುಕ್ಕು ಹಿಡಿದು ಮೊಂಡಾದ
ಪ್ಲಾಸ್ಟಿಕ್ ಸರ್ಜರಿಯ ಮುಂಡೆ ಮುಖದ ಚೆಲುವಣ್ಣ.
ಬಂಜೆ ಬಟ್ಟೆ ಸುತ್ತಿ ಬಸುರೆನ್ನುವ
ಬಯಕೆ ಬಾನಂಚಿನರುಹೋದಯದ
ಬಾನ್ಯಸುರ ಅಚ್ಚ ಹೊಸ ಪ್ರೊಜಕ್ಟರು
ಮಂದಿ ನೋರೆ ಮಾತ್ರರಜತ ಪರದೆ.
ಇದು ಕತ್ತೆ ಒಂಟೆಗಳ ಪರಸ್ಪರ ಕಣ್ ಸನ್ನೆಯ ವ್ಯವಹಾರ
ಸ್ವಾರ್ಥಗಾಳಕೆ ಚುಚ್ಚಿದ ಸ್ತೋತ್ರದೆರೆಯ ವ್ಯಾಪಾರ
ಗಂಟೆಗಟ್ಟಲೆ ಲಂಗುಲಗಾಮಿಲ್ಲದೆ
ಹರಿಯ ಬಿಟ್ಟ ಮೂಳೆಯಿಲ್ಲದ ನಾಲಗೆಯ
ಅರ್ಥವಿಲ್ಲದ ಬರಿ ವ್ಯರ್ಥ ಪ್ರಲಾಪ
ಚೀಳು ಮುಲುಕಿ ಮುಲುಕಿ ಇಕ್ಕಿದ ತತ್ತಿ॥

ಕೆ. ಜಿ. ನಾಗರಾಜಪ್ಪ ಎಂ.ಎ.

# ಭಗವದ್ಗೀತೆಯಲ್ಲಿ ಸಾಮರಸ್ಯ

ಎಂ. ಎ. ಕೃಷ್ಣಸ್ವಾಮಿ ಎಂ.ಎ.

ಬೆಂಗಳೂರು

ಭರತಖಂಡದಲ್ಲಿ ಎಲ್ಲ ದಾರ್ಶನಿಕರೂ ಪ್ರಮಾಣ ವೆಂದು ಪರಿಗ್ರಹಿಸಿರುವ ಗ್ರಂಥಗಳಲ್ಲಿ ಭಗವದ್ಗೀತೆಗೂ ಉಪನಿಷತ್ತುಗಳಷ್ಟೇ ಪ್ರಾಧಾನ್ಯ ದೊರೆತಿದೆ. ಭಗವ ದ್ಗೀತೆಯ ಒಂದೊಂದು ಅಧ್ಯಾಯದ ಕೊನೆಯಲ್ಲೂ ಹೇಳುವಂತೆ "ಭಗವದ್ಗೀತಾಸು ಉಪನಿಷತ್ಸು" ಎಂದು ಹೇಳುತ್ತಾ ಗೀತೆಗೆ ಉಪನಿಷತ್ತಿನ ಸ್ಥಾನವೇ ಮೀಸ ಲಾಗಿದೆ. ಗೀತೆ ಉಪನಿಷದ್ ಧೇನುಗಳ ದುಗ್ಧಾಮೃತ; ದೋಗ್ಧಾ ಶ್ರೀ ಕೃಷ್ಣ, ಅರ್ಜುನ ವತ್ಸ. ಈ ಗೀತೆ ಬಹಳ ಹಿಂದಿನಿಂದ ಇಂದಿನವರೆಗೂ ಆಧ್ಯಾತ್ಮಿಕ ಚಿಂತನೆ ಯಲ್ಲಿ ತೊಡಗಿರುವ ಎಲ್ಲರಿಗೂ ಮಾರ್ಗದರ್ಶಕವಾಗಿದೆ. ಇದಕ್ಕಿಂತಲೂ ಮಿಗಿಲಾದ ಸ್ಥಾನ ಗೀತೆಗೆ ದೊರಕಿರು ವುದು ಈ ಜೀವನದ ನಡೆವಳಿಕೆಯಲ್ಲಿ ಗೀತೆ ಕೊಡು ತ್ತಿರುವ ಮಾರ್ಗದರ್ಶನದಿಂದ ಎಂದು ಹೇಳಿದರೆ ತಪ್ಪೇನಲ್ಲ

ಗೀತೆಯ ಉಪದೇಶ ಮೂರು ಹಂತಗಳಲ್ಲಿ ವ್ಯಕ್ತ ವಾಗುತ್ತಿದೆ. ಮೊಟ್ಟಮೊದಲಿಗೆ ವ್ಯಕ್ತಿ ತನ್ನ ಸ್ವಭಾವ ಅಥವಾ ಸ್ವಧರ್ಮಗಳನ್ನು ಅನುಸರಿಸಿ ತನ್ನ ಶ್ರೇಯಸ್ಸಿಗೆ ಕಾರಣವಾದ ಮಾರ್ಗವನ್ನು ಕಂಡುಕೊಳ್ಳುವುದು. ಎರಡನೆಯದಾಗಿ ಸಮಾಜ ಜೀವಿಯಾದ ವ್ಯಕ್ತಿ ಸಮಾಜದಲ್ಲಿ ತಾನು ಬಾಳಿ ಸಮಾಜದ ಮುನ್ನಡೆಗೆ ಕಾರಣನಾಗುವ ದಾರಿ ಉಪದಿಷ್ಟನಾಗಿದೆ. ಮೂರನೆಯ ದಾಗಿ ಸಮಾಜವನ್ನೂ ಮೀರಿ ನಿಂತಿರುವ ವಿಶ್ವದ ಎಲ್ಲ ಧರ್ಮಗಳಿಗೂ ಎಂದರೆ, ವಿಶ್ವವನ್ನು ಸೃಷ್ಟಿಸಿರುವ ವಿಶ್ವದ ಪಾಲನೆಯಲ್ಲಿ ತೊಡಗಿರುವ ಮತ್ತು ವಿಶ್ವವನ್ನು ಕೊನೆಯಲ್ಲಿ ತನ್ನೊಳಕ್ಕೆ ಎಳೆದುಕೊಳ್ಳುವ ''ಬ್ರಹ್ಮ"ದ ಅಥವಾ ಪರಮಾತ್ಮನ ಬಗೆಗೆ ತಾನು ತಾಳಬೇಕಾಗಿರುವ ರೀತಿಯನ್ನು ತೋರಿಸುವುದು. ಹೀಗೆ ವ್ಯಕ್ತಿಯಲ್ಲಿ, ಸಮಾಜದಲ್ಲಿ ಇಡೀ ವಿಶ್ವದಲ್ಲೇ ಇರಬೇಕಾದ ''ಸಮ ರಸತೆ"ಯನ್ನು ಗೀತೆ ಬೋಧಿಸುವುದರಿಂದಲೇ ಮಿಕ್ಕೆಲ್ಲ ಶಾಸ್ತ್ರಗಳಿಗಿಂತಲೂ ಮಿಗಿಲಾದ ಸ್ಥಾನ ಇದಕ್ಕೆ ಸಲ್ಲಬೇ ಕಾಗಿದೆ.

ಸಮರಸತೆ ಎಂದರೆ ವ್ಯಕ್ತಿಯ ದೃಷ್ಟಿಯಿಂದ ಆತ ನಲ್ಲಿ ಇರುವ ದೈಹಿಕ, ಮಾನಸಿಕ, ಬೌದ್ಧಿಕ ಮತ್ತು ಆಧ್ಯಾತ್ಮಿಕ ಶಕ್ತಿಗಳ ಸಮವಾದ ಬೆಳವಣಿಗೆ–ವಿಕಾಸ. ಈ ಶಕ್ತಿಗಳಲ್ಲಿ ಯಾವುದೊಂದು ಮಿಕ್ಕೆಲ್ಲಕ್ಕಿಂತ ಹೆಚ್ಚಾಗಿ ಬೆಳೆದುದ್ದಾದರೆ ವ್ಯಕ್ತಿಯ ವೈಶಿಷ್ಟ್ಯ ಅಷ್ಟೂ ಅಷ್ಟೂ ಹಾನಿ ಹೊಂದುತ್ತದೆ. ಆದುದರಿಂದಲೇ ಈ ಶಕ್ತಿಗಳ ಸಂವಾದ (Harmony) ಅಗತ್ಯವಾದುದು. ಒಂದು ಸಂಗೀತ ಕಛೇರಿಯಲ್ಲಿ ಬಳಸುವ ಅನೇಕ ವಾದ್ಯಗಳು ಪ್ರಧಾನವಾದ ಶೃತಿಯೊಡನೆ ಮೇಳವಿಸುವಂತೆ ಹಾಗೂ ಗಾಯಕನು ಹಾಡುವ ಗೀತೆಯ ಲಯವನ್ನು ಅನುಸರಿಸಿ ತಾವು ಧ್ವನಿ ಮಾಡುವಂತೆ ಇರಬೇಕಾದುದು ಸಮರಸತೆ ಯಲ್ಲಿ. ಅಥವಾ ಇನ್ನೊಂದು ರೀತಿಯ ಉದಾಹರಣೆ ಯನ್ನು ಕೊಡಬಹುದಾದರೆ ಅಚ್ಚುಕಟ್ಟಾದ ಊಟ ವೊಂದರಲ್ಲಿ ಬರಿಯ ಸಿಹಿಯಾಗಲಿ, ಹುಳಿಯಾಗಲಿ, ಖಾರವಾಗಲೀ ಯಾವೊಂದರ ಆಧಿಕ್ಯವೂ ಇಲ್ಲದಂತೆ ಎಲ್ಲದರ ಯಥೋಚಿತ ಪ್ರಮಾಣ ಇರುತ್ತಿದ್ದು ಎಲ್ಲದರ ರುಚಿಯೂ ಅನುಭವಿಸಲ್ಪಟ್ಟು ಸಮವಾದ ಸುಖಾನು ಭವ ಒಟ್ಟನಲ್ಲಿ ಆಗುವಂತೆ ಎಂದು ಕೂಡ ಹೇಳಬಹುದು

ವ್ಯಕ್ತಿಯಲ್ಲಿ ಮುಖ್ಯವಾಗಿ ಇಲ್ಲಿನ ಜೀವನಕ್ಕೆ ಸಂಬಂಧಿಸಿ ದಂತೆ ಪ್ರಕಾಶ ಹೊಂದುವ ಜ್ಞಾನೇಚ್ಛಾಕ್ರಿಯಾ ಶಕ್ತಿಗಳು ಒಮ್ಮುಖವಾಗಿ ಯಾವುದೂ ಮಿತಿಮೀರದಂತೆ ನಡೆಯುತ್ತಿರಬೇಕು. ಈ ಬಗೆಗೆ ಮಹಾತ್ಮರ ಮತ್ತು ದುರಾತ್ಮರ ಲಕ್ಷಣವನ್ನು ಹೇಳುವ ಸುಭಾಷಿತ ವೊಂದನ್ನು ನೆನಸಿಕೊಳ್ಳಬಹುದು.

ಮನಸ್ಯೇಕಂ ವಚಸ್ಯೇಕಂ ಕರ್ಮಣ್ಯೇಕಂಮಹಾತ್ಮನಾಂ
ಮನಸ್ಯೇಕಂ ವಚಸ್ಯೇಕಂ ಕರ್ಮಣ್ಯೇಕಂ ಮಹಾತ್ಮನಾಂ||

ಜ್ಞಾನವಾದರೂ ಸತ್ವದಿಂದ ಉಂಟಾಗುವಂತಹುದು: ಇಚ್ಛಾಕ್ರಿಯೆಗಳು ರಜೋಗುಣದಿಂದ ಸತ್ವರಜೋಗುಣಗಳು ಸರಿಯಾದ ರೀತಿಯಲ್ಲಿ ಪ್ರವೃತ್ತವಾಗದಿದ್ದರೆ ತಮೋಗುಣ ಅವುಗಳನ್ನು ಆವರಿಸೀತು. ಹಾಗೂ ಜ್ಞಾನೇಚ್ಛಾಕ್ರಿಯೆಗಳು ವ್ಯಕ್ತಿಯಲ್ಲಿ ಪ್ರಕಾಶವಾಗದೇ ಇದ್ದಾವು. ಕೇವಲ ಇಚ್ಛಾಕ್ರಿಯೆಗಳೇ ಹೊಂದಿದರೂ ಆಗ ವ್ಯಕ್ತಿಗೆ ಶಾಂತಿಯ ಸುಖದ ಆನಂದಾನುಭವದ ಅವಕಾಶ ದೊರೆಯಲಾರದು. ಇಚ್ಛಾಕ್ರಿಯಾ ವಿರಹಿತವಾದ ಜ್ಞಾನದಿಂದ ವ್ಯಕ್ತಿಗೆ ಯಾವ ದೃಷ್ಟ ಪ್ರಯೋಜನವೂ ಬರಲಾರದು. ಆದುದರಿಂದಲೇ ಶ್ರೀ ಕೃಷ್ಣನ ಅಭಿಮತದಂತೆ ಜ್ಞಾನ ಇಚ್ಛಾ ಕ್ರಿಯೆಗಳಲ್ಲಿಯೂ ಪ್ರವಹಿಸಬೇಕು. ಆದುದರಿಂದಲೇ ಕೇವಲ ಶುಷ್ಕವಾದ ತತ್ವ ಜ್ಞಾನವನ್ನ ಗೀತೆ ಒಪ್ಪಿದಂತೆ ಕಾಣುವುದಿಲ್ಲ ಆ ತತ್ವ ಜ್ಞಾನದ ಪರಿಣಾಮವಾಗಿ ವ್ಯಕ್ತಿಯ ನಡವಳಿಕೆಯಲ್ಲಿ ಮೂಲಭೂತ ಮಾರ್ಪಾಟುಗಳಾಗಬೇಕು. ವ್ಯಕ್ತಿಗೆ ತನ್ನ ಸುತ್ತಮುತ್ತಿನವರ ಅಭ್ಯುದಯ. ಸೌಖ್ಯ ಆಗತ್ಯವಾದೀತು. ತತ್ವವನ್ನು ಭಗವಂತನೆಂದು ಭಾವಿಸಿ ಭಗವಂತನಿಗೆ ತನ್ನೆಲ್ಲವನ್ನೂ ಸಮರ್ಪಣಮಾಡಿ ಪ್ರಸನ್ನನಾದ ವ್ಯಕ್ತಿ ಎಂದಿನಂತೆ ತನ್ನೆಲ್ಲಕಾರ್ಯಗಳಲ್ಲೂ ತೊಡಗಿಯೇ ಇರಬೇಕು. ಆದರೆ ಫಲಾಭಿಸಂಧಿಯನ್ನು ಬಿಟ್ಟು ಮಾತ್ರ ಅಥವಾ ಭಗವದರ್ಪಣವೆಂದು ಭಾವಿಸಿ ಮಾತ್ರ ಅಥವಾ ಭಗವಂತನು ತನಗೆ ನಿಯೋಜಿಸಿರುವ ಕೈಂಕರ್ಯವೆಂದು ಮಾತ್ರ ಎಲ್ಲ ಕೆಲಸಗಳಲ್ಲಿ ಉತ್ಸಾಹದಿಂದ ಪ್ರವೃತ್ತನಾಗಬೇಕು. ಇದರಿಂದ ಲೋಕ ಸಂಗ್ರಹ ಸಾಧ್ಯವಾಗುತ್ತದೆ. ಸಮಾಜದ ದೃಢತೆ ಉಳಿಯುತ್ತದೆ.

ಸಮಾಜದ ಚೌಕಟ್ಟನಲ್ಲಿ ಬಾಳನ್ನು ಸಾಗಿಸಬೇಕಾಗಿರುವ ವ್ಯಕ್ತಿಗೆ ಈ ಮೇಲೆ ಹೇಳಿದ ರೀತಿಯನ್ನು ಹೊರತಾಗಿ ಬೇರೆ ದಾರಿ ಕಾಣಲಾರದು. ಆದುದರಿಂದಲೇ ಗೀತೆ ಸಮತ್ವವನ್ನೇ ಮೇಲಿಂದ ಮೇಲೆ ಎತ್ತಿತೋರಿಸಿ "ಸಮತ್ವಂ ಯೋಗುಉಚ್ಯತೇ" ಎಂದು ಎಲ್ಲ ದ್ವಂದ್ವಗಳಲ್ಲೂ (ಸುಖ, ದುಃಖ ಲಾಭಲಾಭ, ರಾಗ ದ್ವೇಷ ಇತ್ಯಾದಿ) ಸಮದೃಷ್ಟಿಯನ್ನು ಒತ್ತಿ ಹೇಳುತ್ತದೆ. ಯೋಗವೆಂದರೆ ದಾರಿ ಎಂಬ ಅರ್ಥ ಇಲ್ಲಿ ಕಂಡುಬರುತ್ತದೆ. ಉತ್ಕೃಷ್ಟವಾದ ಸಮತ್ವದ ಈ ದಾರಿ ವ್ಯಕ್ತಿಯ ಸಂಪೂರ್ಣ ವಿಕಸನಕ್ಕೆ ಅನುಕೂಲವಾಗಿದ್ದು ಈತ ಸಮಾಜದಲ್ಲಿ ಹೆಚ್ಚು ಪ್ರಭಾವವನ್ನು ಮಾಡಿಯಾನು ಎಂದು ಕೂಡ ಹೇಳಬಹುದಾಗಿದೆ. ಕೆಲವು ಗ್ರೀಕ್ ತತ್ವಜ್ಞಾನಿಗಳು ಹೇಳುತ್ತಿದ್ದಂತೆ "Nothing in excess". ಅಥವಾ ಚೀನಾದೇಶದ ಕಾನ್‌ಫ್ಯೂಸಿಯಸ್ ಹೇಳಿದ ಮಿತಿಯ ಸಿದ್ಧಾಂತ. ಅಥವಾ ಬುದ್ಧನು ತೋರಿಸಿ ಕೊಟ್ಟ 'ಮಧ್ಯಮಾರ್ಗ ಇವುಗಳೆಲ್ಲದರೊಡನೆ ಗೀತೆಯ ಈ ಸಮತ್ವಯೋಗ ಸಂವಾದ ಹೊಂದುವುದಾಗಿದೆ.

ವ್ಯಕ್ತಿಯ ಅಂತಿಮಧ್ಯೇಯ ವಿಶ್ವದ ತತ್ವವಾದ ಬ್ರಹ್ಮವನ್ನು ಸೇರುವುದು. ಇದನ್ನೇ ಮೋಕ್ಷ. ಆತ್ಮ ಸಾಕ್ಷಾತ್ಕಾರ, ಬ್ರಹ್ಮಾನುಭವ, ಆನಂದದ ಚರಮ ಸೀಮೆ ಎಂದು ಮುಂತಾಗಿ ಕರೆದಿರುವುದನ್ನು ಕಾಣ ಬಹುದು. ಈ ಕೊನೆಯಗುರಿಯನ್ನು ಮುಟ್ಟಬೇಕಾಗಿರುವ ವ್ಯಕ್ತಿಗೆ ಇರುವುದಾದರೂ ಆತನಲ್ಲಿರುವ ವಿವಿಧಶಕ್ತಿಗಳು ಮಾತ್ರ. ಈ ಶಕ್ತಿಗಳೇ ಈತನಿಗೆ ಸ್ವಧರ್ಮವನ್ನು ನಿಯಮನಗೊಳಿಸುವಂತಹುವು. ಏಕೆಂದರೆ ಈತ ತನ್ನ ಪ್ರಕೃತಿ ಅಥವಾ ಸ್ವಭಾವವನ್ನು ಬಿಟ್ಟು ಪ್ರವರ್ತಿಸುವುದು ಸಾಧ್ಯವಿಲ್ಲ ಒಂದು ವೇಳೆಹಾಗೆ ಮಾಡಿದರೆ ಅದರಿಂದ ಹಾನಿಯೇ ಹೊರತು ಸಿದ್ಧಿಯಂತೂ ಅಲ್ಲ. ಆದುದರಿಂದಲೇ ಶ್ರೀ ಕೃಷ್ಣ ಸ್ವಧರ್ಮವನ್ನು ಒತ್ತಿ ಹೇಳಿದ್ದಾನೆ. "ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ, ಶ್ರೇಯಾಂ ಸ್ವಧರ್ಮೋ ವಿಗುಣಃ ಪರಧರ್ಮಾತ್ ಸ್ವನುಷ್ಠಿತಾತ್" ಸ್ವಧರ್ಮದ ಅನುಷ್ಠಾನದಿಂದ ತತ್ವಜ್ಞಾನದ ಲಾಭವೂ ತನ್ಮೂಲಕ ಪರಮಪ್ರಾಪ್ಯವಾದ ಆನಂದಾನುಭವವೂ ಆಗಿಯೇ ಆಗುತ್ತದೆಂದು ಗೀತೆಯಲ್ಲಿ ಎತ್ತಿ ತೋರಿಸಲಾಗಿದೆ. ಈ ಸ್ವಧರ್ಮಾನುಷ್ಠಾನವೂ ಕೂಡ ಸಮರಸತೆಯ ಅಡಿಪಾಯದ ಮೇಲೆ ನಿಲ್ಲುವಂತಹುದು. ಏಕೆಂದರೆ ಅತಿದೂರ ಹೋದವನಿಗೆ ಹೋಗಬೇಕಾದ ಸ್ಥಳವೂ ಮೀರಿಹೋದೀತು. ಆದುದರಿಂದಲೇ ಗೀತೆ ಈ ಸಾಮರಸ್ಯವನ್ನು ಪದೇ ಪದೇ ತೋರಿಸಿಕೊಡುತ್ತಾ ಸಮದೃಷ್ಟಿಯುಳ್ಳವನನ್ನು ಯೋಗಿಯೆಂದೂ, ಜ್ಞಾನಿಯೆಂದೂ, ಭಕ್ತನೆಂದೂ ಕರೆದು ಕೊಂಡಾಡಿರುವುದು ಗಮನಾರ್ಹವಾಗಿದೆ ಆಯುರ್ವೇದದಪ್ರಕಾರ ಆರೋಗ್ಯ ನಮ್ಮ ಶರೀರದಲ್ಲಿರುವ ವಾತ, ಪಿತ್ತ,ಕಫಗಳೆಂಬ ಮೂರು ಧಾತುಗಳ ಸಮಸ್ಥಿತಿ. ಯಾವೊಂದುಧಾತು ವಿಷಮಿಸಿದರೂ ದೇಹ ಹಿಂಸೆಗೆ ಗುರಿಯಾಗುತ್ತದೆ ಹಾಗೆಯೇ ವ್ಯಕ್ತಿಯ ಶಕ್ತಿಗಳೆಲ್ಲದರ ಸಮರಸತೆಯೇ ಯೋಗ.

# ಅಜ್ಞಾನ

## ಕೆ. ಎಸ್. ನಿಸಾರ್ ಅಹಮದ್

ಸಿಕ್ಕಿದ್ದ ನನಗೊಬ್ಬ ಸುಜ್ಞಾನಿ, ಸಂತ
ಕೈಯೊಳಗೆ ಹಿಡಿದಿದ್ದ ಬೈಬಲ್ಲು ಗ್ರಂಥ.
"ಗುರುವರ್ಯ" ಎಂದವನ ಮಾಡಿ ಸನ್ಮಾನ
"ಎಲ್ಲಿ ಕೊಡು ಪುಸ್ತಕವ ಸ್ವಲ್ಪ ಓದೋಣ"
ಎನಲು – "ಕಂದಾ" ಎಂದು ಘನತೆಯನೆ ಕೊಂದ.
ಮತ್ತೆ, ಕುರಿತನವನ್ನು "ಗುರುವರ್ಯ, ಸಣ್ಣ
ಮಗುವೆಂದು ಕರೆಯುದಿರು ಬೆಳೆದಿರುವ ನನ್ನ !
ನಿನ್ನ ಕೈಯಲ್ಲಿರುವ ಪುಸ್ತಕದ ಸಾರ
ಅರೆದು ಕುಡಿದವ ನಾನು. ಅಷ್ಟೇಕೆ ಅದಕು
ಹೆಚ್ಚು ಗಳಿಸಿದ್ದೇನೆ ಅರಿವೆಂಬ ಸರಕು."
ಎನಲು ಮೌನವ ಮುಗುಳು ನಗೆಯಿಂದ ಮುರಿದ;
ಪುಸ್ತಕವ ತೆರೆದದನು ನನ್ನೆದುರು ಹಿಡಿದ –
ಆಶ್ಚರ್ಯ ! ಆಶ್ಚರ್ಯ ! ಏನಿದೀ ಗೂಢ?
ಇದ್ದಕಿದ್ದಂತೀಗ ಹೇಗಾದೆ ಕುರುಡ ?

ಸ್ಫೂರ್ತಿ : Stephen Crane ಬರೆದ "THE BOOK OF WISDOM" ಎಂಬ ಕವನ.



ಶ್ರೀ ಶ್ರೀ ಶ್ರೀ ಉದ್ದಾನ ಶಿವಯೋಗಿಗಳು



ಶ್ರೀ ಕ್ಷೇತ್ರದ ವಿಹಂಗಮ ನೋಟ

# ಸೂಕ್ತಿಮಂಜರಿ

## ಬಾಳು

ಬಾಳು ಬೇಸರವೆಂದು ಗೋಳಿಡುವೆಯೇತಕ್ಕೆ
ಬಾಳಿನೊಳಗಿಹುದು ಬೇಕಾದುದೆಲ್ಲ
ಬೀಳುಗೈವಂಗೆ ಬರಿ ಮಳಲೊಟ್ಟಲೀ ಬಾಳು:
ಸವಿಯಬಲ್ಲಂಗದುವೆಯುಚ್ಚುಬೆಲ್ಲ.

ಬಿರುಮಳೆಯ ಹೊಡೆತದಿಂ ಬಗ್ಗಡವ ನೀರ್‌ಬಂದು
ಬಳಿಕ ನೀರ್‌ತಿಳಿದು ಕೆರೆ ತುಂಬಿ ನಗದೆ?
ಉರುತರದ ವಿಧಿಘಾತ ವರ್ಷದಿಂ ಬಾಳ್ ಕದಡು:
ಕಾಲಕ್ಕೆ ಜೀವನವು ತಿಳಿಯಾಗದೆ?

ಕಷ್ಟಕೋಟಲೆ ಕಡಲ ಪೆರ್ದೆರೆಗಳಂತೊದವೆ
ನಿಂತು ಸೀನೀರ ಎಪೆಗೊಡಲು ಬೀಳ್ವೆ;
ಅಷ್ಟಿಷ್ಟು ಎಪೆಗೊಟ್ಟು ಮುಂತಾಗಿ ತಲೆಗೊಟ್ಟು
ನಿಲಲು ಬೆಟ್ಟದುವಾದೊಡೇನವನು ತಾಳ್ವೆ.

## ದೈವಶಿಕ್ಷೆ

ಮಗನ ಮುಂದಣ ಹಿತಕ್ಕವನ ಶಿಕ್ಷಿಪ ತಂದೆ,
ಶಿಕ್ಷೆಯಲ್ಲಡಗಿಹುದು ಶುಭದ ಹರಕೆ;
ಹಗೆಯಲ್ಲ ದೈವ, ನರನೊಳ್ಳಿತಕೆ ಶಿಕ್ಷಿಪುದು:
ದೈವಶಿಕ್ಷೆಯು ಜೇನು—ಮದ್ದು ಬೆರಕೆ.

## ತಾಳ್ಮೆಯ ನಿಷ್ಕಾಮ ಕರ್ಮ

ಬಿತ್ತಿದೊಡನೆಯೆ ನೆಲವ ಬೆದಕಿನೋಡಲು ಮೊಳಕೆ
ಮೇಲೆದ್ದು ಕಾಣುವುದೆ? ಕಾಯೊ. ಮೂಢ!
ಸುತ್ತ ಪಾತಿಯ ಕಟ್ಟ ನೀರೆರೆವ ಕೃಷಿಯೊಂದೆ
ನಿನ್ನ ಕರ್ಮವೊ: ಫಲದ ಆಶೆ ಬೇಡ.

## ಪಯಣಕಾಲದ ಓದು

ಪಯಣದಲ್ಲೋದೇಕೆ? ಸುತ್ತಲೂ ತೆರೆದಿಹವು
ಪ್ರಕೃತಿ ಲೇಖಿಸಿದ ಹೊತ್ತಗೆಯಹಾಳೆ;
ಬಗೆಬಗೆಯ ಬಣ್ಣದಕ್ಕರಗಳಿಂದೊಕ್ಕಣಿಸಿ
ಬರೆದಿಹುದು ಬಾಳ್ಗಬ್ಬ ಸಾಲುಸಾಲೆ.

—ಎಂ.ವಿ. ಸೀತಾರಾಮಯ್ಯ

# ರತ್ನಾಕರ ವರ್ಣಿ

ಲೇಖಕರು :
ಶ್ರೀ ಡಿ. ಪದ್ಮನಾಭಶರ್ಮ,
ಭುವನಹಳ್ಳಿ

## ಕನ್ನಡ ಕಾವ್ಯಗಳು ನಡೆದು ಬಂದ ಹಾದಿ

ಕನ್ನಡ ಸಾಹಿತ್ಯಕ್ಷೇತ್ರ ವೃಕ್ಷವು ಪ್ರಾಚೀನಕಾಲದಿಂದಲೂ ಅಸಂಖ್ಯಾತ ಕಾವ್ಯಕುಸುಮಗಳನ್ನರಳಿಸಿ, ಶೃಂಗಾರಾದಿ ನವರಸರೂಪ ಸುಗಂಧವನ್ನು ಬೀರುತ್ತಾ ಬಂದಿದೆ ಈ ಸಾಹಿತ್ಯವೃಕ್ಷವನ್ನು ಪೋಷಿಸಿ ಸಂಪದ್ಭರಿತವನ್ನಾಗಿ ಮಾಡಿದವರಲ್ಲಿ ಜೈನ, ವೀರಶೈವ. ಬ್ರಾಹ್ಮಣ ಕವಿಗಳೆಲ್ಲರೂ ಸೇರಿದ್ದಾರೆ.

ಮೊದಲು ಜೈನ ಕವಿಗಳು ಚಂಪೂರೂಪವಾದ ಪ್ರೌಢಕಾವ್ಯಗಳಿಂದಲೇ ತುಂಬಿಸಿದರು. ಪ್ರಾಕೃತ ಮತ್ತು ಸಂಸ್ಕೃತ ಭಾಷೆಗಳಲ್ಲಿ ಅಪ್ರತಿಮ ವಿದ್ವಾಂಸರಾಗಿದ್ದ ಅವರು ಪ್ರೌಢಕಾವ್ಯಗಳನ್ನು ರಚಿಸಿದ್ದುದು ಸಹಜವಾಗಿಯೇ ಇದ್ದಿತು. ಅವರ ಕಾವ್ಯಗಳು ಜೈನ ತತ್ವಗಳನ್ನು ಕಾವ್ಯದ ಚೌಕಟ್ಟಿನಲ್ಲಿ ಬೆಳಗಿಸಿದುವು.

ಜೈನ ಕವಿಗಳ ಮಹಾಕಾವ್ಯಗಳು ಸಾಮಾನ್ಯ ಜನತೆಗೆ ಎಟುಕುವಂತಿರಲಿಲ್ಲ. ಆಗ ವೀರಶೈವ ಕವಿಗಳು ಷಟ್ಪದಿಕಾವ್ಯಗಳ ಪರಂಪರೆಯನ್ನು ಪ್ರಾರಂಭಿಸಿದರು. ಚಂಪೂಕಾವ್ಯಗಳು ಹಳೆಗನ್ನಡ ಭಾಷೆಯಲ್ಲಿ ಮೂರ್ತಿವೆತ್ತಿದ್ದರೆ. ಷಟ್ಪದಿಕಾವ್ಯಗಳು ನಡುಗನ್ನಡ ಭಾಷೆಯಲ್ಲಿ ಸೃಷ್ಟಿಯಾಗಿದ್ದುವು. ಕಾಲಕ್ರಮದಲ್ಲಿ ಷಟ್ಪದೀ ಛಂದಸ್ಸಿನ ಕಾವ್ಯಗಳು ಸಹ ಶ್ರೀಸಾಮಾನ್ಯನಿಗೆ ಅರ್ಥವಾಗುವುದು ಸ್ವಲ್ಪ ಕಷ್ಟವೇ ಆಯಿತು. ಶ್ಲೇಷೆ, ವ್ಯಂಗ್ಯೋಕ್ತಿ, ಅರ್ಥಾಂತರನ್ಯಾಸಾದಿಗಳಿಂದ ಈ ಬಗೆಯ ಕಾವ್ಯಗಳೂ ಕ್ಲಿಷ್ಟವೇ ಆಗಿದ್ದುವು.

ಬಹು ಜನಪ್ರಿಯವಾದಾಗಲೇ ಕಾವ್ಯವು ವ್ಯಾಪಕವಾದ ಪ್ರಸಿದ್ಧಿಯನ್ನು ದೊರಕಿಸಿಕೊಳ್ಳಬಲ್ಲುದು. ಬಹು ಜನ ಮೆಚ್ಚಿಗೆಯೇ ಬಹು ಜನಪ್ರಿಯತೆಯ ಕುರುಹು. ಕನ್ನಡ ಸಾಹಿತ್ಯದ ಸ್ವರೂಪವೂ ಈ ಬಗೆಯ ಜನಪ್ರಿಯತೆಯನ್ನು ಗಳಿಸಿಕೊಳ್ಳುವುದರಲ್ಲಿ ಹಿಂದಾಗಲಿಲ್ಲ. ಚಂಪೂ ಮತ್ತು ಷಟ್ಪದಿ ರಚನೆಗಳು ಹಿಂದಾದುವು. ವಚನಗಳು ವೇದೋಪನಿಷತ್ತುಗಳ ಸಾರವನ್ನೆಲ್ಲಾ ಹಿಂಡಿ ಸುಲಭವಾದ ಕನ್ನಡನುಡಿಗಳಲ್ಲಿ ಜನಗಳ ಮನಸನ್ನು ತಣಿಸುವುದರಲ್ಲಿ ಸಮರ್ಥವಾದುವು. ಸಾಂಗತ್ಯ ಛಂದಸ್ಸಿನ ಕಾವ್ಯಗಳಂತೂ ಹಾಡುಗಬ್ಬಗಳಾಗಿ ಮನೆ ಮನೆಯ ಹೆಣ್ಣುಮಕ್ಕಳೂ ಓದಿ ಅರ್ಥಮಾಡಿಕೊಂಡು ನಲಿಯುಂತಾಯಿತು.

## ಸಂಗೀತಮಪಿ ಸಾಹಿತ್ಯಂ ಸರಸ್ವತ್ಯಾಃ ಸ್ತನದ್ವಯಂ

ಸಂಗೀತ ಮತ್ತು ಸಾಹಿತ್ಯಗಳು ಸರಸ್ವತೀದೇವಿಯ ಎರಡು ಸ್ತನಗಳಿದ್ದಂತೆ! ಕಾವ್ಯರಸ ಪಿಪಾಸುಗಳಾದ ಸಹೃದಯೀ ಶಿಶುಗಳಿಗೆ ಸರಸ್ವತಿಯ ಎರಡು ಸ್ತನಗಳ ಪಾನವೂ ಮುಖ್ಯವೇ! ಸರಸ್ವತೀದೇವಿಯ ಇಂತಹ ವರಪ್ರಸಾದದಿಂದ ಸಮುದ್ಭವಿಸಿ ಬಂದುದರಲ್ಲಿ ದಾಸ ಸಾಹಿತ್ಯವು ಸಾಹಿತ್ಯರಸವನುಣಿಸಿ ತಣಿಸುವುದರ ಜೊತೆಗೆ ಸಂಗೀತಮಾಧುರ್ಯವನ್ನೂ ಕಿವಿಗೆ ತುಂಬುತ್ತದೆ.

ದಾಸಸಾಹಿತ್ಯವನ್ನು ಸೃಷ್ಟಿಸಿದವರಲ್ಲಿ ಪುರಂದರ ದಾಸರು ಮತ್ತು ಕನಕದಾಸರು ಪ್ರಮುಖರಾದ ಎರಡು ರತ್ನಗಳಾಗಿದ್ದಾರೆ. ಈಗ ಮೂರನೆಯ ರತ್ನ ಮತ್ತೊಂದು ಬೆಳಕಿಗೆ ಬಂದಿದೆ. ಆ ರತ್ನ ಬೇರೆ ಯಾವುದೂ ಅಲ್ಲ. ಸಾಂಗತ್ಯ ಛಂದಸ್ಸಿನಲ್ಲಿ ಭರತೇಶ ವೈಭವವನ್ನು ಮೆರೆಸಿದ ಮಹಾಕವಿ ರತ್ನಾಕರ ವರ್ಣಿ.

## ಕೀರ್ತನ ಸೃಷ್ಟಿಕರ್ತ ರತ್ನಾಕರ ವರ್ಣಿ

ರತ್ನಾಕರ ಮಹಾಕವಿಯ ಪರಿಚಯ ಪ್ರತಿಯೊಬ್ಬ ಕನ್ನಡಿಗನಿಗೂ ಈಗಾಗಲೇ ಇದ್ದೇ ಇದೆ. ಇದರಿಂದ ಮತ್ತೆ ಆ ಮಹಾಕಾವ್ಯ ಸೃಷ್ಟಿಕರ್ತನ ಪರಿಚಯವನ್ನು ವಿಸ್ತೃತವಾಗಿ ಹೇಳುವುದು ಅನವಶ್ಯಕ. ರತ್ನಾಕರ

ಕವಿಯ ವಿಚಾರದಲ್ಲಿ ಒಂದು ದಂತಕಥೆ ಸಹ ಪ್ರಚಾರ ದಲ್ಲಿದೆ.

ಕವಿ ರತ್ನಾಕರ ಹದಿನಾರನೇ ಶತಮಾನದ ಆದಿ ಭಾಗದಲ್ಲಿದ್ದವನು. ಮೂಡಬಿದಿರೆಯ ಸೂರ್ಯವಂಶದ ರಾಜನಾಗಿದ್ದ ದೇವರಾಜನ ಮಗ. ಕಾವ್ಯಾಲಂಕಾರ, ಲಕ್ಷ್ಮಣಶಾಸ್ತ್ರ, ಹಾಗೂ ಆಧ್ಯಾತ್ಮ ವಿದ್ಯೆಗಳಲ್ಲಿ ನಿಪುಣನಾಗಿದ್ದವನು. ಜೊತೆಗೆ ಕವಿತಾವನಿತೆ ತಾನಾಗಿ ಒಲಿದುಬಂದು ವರಕವಿಯನ್ನಾಗಿ ಮಾಡಿದಳು. ಶೃಂಗಾರ ಕವಿ ಹಂಸರಾಜನೆಂಬ ಬಿರುದಿನಿಂದ ವಿಖ್ಯಾತನಾದ ಮಹಾ ರಸಿಕ. ಆತನ ಈ ರಸಿಕ ರಸೋಲ್ಲಸಿತದಿಂದ ಉದ್ಭವನಾದ ಕೃತಿಮೇರು ಭರತೇಶ ವೈಭವ. ಭೋಗಕ್ಕೆ ಆಕರವಾದ ಶೃಂಗಾರ ಮೇರುಗಿರಿ ಶಿಖರದಲ್ಲಿ ಆ ಮಹಾ ಕಾವ್ಯವನ್ನು ಮೆರೆಸಿದನು. ಬಹುಶಃ ಕಾರ್ಕಳದ ಭೈರವರಸನ ರಾಜಕುಮಾರಿ ಈತನನ್ನು ಮೋಹಿಸಿದುದು ಇವನ ಶೃಂಗಾರಕಲೆಯ ಪರಿಪೂರ್ಣತೆಯಿಂದಲೇ ಇರ ಬೇಕು. ಭೋಗದ ಜೊತೆಗೆ ಯೋಗವನ್ನು ಸಿದ್ಧಪಡಿಸಿ ಕೊಂಡಿದ್ದ ಈ ಭೋಗಯೋಗಿ, ಯೋಗದ ಬಲದಿಂದ ವಾಯುಧಾರಣೆಯನ್ನು ಮಾಡಿ ಸೌಧಾಗ್ರದ ಗವಾಕ್ಷಿಯ ಮೂಲಕ ರಾಜಪುತ್ರಿಯ ಸ್ನೇಹವನ್ನು ಪಡೆಯುತ್ತಿದ್ದ ನಂತೆ! ಈ ವಿಷಯ ಹೊರಬಿದ್ದಾಗ ಅಲ್ಲಿಂದ ತಪ್ಪಿಸಿ ಕೊಂಡು, ಆ ಸಿಟ್ಟಿನಿಂದ ಜೈನಧರ್ಮವನ್ನೇ ತೊರೆದು ಕೆಲವು ಕಾಲ ವೀರಶೈವನಾಗಿದ್ದು ಮತ್ತೆ ಜೈನಧರ್ಮಕ್ಕೆ ಹಿಂದಿರುಗಿದುದೂ ಆಯಿತು.

ಅಲ್ಲಿಂದೀಚೆಗೆ ನಡೆದ ಘಟನೆಗಳಿಂದ ಆತನ ಶೃಂಗಾರ ಭೋಗಗಳು ಅಂತ್ಯಾವಸ್ಥೆಗೆ ಬಂದಿರಬೇಕು. ಶೃಂಗಾರದಲ್ಲಿ ಆತನಿಗೆ ಜಿಹ್ವಾಸೆ ಹುಟ್ಟಿರಬೇಕು. ಅದರ ಪರಿಣಾಮವಾಗಿಯೇ ರತ್ನಾಕರಶತಕ ಮತ್ತು ಅಪರಾಜಿತಶತಕಗಳು ಹುಟ್ಟಿದವೆನ್ನಬಹುದು. ರತ್ನಾ ಕರಶತಕನನ್ನು ರಚಿಸುವ ವೇಳೆಗೆ ಅವನಲ್ಲಿ ಶೃಂಗಾರ ಭಾವವು ಸಂಪೂರ್ಣ ಕಳಚಿಹೋಗಿ ವೈರಾಗ್ಯವು ಅಂಕು ರಿತವಾಗಿತ್ತೆನ್ನಲು ಕೆಳಗಿನ ಈ ಎರಡು ಪದ್ಯಗಳನ್ನು ಗಮನಿಸಿದರೆ ಸಾಕು—ತಾನು ಅನುಭವಿಸಿದ ಎಲ್ಲಾ ಸುಖಗಳೂ ಒಂದೇ ಬಗೆಯಿತ್ತೆಂಬುದನ್ನು ಎಷ್ಟು ಹೃದ ಯಂಗಮವಾಗಿ ಈ ವೃತ್ತದಲ್ಲಿ ಚಿತ್ರಿಸಿದ್ದಾನೆ—

ಆವಾಪಂಗನೆಯಲ್ಲಿ ಕೂಡಿದೊಡಮಾತಾಡಲ್ಲದೇಂ
ಕಂಡೆನೇ ? ।
ಆವಾವೂಟಮನುಂಡೊಡಂ ಸವಿಗಳೊಳ್ಬೇ-
ರೊಂದನೇ ನುಂಡೆನೇ ॥
ಆವಾವಾಭರಣಂಗಳಂ ತೊಡೆ ತೊವಲ್ಪೊಸ್ನಾ
ದುದೇ ? ಕಂಡು ವಿಾ ।
ಜೀವಂ ಕಾಣದು ಉಂಡುಮೇಂ ದಣಿಯದೋ ?
ರತ್ನಾಕರಾಧೀಶ್ವರಾ ॥

ಸುಖದ ಅಶಾಶ್ವತೆಯನ್ನು ಇದಕ್ಕಿಂತ ಹೆಚ್ಚು ಅನುಭವ ಪೂರ್ಣತೆಯಿಂದ ಬೋಧಿಸುವ ಕವಿ ಅತ್ಯಂತ ದುರ್ಲಭ ವೆನ್ನುವುದರಲ್ಲಿ ಸಂದೇಹವಿಲ್ಲ. ವೈರಾಗ್ಯದ ಪರಾಕಾಷ್ಠತೆ ಯನ್ನು ತಿಳಿಸಿರುವ ಈ ಪದ್ಯ ಮತ್ತೂ ಹೃದ್ಯಾವ ಬೋಧಕ—

ಪೆರರ್ಗಂ ಪೇಳ್ದೊಡೆ ನೋವರಾನೆನಗೆ ಪೇಳ್ವೇಂ
ಕಾಮಿನೀ ಮಾತ್ರದೊ ।
ಜ್ವರ ಮೆಯ್ಯೇ ಲತೆಯೆಂದು ಮಾಂಸ ಕುಚಮಂ
ಹೇಮಾಬ್ಜಮೆಂದೆಂದು ನೆ ॥
ತ್ತರನುಂಡಾ ತುಟಿಯಂ ಸುಧಾರುಚಿಯೆನುತ್ತಾಂ
ಬಿಳ್ದುದಂ ಸಾಲದ ।
ನ್ಯರನೊಯ್ದೇಂ ಕವಿಯೋ ? ವಲಂ ಕಪಿಯೋ
ನಾಂ ರತ್ನಾಕರಾಧೀಶ್ವರಾ ॥

ಇದರಲ್ಲಿ ಕವಿ ಎಷ್ಟು ಎಚ್ಚರಿಕೆ ವಹಿಸಿದ್ದಾನೆಂದರೆ ಈ ಮಾತನ್ನು ಬೇರೆಯ ಕವಿಗಳಿಗೆ ಹೇಳಿದರೆ ನೊಂದು ಕೊಳ್ಳುತ್ತಾರೆ. ಆದುದರಿಂದ ತನಗೆ ತಾನು ಹೇಳಿ ಕೊಳ್ಳುತ್ತೇನೆಂದು ಅವನ ಭಾವ. ಅಹಿಂಸಾಧರ್ಮದ ಪಾಲನೆ ಇದರಲ್ಲಿ ಪರಿಪೂರ್ಣತೆಗೊಂಡಿದೆ.

ಮೇಲಿನ ಎರಡು ಪದ್ಯಗಳೇ ಸಾಕು ಅವನ ವೃತ್ತ ಛಂದಸ್ಸಿನ ರಚನಾ ಪಾಂಡಿತ್ಯ ಪ್ರತಿಭೆಯನ್ನರಿ ಯಲು. ತಪ್ಪಲೆಯಲ್ಲಿ ಬೇಯುತ್ತಿರುವ ಅನ್ನವನ್ನು ಪರೀಕ್ಷಿಸಲು ಮೇಲಿನ ಎರಡೇ ಕಾಳುಗಳು ಸಾಲವೇ ? ಆದರೆ ಈ ವೃತ್ತರೂಪದಲ್ಲಿ ಶತಕಗಳು ಹಳೆಗನ್ನಡ ಮಿಶ್ರ ವಾದುದರಿಂದ ಸಾಮಾನ್ಯ ಅಕ್ಷರಸ್ಥರಿಗೆ ನಿಲುಕುವುದು ದುಸ್ತರವೆಂಬುದು ಆ ಮಹಾ ಕವಿಯ ಮನಸ್ಸಿಗೆ ಬಂದಿರ ಬೇಕು. ಅದರ ಪರಿಣಾಮವಾಗಿಯೇ ಕನಕದಾಸ ಪುರಂದರದಾಸರಂತೆ ಕೀರ್ತನೆಗಳನ್ನು ರಚಿಸಿ ತಾನೂ ಹಾಡುಗಾರನಾದನು.

# ಹಾಡುಗಬ್ಬಗಳ ಸೊಬಗು

ಪುರಂದರದಾಸರು ಮತ್ತು ಕನಕದಾಸರು ಹರಿಭಕ್ತರು. ರತ್ನಾಕರ ಜಿನಭಕ್ತ ಆದರ್ಶ ಜೈನತ್ಯಾಗಿ· ವರ್ಣಿಯೆಂದರೆ ಜಿನಮುನಿ. ಆತ್ಮತತ್ವಗಳನ್ನು ಹೃದಯಸ್ಥ ಮಾಡಿಕೊಂಡಿದ್ದ ಮಹಾಮಹಿಮ. "ನಾನೃಷಿಃ ಕುರುತೇ ಕಾವ್ಯಂ" ಎಂಬಂತೆ ಋಷಿ ಕಲ್ಪವುಳ್ಳವನು. ಆದುದರಿಂದಲೇ ಯಾವ ಬಗೆಯ ಕಾವ್ಯವನ್ನಾಗಲೀ ನಿರರ್ಗಳವಾಗಿ ರಚಿಸುವ ಮಹಾಶಕ್ತಿಯನ್ನು ಪಡೆದುಬಂದಿದ್ದ ಹುಟ್ಟುಕವಿ. ಭೋಗದಿಂದ ವಿಮುಖನಾಗಿ ಯೋಗಿಯಾದ ಮಹಾ ವಿಭೂತಿಪುರುಷ. ಭೋಗದ ಸಮಗ್ರಾನುಭವದಿಂದ ಯೋಗಕ್ಕೆ ಬಂದ ಅವನ ಆಚರಣೆಗಳು ನಿಷ್ಠೆಯಿಂದ ಪರಿಪೂರ್ಣಗೊಂಡಿದ್ದುವು. ಆದುದರಿಂದಲೇ ಶೃಂಗಾರಭಾವವನ್ನು ಎಷ್ಟು ಹೃದ್ಯವಾಗಿ ವರ್ಣಿಸಿದನೋ ಅದಕ್ಕೆ ಇಮ್ಮಡಿಯಾಗಿ ವೈರಾಗ್ಯಭಾವವನ್ನು ತನ್ನ ಶ್ರೀಕಂಠದಿಂದ ಚಿತ್ರಿಸಿದನು.

ರತ್ನಾಕರ ಮಹಾಕವಿ ಕನ್ನಡದಲ್ಲಿ ಹಾಡುಗಳನ್ನು ಬರೆದಿದ್ದಾನೆಂದೂ, ಸುಮಾರು ಎರಡು ಸಾವಿರ ಪದಗಳಿವೆಯೆಂದೂ, ಸಂಶೋಧನಾತ್ಮಕ ಬುದ್ಧಿಯ ವಿದ್ವಾಂಸರು ಹೇಳುತ್ತಿದ್ದುದನ್ನು ಕೇಳಿ ತಿಳಿದಿದ್ದೆ. "ಗೀತವೀತರಾಗ" ಎಂಬ ಗ್ರಂಥವನ್ನು ಸಂಶೋಧಿಸಿ ಮುಗಿದ ನಂತರ ರತ್ನಾಕರನ ಪದಗಳನ್ನು ಹುಡುಕಿ ತೆಗೆಯುವ ಪ್ರಯತ್ನ ಮಾಡಬೇಕೆಂಬ ಹಂಬಲ ನನ್ನಲ್ಲಿದ್ದಿತು. ಅಷ್ಟರಲ್ಲಿಯೇ ನನ್ನ ತಮ್ಮ ಚಿ॥ ಡಿ. ಶ್ರೀಪತಿ ನಮ್ಮ ಮನೆಯಲ್ಲಿಯೇ ಇದ್ದ ಒಂದು ತಾಡೋಲೆಯ ಪ್ರತಿಯನ್ನು ಪತ್ತೆಹಚ್ಚಿದನು. ಸುಯೋಗವಶದಿಂದ ಅದು ರತ್ನಾಕರನ ಕೀರ್ತನೆಗಳದೇ ಆಗಿದ್ದಿತು! ಆದರಲ್ಲಿ ಕೇವಲ ತೊಂಬತ್ತುನಾಲ್ಕುಹಾಡುಗಳು ಮಾತ್ರಇದ್ದುವು. ಎರಡು ಸಾವಿರಎಲ್ಲಿ? ತೊಂಬತ್ತನಾಲ್ಕು ಎಲ್ಲಿ? ತೊಂಬತ್ತನಾಲ್ಕೇ ಆದರೂ ಅಲಭ್ಯ ಲಾಭವಾಗಿದ್ದುದರಿಂದ ಅದು ಒಂದು ಮಹತ್ವದ ವಿಷಯವೇ ಆಗಿದ್ದಿತು. ನನ್ನ ತಮ್ಮನೇ ಅದನ್ನು ಪರಿಶೋಧಿಸಿ ಅಚ್ಚಿಗೆ ಅಳವಡಿಸಿದನು. ಮುಂದಿನ ಸಂಶೋಧಕರಿಗೆ ಅದು ನಾಂದಿಯಾಯಿತು. ಅದನ್ನು ಅಚ್ಚು ಹಾಕಿಸಿದುದೂ ಆಯಿತು. ಆ ಕೀರ್ತನೆಗಳಲ್ಲಿ ಕೆಲವನ್ನು ಪರಿಚಯಾರ್ಥವಾಗಿ ತಿಳಿಸುತ್ತೇನೆ.

ರತ್ನಾಕರನ ಸಂಬಂಧವಾಗಿ ಕಾರ್ಕಳದ ಭೈರರಸನ ಪುತ್ರಿಯ ವಿಚಾರವಾಗಿ ಒಂದು ದಂತ ಕಥೆ ಪ್ರಚಾರದಲ್ಲಿದೆಯೆಂದು ಹಿಂದೆಯೇ ತಿಳಿಸಿದೆನಷ್ಟೆ. ಅದಕ್ಕೆ ಆಧಾರವೋ ಎಂಬಂತೆ ಅವನು ತನ್ನ ಗುರುಗಳಾಗಿದ್ದ, ಹುಮುಚದಮಠಾಧಿಪತಿಗಳಾಗಿದ್ದ ಮಹೇಂದ್ರಕೀರ್ತಿ (ದೇವೇಂದ್ರಕೀರ್ತಿ) ಭಟ್ಟಾರಕರನ್ನು ಪ್ರಾರ್ಥಿಸುವ ಕೀರ್ತನೆ ಹೀಗಿದೆ—

ಇಂದ್ರಿಯಕ್ಕೆ ಸಿಕ್ಕಿ ನೊಂದೆನಯ್ಯ ಗುರುವೆ, ಮಾ।
ಹೇಂದ್ರಕೀರ್ತಿ ಕಾಯೋ ಕರುಣದ ತರುವೆ ॥ಪಲ್ಲವಿ॥

ಕಣ್ಣು ಸವಿಗಾಗಿ ಕಂಡಲ್ಲಿ ಹಾರಿ, ಎಳೆ,
ಪೆಣ್ಣಿಗೆ ಬಯಸಿ ಭ್ರಾಂತಿ ತಲೆಗೇರಿ,
ಉಣ್ಣದ ನೋವನುಂಡು ನಲವೇರಿ, ಸಲೆ,
ಬಣ್ಣವಳಿದನ ಕಾಯೋ ಮತಿದೋರಿ ॥ ೧ ॥

ಈ ಹಾಡಿನಲ್ಲಿ ಇನ್ನೂ ಎರಡು ಚರಣಗಳಿವೆ. ಇದರಲ್ಲಿ ಎಳೆವೆಣ್ಣಿನ ಮೋಹದಲ್ಲಿ ಬಿದ್ದು, ಅನಂತರ ಪಶ್ಚಾತ್ತಾಪಪಟ್ಟಿರುವ ಸಂಗತಿ ವ್ಯಕ್ತವಾಗುತ್ತದೆ. ಶೈಲಿ, ಪ್ರಾಸ, ತತ್ವಬೋಧನೆ ಎಲ್ಲವೂ ಒಪ್ಪವಾಗಿ, ಹೃದ್ಯವಾಗಿರುವುದನ್ನು ಗಮನಿಸಬಹುದು. ಇದರ ಕೊನೆಯ ಚರಣದಲ್ಲಿ ಅಂತ್ಯ ಪ್ರಾಸ ಸಹಿತವಾಗಿ ಗುರುಗಳನ್ನು ಬೇಡಿರುವ ರೀತಿಯಂತೂ ಶ್ಲಾಘ್ಯವಾಗಿದೆ—

ಯೋಗಾನಂದ ಉಪದೇಶ ಚಕ್ರವರ್ತಿ, ಎನ್ನ,
ಲಾಗುಮಾಡಿ ಸಲಹೋ ನಿನಗದು ಕೀರ್ತಿ,
ರಾಗದ್ವೇಷವಳಿದ ಸುಜ್ಞಾನಮೂರ್ತಿ, ದಿವ್ಯ,
ಯೋಗಿ ಮುಕ್ತಿಗಾಣೆನೋ ಮಾಹೇಂದ್ರಕೀರ್ತಿ ॥

ತಪ್ಪುಮಾಡಿ, ಮಾಡಿದ ತಪ್ಪನ್ನು ತಿದ್ದಿಕೊಳ್ಳಲು ಪಶ್ಚಾತ್ತಾಪಪಡುವ ರೀತಿ ಇದಾದರೆ, ಪುಣ್ಯ ಪಾಪ ಕರ್ಮಗಳನ್ನು ಗಳಿಸುವವನು ಆತ್ಮನೊಬ್ಬನೇ. ಅವನ ಪುಣ್ಯ ಪಾಪಾರ್ಜನೆಗಳಲ್ಲಿ ಮತ್ತಾವ ಬಂಧುಗಳೂ ಸಮಭಾಗಿಗಳಾಗರು. ಆ ವಿಚಾರವನ್ನು ಕುರಿತು ಆತನ ಹಾಡಿನ ನುಡಿ ಹೀಗಿದೆ—

ಆರಿಗಾರು ಬಹರು ಸಂಗಡ ? ಮಾರಿ ನಡೆಯಬೇಡ
ಧರ್ಮಸಾರವೊಂದೇ ನಿನಗೆ ಸುಮುಂಗಡ ॥ಪಲ್ಲವಿ॥

ಸತಿಯು ಸುತ ಸಮಸ್ತ ಮಿತ್ರರತಿಶಯ।
ದ ತಂದೆ ತಾಯಿ ವಿನೋದದ ಭಾವಮೈದುನ।

ಜತನವೆಂಬತ್ತೆ ಮಾವ ಜತೆಯೊಳುದಿಸಿದ।
ಣ್ಣತಮ್ಮರು ನೀ ಮೃತಿಯೈದಲೊಡನಿಹರೇ ? ॥೧॥

ಬರೆಹ ತೊಡೆದ ಮೇಲೆ ಕರೆದೊಡನೆ ನೀ ಪೋಗೆ।
ಭರದಿ ಬಂದಾ ಬಂಧುವರ್ಗ ಮತ್ತೆ ಕುಳಿತು।
ಇರಿಸಬೇಡ ಸುಡುಸುಡೆಂಬರು, ಸುಟ್ಟೊಡನೆ।
ಭರದಿ ಉಂಬರು. ಪಾಪಿ ಸತ್ತ ತರುಣಿ ಕೆಟ್ಟಳೆಂಬರು ॥ ೨ ॥

ಎಷ್ಟು ಬದುಕೆಷ್ಟು ಜನರ ಕಷ್ಟ ಬಂದರಿಲ್ಲ।
ಇಷ್ಟರು ಕೂಡ ಸೃಷ್ಟಿಯೊಳು ಬರುವರುಂಟೆ ?।
ಭ್ರಷ್ಟ ನಿನಗೇತಾಸೆ? ದಿಟ್ಟನಾ ಧರ್ಮವೊಂದ।
ಕಟ್ಟಿಕೋ ಹೋಗು ಮುಟ್ಟಿಸುವುದು ಮುಕ್ತಿಪುರಕೆ ॥ ೩ ॥

ಐಹಿಕ ಸುಖದ ನಶ್ವರತೆಯನ್ನು ಇದಕ್ಕಿಂತ ಇನ್ನೆಷ್ಟು ಸ್ಪಷ್ಟವಾಗಿ ಹೇಳಬೇಕು ? ಆತ್ಮತತ್ವದ ಸಮಗ್ರಸ್ವರೂಪ ವನ್ನೇ ಈ ಕೀರ್ತನೆ ಕಣ್ಣಮುಂದೆ ಬಿಂಬಿಸುತ್ತದೆ. ಇಲ್ಲಿ ಬಾಂಧವ್ಯದ ಅಶಾಶ್ವತತೆಯನ್ನು ಕಣ್ಗಟ್ಟಿಸಿದರೆ, ಧನಾಶಾಪೀಡಿತರಾದ ಧನವಂತರಿಗೆ ಆತ ಉಪದೇಶಿಸಿರುವ ಹಾಡು ಹೀಗಿದೆ—

ಆರದೆಂದಾರ್ಜಿಸಿಡುತಿಹೆ ಧನವ ಮನುಜ ?
ಆರಿಗೂ ಸ್ಥಿರವಲ್ಲ, ಯಾಕೆ ಬರಿಯಾಸೆ ? ॥ ಪಲ್ಲವಿ ॥

ದಾಯಾದ್ಯರೆಳೆಯಲುದ್ಯೋಗಿಪರು ತಸ್ಕರರು।
ನೋಯಿಸೆಳೆದೊಯ್ಯಲೆಣಿಸುತ್ತಿಹರು।
ನ್ಯಾಯವಿಲ್ಲದೆ ತೆಗೆವ ಬಗೆವ ಯೋಚಿಸುತಿಹ।
ರಾಯನಗ್ನಿಯು ಸುಟ್ಟು ಭಸ್ಮವೈದಿಪುದು ॥

ಮನುಷ್ಯನಿಗೆ ಜ್ಞಾನವು ಮೈವೆತ್ತಿ ಬರಬೇಕಾದರೆ ಉಪದೇಶ ಮಾಡುವಂತಹ ಸದ್ಗುರುವಿನ ಆವಶ್ಯಕತೆ ಬೇಕು. ಏಕೆಂದರೆ ಸತ್ಪಥದರ್ಶನ ಮಾಡುವ ಗುರು ವಿಲ್ಲದೆ ಸುಜ್ಞಾನದ ಸ್ವರೂಪ ಸಂಘಟಿಸದು. ಆದುದ ರಿಂದ ಗುರುಗಳ ಔನ್ನತ್ಯವನ್ನು ಹೇಳುವಾಗ "ಗುರು ಬ್ರಹ್ಮಾ" ಮೊದಲಾಗಿ ತ್ರಿಮೂರ್ತಿಗಳ ಸ್ವರೂಪವೇ ಎಂದು ಒಂದೆಡೆ ಸಾರಿದರೆ ಮತ್ತೊಂದೆಡೆ ಚಾರುಕೀರ್ತಿ ಪಂಡಿತಾಚಾರ್ಯರು ತಮ್ಮ ಅಪೂರ್ವ ಕೃತಿಯಾದ "ಗೀತವೀತರಾಗ"ದಲ್ಲಿ ಗುರುವಿನ ಮಹತ್ವವನ್ನು ಹೀಗೆ ಕೊಂಡಾಡಿರುವರು—

ಗುರುರ್ವಿಧಾತಾ ಗುರುವೇ ದಾತಾ।
ಗುರುಸ್ಸ್ವಬಂಧುರ್ಗುಣ ರತ್ನಸಿಂಧುಃ॥
ಗುರುರ್ವಿನೇತಾ ಗುರುರೇವ ತಾತೋ।
ಗುರುರ್ವಿಮೋಕ್ಷೋ ಹತಕರ್ಮ ಪಕ್ಷಃ॥

ಇದರಿಂದ ಗುರುಗಳ ಮಹಿಮೆ ಸಹಜವಾಗಿಯೇ ಲೋಕೋತ್ತರವಾದುದೆಂಬುದನ್ನು ಮತ್ತೆ ಹೇಳಬೇಕಾ ಗಿಲ್ಲ. ರತ್ನಾಕರನೂ ಸಹ ತನಗೆ ಮೊದಲೇ ಸರಿಯಾಗಿ ಬುದ್ಧಿ ಹೇಳುವಂತಹ ಗುರುಸಮಾನರಾದವರು ದೊರಕಿ ದ್ದರೆ ತಾನು ಕೆಡುವ ಪ್ರಸಂಗವೇ ಇರಲಿಲ್ಲವೆಂದು ಶೋಕಿ ಸಿದ್ದಾನೆ—

ತಿಳುಹಿದರಿಲ್ಲವಯ್ಯ ನನ್ನವರಾಗಿ।
ತಿಳುಹಿದರಿಂದು ತನಕ ತೊಳಲುವೆನೆ ॥ ಪಲ್ಲವಿ ॥

ಹೀನ ವಿಷಯ ಸುಖವಿಷವೆಂದು ಭಾವಿಸೋ।
ಜ್ಞಾನರಸವನೆ ಸೇವಿಸೋ।
ತಾನೆ ಕೆಡುವ ಮೈಯ ತಪಕಾಗಿ ಸಲಿಸಿ ನಿ।
ತ್ಯಾನಂದ ಪದವಿ ಪಡೆಯೆಂದು ॥ ೧ ॥

ರಾಗರೋಷವ ಬಿಡು ಕಂದ, ಕಡುಶಾಂತ।
ನಾಗಿ ಕರ್ಮವ ನೀ ಗೆಲ್ಲೆಂದ।
ಯೋಗಿ ಮಾಹೇಂದ್ರಕೀರ್ತಿಯಂತೆ ಕೃಪೆವಂತ।
ನಾಗಿ ಕರ್ಮಾರಿ ಗೆಲ್ಲೆಂದು ಸದ್ಧರ್ಮವ ॥ ೨ ॥

ರತ್ನಾಕರನು ಕಾವ್ಯಧರ್ಮದಲ್ಲಿ ಎಷ್ಟು ನುರಿತವನಾಗಿ ದ್ದನೋ, ಆತ್ಮಧರ್ಮದಲ್ಲಿ ಸಹ ಅಷ್ಟೇ ಅರಿತವನಾಗಿ ದ್ದನು. ತಾನು ತಿಳಿದ ಆತ್ಮಧರ್ಮವನ್ನು ಕಾವ್ಯಧರ್ಮ ದಲ್ಲಿ ಹೆಣೆದು ಹೇಳುವುದರಲ್ಲಿ ಅತಿ ಚತುರ. ಅವನ ಆತ್ಮಧರ್ಮ ಜೈನಧರ್ಮ. "ಸ್ವಧರ್ಮೇ ನಿಧನಂ ಶ್ರೇಯಃ" ಎಂಬ ಗೀತಾ ವಾಕ್ಯದಂತೆ ಆತ್ಮಧರ್ಮವನ್ನು ಹೋಲಿಸಿ, ಕಾವ್ಯಧರ್ಮದಲ್ಲಿ ತಂದು ಬರೆದಿರುವ ಹಾಡು ಸಹೃದಯರಂಜಕವಾಗಿದೆ—

ಶೃಂಗಾರವಾಗಾತ್ಮ ಸುಮ್ಮನೇಕೆ ಇದ್ದೆಯೈ ? ಮು।
ಕ್ತ್ಯಂಗನೆಯ ಮದುವೆ, ಶುಭಲಗ್ನ ಬಂದಿತು॥ಪಲ್ಲವಿ॥

ಚಿನ್ನವೆಂಬ ಕೆಂಪಿನ ಕಲ್ಲ ತೊಡಲವಳು ಮೆಚ್ಚಳು |
ರನ್ನ ಮೂರರ ಭೂಷಣವ ತೊಡಲೋ
ಮದುವಣಿಗ ‖ ೧ ‖

ನಿರ್ಜರೆ ಸಂವರೆಯೆಂಬ ಕುಂಡಲವ ಧರಿಸು |
ನಿರ್ಜಿತಾತ್ಮನೆಂಬ ಬೊಕ್ಕ ತಿಲಕವನಿಕ್ಕು ‖
ಊರ್ಜಿತ ಮೌನವೆಂಬ ಕಂಕಣ ಕಟ್ಟು ಸಂಗ |
ವರ್ಜಿತ ಬಾಸಿಂಗವ ಕಟ್ಟೆಲೋ ಮದುವಣಿಗ ‖ ೨ ‖

ಪರಮಧೈರ್ಯವೆಂಬ ಕಠಾರಿ ಹಿಡಿ, ರಾಗ |
ರೋಷ ಹಾವುಗೆ ಮೆಟ್ಟಿ ನಡೆ ಆತ್ಮಮಂಟಪಕೆ |
ಧೀರ ಚಿದಂಬರಪುರುಷನ ನೋಡಿ ಕರ್ಮವೆಂಬ |
ತೆರೆ ಜಾರಿತು, ಮುಕ್ತಿ ಕೈವಿಡಿ ಶೋಭನ,
ಶೋಭನ ‖ ೩ ‖

ಈ ಹಾಡಿನಲ್ಲಿ ಕವಿ ಆತ್ಮನನ್ನು ಕುರಿತು ಮುಕ್ತಿ ಕನ್ಯೆಯೊಡನೆ ಮದುವೆಯಾಗಲು ಸಿದ್ಧನಾಗೆಂದು ಹೇಳಿರುವನು. ಆ ಮದುವೆಯ ಹೆಣ್ಣಿಗೆ ರತ್ನಾಭರಣಗಳು ಬೇಕಿಲ್ಲ. ಸಮ್ಯಗ್ದರ್ಶನ ಜ್ಞಾನಚಾರಿತ್ರಗಳೆಂಬ ಆಭರಣಗಳೇ ಬೇಕು. ನಿರ್ಜರೆ ಮತ್ತು ಸಂವರೆಗಳೆಂಬ ಕುಂಡಲಗಳನ್ನು ಧರಿಸಬೇಕು. ಮೌನವೆಂಬ ಕಂಕಣಧಾರಣೆಯನ್ನು ಮಾಡಬೇಕು. ವಿಷಯ ಸುಖ ವಿಮುಖತೆಯೆಂಬ ಬಾಸಿಂಗವನ್ನು ಕಟ್ಟಬೇಕು. ಇತ್ಯಾದಿ ಇತ್ಯಾದಿ. ಈ ಹಾಡಿನಲ್ಲಿ ಬರುವ ಪದಗಳು ಒಂದೊಂದೂ ಜೈನಧರ್ಮದ ತತ್ವವನ್ನು ಬೋಧಿಸುತ್ತವೆ. ಕವಿಯ ಆತ್ಮಜ್ಞಾನ ಎಷ್ಟು ಉತ್ಕೃಷ್ಟವಾಗಿತ್ತೆಂಬುದಕ್ಕೆ ಇದಕ್ಕಿಂತ ನಿದರ್ಶನ ಬೇಕೇ ?

ಮನುಷ್ಯನ ದೇಹವೇ ಒಂದು ಹಣತೆ ಅದರಲ್ಲಿನ ಚೈತನ್ಯಚಿಹ್ನೆಯಾದ ಆತ್ಮನೇ ದಿವ್ಯಜ್ಯೋತಿ ಅದನ್ನು ಆರಿಸಲು ಅನೇಕ ಸಾಧನಗಳಿವೆ. ಬಿರುಗಾಳಿ, ಮೋಡ, ಪತಂಗಗಳು ಮೊದಲಾದುವು ಆ ದೀಪವನ್ನು ಕೆಡಿಸಲು ಬರುತ್ತವೆ. ಆದರೆ ಆ ದೀಪವನ್ನು ಅವುಗಳ ಬಾಧೆಗಳಿಗೆ ಒಳಪಡದಂತೆ ರಕ್ಷಿಸಿ ಸಿದ್ಧಾಪುರಕ್ಕೆ ಮುಟ್ಟಿಸಬೇಕು. ಸಿದ್ಧಾಪುರವೆಂದರೆ ಸಿದ್ಧಪರಮೇಷ್ಠಿಗಳ ಆವಾಸಸ್ಥಾನ. ಅಂದರೆ ಪರಮಶಾಶ್ವತವಾದ ಮೋಕ್ಷಸ್ಥಾನ. ಅದನ್ನು ಪ್ರವೇಶಿಸಲೋಸುಗವೇ ಸಕಲ ಧರ್ಮಗಳೂ ಪಥನಿರ್ದೇಶನ ಮಾಡುತ್ತಿವೆ. ಸಕಲ ಧಾರ್ಮಿಕರೂ ಹಾತೊರೆಯುತ್ತಿದ್ದಾರೆ. ಇರುವ ಕಷ್ಟವೆಂದರೆ ಆತ್ಮಜ್ಯೋತಿಯನ್ನು ಆರಿಸದಂತೆ ಆ ಸಿದ್ಧಾಪುರಕ್ಕೆ ಸೇರಿಸುವುದೇ ಸಾಹಸ. ಅದನ್ನು ಕವಿಯ ಮಾತುಗಳಲ್ಲೇ ಕೇಳಿರಿ—

ದೀಪ ಜತನವಯ್ಯ, ಪರಂಜ್ಯೋತಿ |
ರೂಪು ಜತನವಯ್ಯ ‖ ಪಲ್ಲವಿ ‖

ಭಾಪುರೆ ತೆರವುಗಾಣಿಸದು ಸಿ |
ದ್ಧಾಪುರದಲಿ ಹೋಗಿ ಸೇರಬೇಕೆಂದೆ ‖ ೧ ‖

ಕೀಳುವ ಕಾರ್ಮೋಡ ಎಂದೆಂಬ ತೆಂಕಣ |
ಗಾಳಿ ಬಂದಾಗ ಜತನವಾಗಿ ಹಿಡಿದಿರಬೇಕು ‖ ೨ ‖

ಹಣತೆ ಆರಿ ಬತ್ತಿ ಬತ್ತಿ ಬಯಲಾದೀ |
ಕ್ಷಣ ನನ್ನ ಸಮುದ್ರಾಧೀಶನ ಕೂಡುವನಕ ‖ ೩ ‖

ಜ್ಞಾನಸಿಧಿ ಮಾತ್ರವೇ ಆಗಿರಲಿಲ್ಲ ರತ್ನಾಕರ. ಭಕ್ತಿಭಾವದ ಗಣಿಯೂ ಆಗಿದ್ದನು. ಜ್ಞಾನ-ಭಕ್ತಿಗಳ ಅವಿನಾಭಾವೀ ಸಂಗಮದಿಂದ ಸಂಪೂರ್ಣನಾಗಿದ್ದನು. ತನ್ನ ಆರಾಧ್ಯದೇವನಾದ, ವೀತರಾಗನಾದ, ಸಕಲ ಕರ್ಮ ವಿಮುಕ್ತನಾದ ಜಿನನಾಥನಲ್ಲಿ ಅವನಿಗೆ ಅಸೀಮ ಭಕ್ತಿ. ಅವನ ಸರ್ವಸ್ವವೂ ರಾಗದ್ವೇಷ ನಿರ್ಮುಕ್ತನಾಗಿದ್ದ ಜಿನದೇವನೇ ಆಗಿದ್ದನು. ಆತನನ್ನು ಸ್ತುತಿಸುವಾಗ ಅವನ ಆನಂದಕ್ಕೆ ಪಾರವೇ ಇರಲಿಲ್ಲ. ಅವನು ರಚಿಸಿ ಹಾಡಿರುವ ಜಿನಸ್ತುತಿಯನ್ನು ಕೇಳದಿದ್ದರೆ ನಮ್ಮ ವಿಚಾರವಿಮರ್ಶೆಯು ಅಪೂರ್ಣವಾದೀತು !

ಜಿನರಾಜ ನೀನೆ ಜಯಶೀಲನೆಂಬುದಕೆ |
ಜನನಾದಿ ಪದಿನೆಂಟ ಜಯಸಿದುದೆ ಸಾಕ್ಷಿ ‖ ಪಲ್ಲವಿ ‖

ಧರೆಗೆ ನಿರ್ಭಯ ದಯಾಪರನು ನೀನೆಂಬುದಕೆ |
ಕರದೊಳಾಯುಧವಿಲ್ಲದಿರುವುದೆ ಸಾಕ್ಷಿ |
ನರಸುರೋರಗ ರಾಜರೊಡೆಯ ನೀನೆಂಬುದಕೆ |
ಶಿರದ ಮೇಲಿಹ ಮೂರು ಸತ್ತಿಗೆಯೆ ಸಾಕ್ಷಿ ‖ ೧ ‖

ಪೊಡವಿಗನುಪಮದಮಲ ಮೂರ್ತಿ ನೀನೆಂಬುದಕೆ |
ಒಡವೆ ವಸ್ತ್ರಗಳಿಲ್ಲದಿರುವುದೆ ಸಾಕ್ಷಿ |
ಸಡಗರದೊಳನಂತಸುಖ ಸಿನ್ಧೊಳುಂಟೆಂಬುದಕೆ |
ಮಡದಿಯರನಗಲಿಹ ಮಹಿಮೆಯೇ ಸಾಕ್ಷಿ ‖ ೨ ‖

ಆದೀಶ ನೀನಲ್ಲದಿನ್ನಿಲ್ಲವೆನಗೆಂಬುದಕೆ ।
ಈ ಧರೆಗೆ ಪಶ್ಚಿಮಾಂಬುಧಿಯೆ ಸಾಕ್ಷಿ ॥
ಈ ದೇಹವಿಡಿದಿರ್ಪ ಆಸನ್ನಭವ್ಯರಿಗೆ ।
ನೀ ದೇವನೆಂಬುದಕೆ ನಿಜರೂಪೆ ಸಾಕ್ಷಿ ॥ ೩ ॥

ಹೀಗೆ ರತ್ನಾಕರನ ಕೀರ್ತನೆಗಳಲ್ಲಿ ಜಿನತತ್ವ, ಜಿನ ಸ್ತುತಿಗಳು ಮನೋಹರವಾಗಿ. ಭಕ್ತಿಭಾವ ಪುಂಜವಾಗಿ ವರ್ಣಿತವಾಗಿವೆ ಈಗ ಸಿಕ್ಕಿರುವ ತೊಂಬತ್ತುನಾಲ್ಕು ಹಾಡುಗಳಲ್ಲಿ ಪ್ರತಿಯೊಂದೂ ಹೃದ್ಯಾವಬೋಧಕ ವಾಗಿದೆ. ಅವುಗಳಲ್ಲಿ ಬರುವ ನೀತಿಗಳು ಸರ್ವಧರ್ಮೀ ಯರಿಗೂ ಅವಶ್ಯಕವಾಗಿವೆ. ಜಾತಿಗಿಂತಲೂ ನೀತಿಯೇ ಮುಖ್ಯವಷ್ಟೆ! ಸಮಸ್ತ ಜನಾಂಗಕ್ಕೂ, ವರ್ಣಕ್ಕೂ ನೀತಿ ಅತ್ಯವಶ್ಯಕವಾಗಿ ಬೇಕಲೇ ಬೇಕು. ನೀತಿ ಬೋಧಕಗಳಾದ ಕೆಲವು ಹಾಡುಗಳ ಕೆಲವು ಸಾಲು ಗಳನ್ನು ಸಂಕ್ಷಿಪ್ತವಾಗಿ ಗಮನಿಸೋಣ—

ಪ್ರಾಯದಿ ಮೋಹಿಸುವ ತನ್ನಯ ಕಾಯ
ಮುಪ್ಪಾಗೆ ।
ಹೇಯಮೋರುತದೆ, ಮುನ್ನಿನ ಸೊಬಗು
ಮಾಯವಾಗುತದೆ ॥
ತಲೆ ಕೈಕಾಲು ನಡುಗಿ ತೂಗುತವೆ ನಿಲುವೆಡೆ
ಬಾಗುತದೆ ।
ಆ ಶ್ರದ್ಧರೂಪಳಿದು ನಾಳೆ ಗೇಣುದ್ದ ಬಾಳುತದೆ ॥

○ ○ ○

ಇಂದಾದೆಯೋ ನಿನ್ನೆ ಮೊನ್ನೆಯಾದೆಯೋ ? ನೀ ।
ಹಿಂದಾದ ಯುಗಕೆ ಗಡಿಯಿಲ್ಲ ।
ಅಂದಿಂದ ಹೊತ್ತ ಮೈ ಸತಿಸುತರು ಸಿರಿ ಕನಸಿ ।
ನಂದದಿ ಮಾಯವಾದುದರಿಯ ॥

○ ○ ○

ಸಂಜೀವನ ವನವ ಕಂಡ ಮೇಲಾ ।
ಗಂಜಿಗಾಸೆ ಮಾಡುವರೇನಣ್ಣ ?
ರಂಜಿಸುವ ಪರಮಾತ್ಮನ ಕಂಡ ಮೇಲೀ ।
ಗುಂಜಿನ ಮೈಸುಖದಾಸೆಯೇಕಣ್ಣ ?

○ ○ ○

ತನ್ನ ತಾನರಿದವರಿಂದ ಮತಿವಂತರುಂಟೆ ?
ರನ್ನ ಮೂರುಳ್ಳವರಿಂದ ಸಿರಿವಂತರುಂಟೆ ?
ಹೊನ್ನು ಹೆಣ್ಣು ಮಣ್ಣು ಬಿಟ್ಟು ಸಿಂದ
ಹಿರಿಯನುಂಟೆ ?
ಅನ್ನದಾನದಿಂದ ಹೆಚ್ಚಿನ ದಾನವುಂಟೆ ?

○ ○ ○

ಸತ್ಯ ಸದಾಚಾರ ಸದ್ಧರ್ಮವೆ ಶರಣೆನುವ ।
ಉತ್ತಮ ಜಿನಕುಲದೊಳು ಹುಟ್ಟಿ ।
ನಿತ್ಯನಿರಂಜನ ಸಿದ್ಧನೆ ಗತಿಯೆಂದೆನುವ ।
ಚಿತ್ತವಲ್ಲದೆ ಪರಭಾವವಿಲ್ಲ ॥

○ ○ ○

ಹೊನ್ನು ಹೆಣ್ಣು ಮಣ್ಣು ನಿನ್ನನೆ ವಂಚಿಸಿ
ಹೋಗುವುದೆಚ್ಚರಿಕೆ ।
ಚನ್ನಾಗಿ ಗಳಿಸಿ ನಾ ಬದುಕಿದೆನೆಂದೆಂಬ ಚೇಷ್ಟೆ
ಬೇಡೆಚ್ಚರಿಕೆ ॥
ಮುನ್ನ ಮಾಡಿದ ಪುಣ್ಯಫಲದಿಂದ ಬಂದಿತು
ಬೆರೆಯದಿರೆಚ್ಚರಿಕೆ ।
ಬೆನ್ನನೊದೆವ ಯಮದೂತರು ಬರುವರು ಮುಂದೆ
ನೀನೆಚ್ಚರಿಕೆ ॥

○ ○ ○

ಊದಿ ಸುಟ್ಟಾಡುವ ಕಾರಕರೆಲ್ಲ ರಸ ।
ವಾದಿಯಂತ ಪರಂಜಿಯ ಮಾಡುವರೆ ?
ಓದಿದವರೆಲ್ಲ ತಮ್ಮಾತ್ಮನ ಕಾಣ್ಬರೇ ?
ಭೇದ ವಿಜ್ಞಾನಿಯೊಬ್ಬ ಕಾಣ್ಬನೈ ॥

○ ○ ○

ತಮಗಾತ್ಮಧ್ಯಾನವು ಬಾರದು ಅನು ।
ಭವದ ಧ್ಯಾನಿಯ ಕಂಡು ಜರೆವರು ।
ಭವಿಗಳ ನಿಜಗುಣವಿದು ನಂಬು ನೀ ।
ನವರ ಲೆಕ್ಕಿಸದೆ ನಿನ್ನ ನೀ ನೋಡು ॥

○ ○ ○

ಯಮ ನಿಯಮ ವ್ರತ ಶಾಂತಿಷ್ಟಾ ನಿಷ್ಠದಿ ।
ಸಮತೆಯನಾಂತು ಧರ್ಮಧ್ಯಾನದ ।
ಕ್ರಮವಿಡಿದ ಪರಾಜಿತೇಶನ ಕಾಣದ ಮೂರ್ಖತಿ ।
ಖಾಮಣಿ ಇದ್ದೇನು ? ಬದುಕಿದ್ದೇನು ?

○ ○ ○

ಕಟ್ಟಿದಾಯುಷ್ಯ ಕೈಯೊಳಾಂತ ನೀರಂತೆ
ಸೋರುತಿದೆ ।
ಕೆಟ್ಟಮನ ವಿಷಯವೆಂಬ ವಿಷವನ್ನುಣ್ಣುತಿದೆ ।
ಕುಟ್ಟಿಗೊಂಡ ಮರದಂತೆ ಮೈ ಸಡಿಲುತಿದೆ,
ಬೇನೆಯ ।
ಬೆಟ್ಟದ ಮೇಲೊರಗಿ ಮೈಮರೆವರೇನಾತ್ಮ ? ॥

o o o

ಹೆತ್ತ ಮಾತಾಪಿತರ ಮಾತ ಕೇಳದ ಪುತ್ರನೇಕೋ ?
ತನ್ನ ।
ಚಿತ್ತಪಲ್ಲಟದಂತೆ ತಿರುಗುವ ಸತಿಯ
ಸಂಗವೇಕೋ ? ॥
ಉತ್ತಮ ಗುರುವ ನಿಂದಿಸಿ ಮಾತನಾಡುವ
ಶಿಷ್ಯನೇಕೋ ? ।
ಶಕ್ತಿಹೀನನಾಗಿ ಸರ್ವಜನರ ಕೂಡೆ ಕ್ರೋಧ
ವೇಕೋ ? ॥

o o o

ಅರಿಯದವರಿಗೆ ದೇವ ಅಲ್ಲಲ್ಲಿ ಹೊರಗಿಹನು ।
ಅರಿತಮೇಲಾ ದೇವ ಹೊರಗಿಲ್ಲೊಳಗಿಹನು ॥
ಅರಿವುದು ! ಕಾಂಬುದು ! ಸುಪ್ರಭೆ ತಾನಾಗಿ ।
ಮೆರೆವ ಚಿದಂಬರ ಪುರುಷನ ನೋಡುವೆನೀಕ್ಷಣದಿ ॥

ಹೀಗೆ ನಿದರ್ಶನಗಳನ್ನು ನೀಡುತ್ತಾ ಹೋದರೆ ರತ್ನಾಕರನ ವಾಣಿಯು ಸೌಷ್ಠವವು ಎಲ್ಲದರಲ್ಲೂ ನೈತಿಕ ಸುಗಂಧದಿಂದ ಪರಿಮಳಿಸುತ್ತಲೇ ಇರುತ್ತದೆ. ಯಾವುದನ್ನು ಆರಿಸುವುದು ? ಯಾವುದನ್ನು ಬಿಡುವುದೆಂಬುದೇ ಮಹಾ ಸಮಸ್ಯೆಯಾಗುತ್ತದೆ. ಆದುದರಿಂದ ಭರತೇಶ ವೈಭವಥ ಕೃತಿಯ ವಿಚಾರದಲ್ಲಿ ಕನ್ನಡಿಗರು ಮಾತ್ರವೇ ಅಲ್ಲ, ತೆಲುಗರು, ತುಳುವರು ಎಲ್ಲರೂ ಹೊಗಳಿರುವ—

ಅಯ್ಯಯ್ಯ ! ಚೆನ್ನಾದುದೆನೆ ಕನ್ನಡಿಗರು ।
ರಯ್ಯಾ ಮಿಂಚಿದಿ ಎನೆ ತೆಲುಗಾ ॥
ಅಯ್ಯಯ್ಯ ! ಎಂಚ ಪೊರ್ಲಾಂಡೆಂದು ತುಳುವರು ।
ಮೈಯುಬ್ಬಿ ಕೇಳಬೇಕಣ್ಣ ॥

ಎಂದು ಹೇಳಿರುವ ಪ್ರಶಂಸಾ ಪದ್ಯ ಆತನ ಕೀರ್ತನೆಗಳಿಗೂ ಅನ್ವಯಿಸುತ್ತದೆಯೆಂದರೆ ಯಾವ ಅತಿಶಯವೂ ಇಲ್ಲ. ಇದುವರೆಗೆ ಕತ್ತಲೆಯಲ್ಲಿ ಬಿದ್ದಿದ್ದ ಈ ಕೀರ್ತನೆಗಳಿಂದ ದಾಸಸಾಹಿತ್ಯದ ಸಂಪತ್ತು ಮತ್ತಷ್ಟು ವೈಭವಗೊಂಡಿತು ! ಕೀರ್ತನಕಾರರಿಗೂ, ಸಂಗೀತಗಾರರಿಗೂ, ಮತ್ತಷ್ಟು ಹಾಡುಗಬ್ಬಗಳ ರಸದೌತಣ ಲಭಿಸಿತು!

## ರತ್ನಾಕರ ವಿರಚಿತವೆಂಬುದು ಹೇಗೆ ?

ಈ ಪ್ರಶ್ನೆ ಸಂಶೋಧಕರಲ್ಲಿ ಮೂಡುವುದು ಸಹಜವಾಗಿದೆ. ಇದರ ಉತ್ತರಕ್ಕೂ ಹೆಚ್ಚು ಅನ್ವೇಷಿಸಬೇಕಾಗಿಲ್ಲ. ರತ್ನಾಕರನ ಭರತೇಶ ವೈಭವದಲ್ಲಿ ಬರತಕ್ಕ ನಿರಂಜನಸ್ತುತಿ, ರತ್ನಾಕರಶತಕ ಮತ್ತು ಅಪರಾಜಿತ ಶತಕಗಳಲ್ಲಿ "ನಿರಂಜನಸಿದ್ಧ", "ಅಪರಾಜಿತೇಶ್ವರ", "ಶೃಂಗಾರಯೋಗಿ", "ಶೃಂಗಾರ ಕಲಹಂಸ" ಮತ್ತು ಚಿದಂಬರ ಪುರುಷ ಮೊದಲಾದ ಜಿನೇಶ್ವರನನ್ನು ಕುರಿತು ಹೇಳುವ ಗೌರವಸೂಚಕವಾದ ಪದಗಳು ಪದೇ ಪದೇ ಬರುತ್ತವೆ. ಈ ಕೀರ್ತನೆಗಳಲ್ಲಿ ಪ್ರತಿಯೊಂದು ಕೀರ್ತನೆಯಲ್ಲಿಯೂ, ಇವುಗಳಲ್ಲಿ ಒಂದಲ್ಲ ಒಂದು ಪದವು ಪರ್ಯಾಯವಾಗಿ ಬಂದೇ ಬರುತ್ತವೆ. ಅಲ್ಲದೆ ರತ್ನಾಕರ ಕವಿಯ ಗುರುಗಳಾಗಿದ್ದ ಮಹೇಂದ್ರಕೀರ್ತಿ ಭಟ್ಟಾರಕರ ಹೆಸರೂ ಬಂದಿವೆ. ಈ ಕಾರಣಗಳಿಂದ ರತ್ನಾಕರ ಮಹಾಕವಿಯೇ ಇವುಗಳನ್ನು ರಚಿಸಿದ್ದಾನೆಂಬುದರಲ್ಲಿ ಯಾವ ಸಂದೇಹವೂ ಇಲ್ಲ.

ಕೊನೆಯದಾಗಿ ಕಾವ್ಯಗುಣಜ್ಞರಾದ ಸಹೃದಯರೂ, ಸಂಗೀತ ರಸಾಸ್ವಾದನ ಪಟುಗಳೂ ಆದ ಕನ್ನಡಿಗರು ಅಭಿಮಾನದಿಂದ ಈ ರತ್ನಾಕರನ ಕೃತಿಗಳನ್ನು ಹಾರ್ದಿಕದಿಂದ ಸ್ವಾಗತಿಸುವರೆಂದು ನಂಬಿದ್ದೇನೆ.

# ನಲಿಯೋಣ ಬಾ!

ಲೇಖಕರು :

ವಿ.ವೆ. ಶೊರ್ಕೆ

ನಲಿಯೋಣ ಬಾ, ಬಾ! ಕುಣಿಯೋಣ ಬಾ!
ನಲಿನಲಿದು ಕುಣಿಯೋಣ ಬಾ, ಬಾ!
ಕುಣಿ ಕುಣಿದು ನಲಿಯೋಣ ಬಾ!

೧

ಮಕರಂದ ನೀನಾಗಿ, ಮರಿದುಂಬಿ ನಾನಾಗಿ
ಬಗೆದುಂಬಿ ಉಬ್ಬುಬ್ಬಿ
ನಲಿಯೋಣ ಬಾ, ಬಾ!!

೨

ಚಿಗುರೆಲೆಯು ನೀನಾಗಿ, ಕೋಗಿಲೆಯು ನಾನಾಗಿ
ಕೊಳಲಿನ ಕೊರಳಾಗಿ
ನಲಿಯೋಣ ಬಾ, ಬಾ!!

೩

ಇನಿವಣ್ಣು ನೀನಾಗಿ, ಮರಿಗಿಣಿಯು ನಾನಾಗಿ
ಸಂಪಾಗಿ, ಸೊಂಪಾಗಿ
ನಲಿಯೋಣ ಬಾ, ಬಾ!!

೪

ಮಲ್ಲಿಗೆಯು ನೀನಾಗಿ, ಮೆಲ್ಲೆಲರು ನಾನಾಗಿ
ಕಂಪಾಗಿ ತಂಪಾಗಿ
ನಲಿಯೋಣ ಬಾ, ಬಾ!!

೫

ಹೆಜ್ಜೇನು ನೀನಾಗಿ, ಮರಿಜೇನು ನಾನಾಗಿ
ನಿನ್ನೊಳಗೆ ನಾನಾಗಿ
ನನ್ನೊಳಗೆ ನೀನಾಗಿ
ನಲಿಯೋಣ ಬಾ, ಬಾ!!

೬

ಮುಂಬೆಳಗು ನೀನಾಗಿ, ಮುಂಗೋಳಿ ನಾನಾಗಿ
ಬೆಳಕಿನ ಕಣ್ಣಾಗಿ ಒಸಗೆಯ ಆಳಾಗಿ
ನಲಿಯೋಣ ಬಾ, ಬಾ!!

೭

ತಿಳಿಜೊನ್ನ ನೀನಾಗಿ, ತಿಳಿಬಾನು ನಾನಾಗಿ
ತಿಳಿಯಾದ ಬಗೆಯಾಗಿ
ನಲಿಯೋಣ ಬಾ, ಬಾ!!

೮

ಬಿಸಿಲ್ಮಳೆಯು ನೀನಾಗಿ, ಮಳೆವಿಲ್ಲು ನಾನಾಗಿ
ಕಂಗೊಳಿಪ ರಂಗಾಗಿ
ನಲಿಯೋಣ ಬಾ, ಬಾ!!

೯

ಮಾನಸವು ನೀನಾಗಿ, ಮರಿಯಂಚೆ ನಾನಾಗಿ
ರಸವಾಗಿ ಸೊಗಸಾಗಿ
ನಲಿಯೋಣ ಬಾ, ಬಾ!!

# ಪ್ರೇಮದ ತಂಗಿ

ಕಥೆಗಾರರು :

-ಪಿ. ವಿಜಯಕುಮಾರ್

ಕಣಬರಗಿ

1

ಬಂದ ಪತ್ರಗಳ ಮೇಲೆ ಸಹಿ ಹಾಕುತ್ತಿದ್ದಂತೆ-ಎದುರಿಗೆ ತನ್ನ ಹೆಸರಿನಲ್ಲಿ ಬಿದ್ದಿರುವ ಟೆಲಿಗ್ರಾಮ್‌ನ್ನೂ ಒಡೆದು ನೋಡಿದ ಸುಭಾಷ್ " (Sister Serious ! Start immediately)" ಎಂಬುದನ್ನೋದಿ ಕಳವಳಗೊಂಡ.

ಆಫೀಸರ್‌ರ ಬಳಿ ಬಂದು, ರಜೆ ಪಡೆದುಕೊಂಡು, ಅಂದೇ ಸಂಜೆಯ ಗಾಡಿಯನ್ನೇರಿದ.

ಬೆಂಗಳೂರು-ಬೆಳಗಾವಿ ; ಒಂದೊಂದು ಮೈಲಿಗಳೂ ಒಂದೊಂದು ವರ್ಷದ ವೇಗದಷ್ಟು ರೈಲು ಸಾವಕಾಶ ಚಲಿಸುತ್ತಿರುವಂತೆ ಭಾಸವಾಯಿತವನಿಗೆ.

ಮನೆಗೆ ಬಂದು ನೋಡಿದ ! ಕೋಪ ಮಾಡಿಕೊಂಡು ಗೋಡೆಗೆ ಕುಳಿತವರಂತೆ ಎದೆಯುಬ್ಬಿಸಿಕೊಂಡು ಕುಳಿತಿದ್ದಳು ಸಾವಿತ್ರಿ. ಪಕ್ಕದಲ್ಲಿಯೇ ಮತ್ತೊಬ್ಬ ಕಿರಿಯಣ್ಣ ಮುಳು ಮುಳು ಮುಳು ಅಳುತ್ತ, ಕಣ್ಣೊರೆಸಿಕೊಳ್ಳುತ್ತಲಿದ್ದ.

ಸುಭಾಷ್‌ನನ್ನು ನೋಡಿ, ನೆರೆದವರೆಲ್ಲರೂ ದುಃಖ ಇಮ್ಮಡಿಸಿತು. ಸಾಕು ತಂದೆ ಅವನ ಹತ್ತಿರ ಬಂದು, " ಅಣ್ಣಾ, ಅಣ್ಣಾ ಎನ್ನುತ್ತಲೇ ಕೊನೆಯುಸಿರು ಹಾಕಿದಳಪ್ಪ ! ಅಂತೂ ಅವಳು ಪುಣ್ಯಮಾಡಿ ಕೈ ಹಿಡಿದ ಗಂಡ ಕಾಪಾಡದಿದ್ದರೂ—ಕೊನೆಗೆ ಗಂಗಾಜಲವನ್ನಾದರೂ ಬಿಟ್ಟ ! ಇನ್ನು ನೀನೇನು ಮಾಡುತ್ತಿಯೋಮಾಡಪ್ಪ ! ! ! " ಎಂದು ಹೇಳಿದರು.

ಸಾವಿತ್ರಿಯ ಕುಂಕುಮ ಮೊಗ ನೋಡಿ ಅಳು ಬಂದಿತಾದರೂ-ಅಳಲಿಲ್ಲ. ಕೆಲವೇ ದಿನಗಳ ಹಿಂದೆ ಅವಳಿಗೊಂದು ಸೀರೆಗಾಗಿ ಹಣ ಕಳುಹಿಸಿಕೊಡಲು ಬರೆದಿದ್ದಳು. ಅದೇ ಸೀರೆಯನ್ನೇ ಉಡಿಸಿದ ತನ್ನ ತಂಗಿ ಸಂತೋಷಳಾದಳೆಂದು ಭಾವಿಸಿ-ತಾನೂ ನಕ್ಕ.

ಗಹಗಹಿಸಿ ನಕ್ಕ ಆ ನಗೆ ಎಲ್ಲರನ್ನೂ ಮಂಕುಗೊಳಿಸಿತು. ವಿಶೇಷವಾಗಿ ಅವನ ಸೋದರ ರಾಮಚಂದ್ರನ ಹೃದಯವನ್ನೇ ಒಡೆದು ಹೋಯಿತು.

" ಅಣ್ಣಾ ಸಮಾಧಾನತಾಳು ! " ರಾಮಚಂದ್ರ ಬಂದು ಹೇಳಿದ.

" ಸಮಾಧಾನ ? ನೀನು ರಾಮಚಂದ್ರ, ನನಗೆ ಸಮಾಧಾನ ಹೇಳಲು ಬಂದಿರುವೆಯಾ ? ಯಾವಳನ್ನು " ತಂಗಿ " ಎಂದು ಗುರುತಿಸಲು ಕೂಡ ನಿನ್ನಿಂದ ಆಗಲಿಲ್ಲವೋ—ಆ ತಂಗಿಯ "ಅಣ್ಣ" ನಿಗೆ ಸಮಾಧಾನ ಹಕ್ಕು ನಿನಗಿದೆಯೇ ? ಥೂ ನಾಯಿ, ತೊಲಗಾಚೆ ! " ಎಂದು ಕಪಾಳಿಗೆರಡೇಟು ಬಿಗಿದ.

ಮಣ್ಣಿನಲ್ಲಿ ಮುಚ್ಚಿಬಿಟ್ಟರು ಸಾವಿತ್ರಿಯ ದೇಹವನ್ನು—ಸುಭಾಷ್‌ನಿಗೆ ಎಂದೆಂದೂ, ಕಾಣದಂತೆ !

ಕೊನೆಯ ಮಣ್ಣನ್ನು ಮುಷ್ಟಿಯಲ್ಲಿ ತುಂಬಿಕೊಂಡು ಸುಭಾಷ್ ಹೇಳಿದ : " ತಂಗೀ, ನಿನಗೆ ಅನ್ನವನ್ನು ಕೊಡಲಿಲ್ಲ ನಾನು-ಮಣ್ಣನು ಮಾತ್ರ ಹಾಕುತ್ತಿದ್ದೇನೆ ! " ಎಂದು.

## 2

ರಾತ್ರಿ ಕಳೆದು-ಬೆಳಗಾಯಿತು. ಅರುಣೋದಯದ ಕಿರಣಗಳು ಹಾಸಿದ ಹಾಸಿಗೆಯ ಮೇಲೆ ಹಾಗೆಯೇ ಬಿದಿದ್ದವು. ಕಣ್ಣುಜ್ಜಿಕೊಳ್ಳುತ್ತ ಎದ್ದ ಸು ಭಾ ಷ್ "ತಂಗೀ, ಸಾವೂ" ಎಂದು ಕರೆದ.

ಪ್ರತ್ಯುತ್ತರ ಬಾರದೇ ಹೋಯಿತು.

"ಏಳಕ್ಕ, ನೋಡು ಅಲ್ಲಿ ರವಿರಾಜ, ನಿನಗಾಗಿ ಮೇಲೇರಿ ಬರುತಿದ್ದಾನೆ" ಎಂದು ಪ್ರೀತಿ ವಚನಗಳನ್ನು ಹೇಳಿದ.

ಆದರೂ ಮೌನವಾವರಿಸಿತ್ತು.

"ಏಳೋದಿಲ್ವೆ? ಏಳೋದಿಲ್ವೇನಕ್ಕಾ?" ಎನ್ನುತ್ತ ಹಾಸಿಗೆಯ ಬಳಿಯಲ್ಲೇ ಕುಳಿತ.

ಮಿಸುಕಾಡದೇ ಇದ್ದಿತು ಹಾಸಿಗೆ.

"ಹುಲಿ ಎದ್ದಿತು-ನರಿ ಎದ್ದಿತು; ನರಿ ಎದ್ದೀತು; ಹುಲಿ ಎದ್ದಿತು" ಎಂದು ಹಾಸಿಗೆಯನ್ನು ಅಗಲಾಡಿಸಿದ

"ಅಣ್ಣಾ" ಎಂಬ ಚೀರುದನಿ ಕೇಳಬಂದಿತವನಿಗೆ.

"ಅಯ್ಯೋ, ನೀನು ರಾಮುಚಂದ್ರ? ಎಂದು ಹೃದಯದಳಲನ್ನು ತಡೆದುಕೊಳ್ಳುತ್ತ, ಅ ಡಿ ಗೆ ಮ ಒಲೆಯ ಬಳಿ ಬಂದು ಕುಳಿತ.

ಹೌದು; ದಿನ ನಿತ್ಯವೂ ಅವನು ಕುಳಿತುಕೊಳ್ಳುತ್ತಿರುವ ಸ್ಥಳವದು. ಸಹೋದರಿಯನ್ನು ಆದರದಿಂದ ಎಬ್ಬಿಸಿ, ಅವಳೊಂದಿಗೆ ಹರಟೆಯಾಡುತ್ತ, ಬಗೆ-ಬಗೆಯ ತಿಂಡಿ ಕಾಫಿಗಳನ್ನು ಸೇವಿಸುತ್ತ ವಿನೋದದಲ್ಲಿ ಕಾಲ ಕಳೆಯುವ ಸಮಯವದು.

"ನಾಳೆ ಅತ್ತಿಗೆ ಬಂದಾಗ ಹ್ಯಾಂಗೋ ಅಣ್ಣಾ?" ಎಂದು ಕೇಳುತ್ತಿದ್ದಳವಳು.

"ನೀನು ಗಂಡನ ಮನ್ಯಾಗೆ ಹ್ಯಾಂಗ ಹೇಳು?" ಎಂದು ಅವಳಗಲ್ಲ ಹಿಂಡಿ ಕೇಳುತ್ತಿದ್ದನವ.

"ನನ್ನ ಗಂಡನ ಮನೆಗೆ ಬಂದರೆ ನಾನೇನ ಕಡಿಮಿ ಮಾಡಾಕಿಲ್ಲ. ಅಂದರೆ ನೀ ಮಾತ್ರ ಅತ್ತಿಗೆನ್ನ ಕರೆತಂದ -ನನ್ನ ಎಲ್ಲಿ ಮರೆತ ಬಿಡ್ತಿಯೋ ಅಂತೀನಿ? ಎಂದು ಕೊಂಡ ವೇದನೆಯಿಂದಲೇ ಹೇಳುತ್ತಿದ್ದಳವಳು.

"ನಾನೇನು ನಿನ್ನ ಸಣ್ಣ ಅಣ್ಣ ರಾಮುಚಂದ್ರ ಅಲ್ಲ ತಗೋ ಮರೀಲಿಕ್ಕೆ!" ಎಂದು ಆಶ್ವಾಸನವನ್ನೀತ್ತಿದ್ದನವ.

ಸುಭಾಷ್‌ನ ಭವಿಷ್ಯದ್ ವಾಣಿ ಯೋಗಿ ಮಾಡಿದಂತೆ ನಿಜರೂಪದಲ್ಲಿ ಪ್ರಕಟವಾಗಿತ್ತು.

ಸ್ಟೋ ಹೊತ್ತಿಸಿ, ರಾಮುಚಂದ್ರ ಕಾಫಿಯನ್ನು ಅವನಿಗೆದುರಿಗಿಟ್ಟಾಗ, ಆತ ಹೆಬ್ಬುಲಿಯಂತೆ ಕಂಡುಬಂದ. ಹುಲಿ ಎಷ್ಟೇ ಕ್ರೂರ ಪ್ರಾಣಿಯಾಗಿದ್ದರೂ ತನ್ನ ಮಕ್ಕಳು ಮರಿಗಳ ಸಂರಕ್ಷಣೆಗಾಗಿ, ತನ್ನ ರಕ್ತ ಸಂಬಂಧ ತನಕ್ಕಾಗಿ, ತನ್ನ ಕುಲ ಮರ್ಯಾದೆಗಾಗಿ ಪ್ರಾಣ ಕೊಡಲು ಸಿದ್ಧವಾಗಿರುತ್ತದೆ. ಆದರೆ ಮೌನವಾಗಿ ಹುಟ್ಟಿದ ರಾಮುಚಂದ್ರ? ಸರ್ವೋದಯ ಸೇವಕನಾಗಿ, ಸರ್ವ ಸಮಾಜದ ಸುಖದೇಳ್ಗೆಗಾಗಿ ದುಡಿಯುವೆ, "Love All" ಎಂದು ಘೋಷಿಸುವ ರಾಮುಚಂದ್ರ, ತನ್ನ ಸಂಸಾರವನ್ನೇ ಮಾಡಿಕೊಂಡು, ಹುಲಿಗಿಂತಲೂ ಕೀಳ ಪಶುವಾಗಿ ಇದ್ದವನ ಕಾಫಿ-ಕಾಫಿಯೇ? ಛೀ, ಅದು ವಿಷವೆಂದೆದ್ದು ಹೊರಟ.

ಜಗದಂಬೆಯ ಸಿಂಹಾಸನದ ಹತ್ತಿರ ಬಂದು, "ಅಣುವನ್ನು-ಬೃಹದ್‌ದಲ್ಲಿ ಅಡಗಿಸಿಕೊಂಡು ಮನೆಯನ್ನು ಅಂಧಾಕಾರಗೊಳಿಸಿದೆಯಾ? ಎಂದು ಗೋಗರೆದ.

ನಾಗಪಂಚಮಿಯ ಹಬ್ಬ; ಹೆಂಗಸರ ಸಡಗರ. ಮದುವೆಯಾದ ಹೆಣ್ಣು ಮಕ್ಕಳು ತೌರು ಮನೆಗೆ ಬಂದು, ಜೋಕಾಲಿಯ ಮೇಲೆ ಕುಳಿತು, ಹಾಡುವ ತೌರಿನ ವರ್ತನೆಯನ್ನು ಕೇಳಬೇಕು.

"ನಮ್ಮಣ್ಣಾ ಏನವ್ವಾ ಸಾವುಕಾರ್ರು,<br>ಸಾವುಕಾರ್ರು |<br>ನಾವೇನ್ರವ್ವಾ ಬಡವರು<br>ಬಡವರು ||"

ಎಂದು ಬಗೆ ಬಗೆಯಾಗಿ ಬಣ್ಣಿಸುವುದನ್ನು ಕೇಳಿದರೆ-ಮನೆಯಲ್ಲಿ ಹೆಣ್ಣು ಹುಟ್ಟಿದರೆ ಅಳುವವ ಪಾಪಿ ಎಂದು ಹೇಳಬೇಕು.

ನೆರೆಹೊರೆಯ ಮಕ್ಕಳು ಆಡುವುದನ್ನೂ ನೋಡಿ ಸಂತೋಷ ಪಡುತಲಿದ್ದ ಸುಭಾಷ್, ತಾನೂ ಸ್ವತಃ ಎಲ್ಲ ಮಕ್ಕಳ ಬಳಿಗೂ ಹೋಗಿ. ಅವರ ಜೋಕಾಲಿಯನ್ನು ತೂಗಿ ಬರುತ್ತಿದ್ದ. ನವ ವಿವಾಹಿತ ತರುಣಿಯರ ಯೋಗಕ್ಷೇಮವನ್ನು ವಿಚಾರಿಸಿಕೊಳ್ಳುತ್ತಲಿದ್ದ.

''ಲಕ್ಷ್ಮೀ. ನಿನ್ನ ಗಂಡ ಹ್ಯಾಗಿದ್ದಾನೆ?" ಎಂದೊಬ್ಬಳಿಗೆ ಪ್ರಶ್ನೆ ಹಾಕಿದ.

''ಸಾವಿತ್ರಿ ನಸೀಬಿನಂಗ ಹ್ಯಾಂಗ ಬರಬೇಕ ಸುಭಾಷಣ್ಣಾ" ಎಂದು ಹೇಳಿದಳವಳು ಮುಗ್ಧೆ.

ಒಣ ನಗೆ ಬೀರಿದ ಸುಭಾಷ್. "ತಂಗೀ, ಗಂಡ ಹೇಗಿದ್ದರೂ ನಾರಿಯರಿಗೆ ಅವನೇ ದೈವ!

''ನಿನಗೆ ಮಾತ್ರ ಹೆಂಡ್ತಿಯಾಗುವವಳು ಪುಣ್ಯಾತ್ಗಿತ್ತಿ ಇರಬೇಕು ನೋಡಣ್ಣಾ" ಎಂದು ಅವನ ಹೃದಯ ಮಿಡಿಯುವಂತೆ ಹೇಳಿದಳು ಲಕ್ಷ್ಮಿ.

''ಲಕ್ಷ್ಮಿ, ನೀನು ಹೋದ ಮನೆ 'ಲಕ್ಷ್ಮಿ' ಯಾಗಬೇಕು; ಹುಟ್ಟಿದ ಮನೆಗೆ ಕೀರ್ತಿ ತರಬೇಕು"

''ಲಕ್ಷ್ಮಿ-'ದರಿದ್ರ ಲಕ್ಷ್ಮಿ'ಯಾಗಿದ್ದರೆ?"

''ಶಿವನಿರುವ ಸುಡುಗಾಡು-ಸುಡುಗಾಡೆನ್ನಲಾದೀತೇ ಲಕ್ಷ್ಮೀ? ಆದಿಶೇಷನ ಮೇಲೆ ಮಲಗಿದ್ದಾನೆ ಶ್ರೀಹರಿ, ಅವನ ಕಾಲು ಒತ್ತುತ್ತಿದ್ದಾಳೆ ಆ ಲಕ್ಷ್ಮೀ ಲಕ್ಷ್ಮಿನೀನು ಆಡುತ್ತಿರುವ ಜೋಕಾಲಿ ಮೇಲು-ಕೆಳಗೆ ಆಗುತ್ತಿದೆ. ಅದರಂತೆಯೇ ಇದೆ ಈ ಪ್ರಾಪಂಚಿತ ಸ್ಥಿತಿ. ಆದುದರಿಂದ ಸುಡುಗಾಡು – ಸುಡುಗಾಡಲ್ಲ, ಲಕ್ಷ್ಮಿ ದರಿದ್ರ ಲಕ್ಷ್ಮಿಯಲ್ಲ!"

''ಏನೋ ಅಣ್ಣಾ, ನಿನ್ನ ಮಾತು ನನಗೊಂದೂ ತಿಳಿಯೂದಿಲ್ಲ"

ಇಷ್ಟರಲ್ಲಿ ''ಸುಭಾಷಾ" ಎಂದು ಕರೆ ಬಂದಿತು.

''ಬಂದೆ ಚಿಕ್ಕಮ್ಮಾ" ಎಂದು ಕರೆದ ಮನೆಯಲ್ಲಿ ಓಡಿ ಹೋದ.

''ಬಾಪ್ಪಾ. ಪಾಪ ಎಂಥಾ ಬಂಗಾರದಂಥಾ ಹುಡುಗಿ! ಹಟ್ಟಿ-ಹುಣ್ಣಿಮೆ ಬಂತಂದರ ಆ ಹುಡುಗಿ ಏನೇನು ಮಾಡಿ ತಿನ್ನಿಸ್ತಿತ್ತೋ ನಿನಗೆ?" ಎಂದು ಕಣ್ಣೀರು ತುಂಬಿಕೊಂಡು ಫಲಾಹಾರದ ತಟ್ಟೆಯನ್ನು ತಂದಿಟ್ಟಳು.

ತಾಯಿ ತೀರಿಕೊಂಡಾಗ ಕೂಡ ಅಷ್ಟೊಂದು ದುಃಖವಾಗಿರಲಿಲ್ಲ ಸುಭಾಷ್‌ನಿಗೆ; ಫಲಾಹಾರದ ತಟ್ಟೆಯನ್ನು ಹಾಗೆಯೇ ಸರಿಸಿ,-ಧೋತರದಂಚಿನಿಂದ ಕಣ್ಣೀರನ್ನೊರೆಸಿಕೊಳ್ಳುತ್ತ ಹೊರಬಂದ.

ಹುಡುಗಿಯೊಂದು ಹಾಡುತ್ತಿತ್ತು:

''ಪಂಚಮಿ ಬಂತವ್ವಾ ಸನ್ಯಾಕ<br>ಅಣ್ಣಾ ಬರಲಿಲ್ಲವ್ವಾ ಕರ್‍ಯಾಕ॥"<br>—ಎಂದು.

ಮದುವೆಯಾಗಲಿರುವ ಆ ಹುಡುಗಿಯನ್ನು ನೋಡುತ್ತ. ನೋಡುತ್ತಲೇ ನಿಂತುಕೊಂಡು ಬಿಟ್ಟಿದ್ದ ಸುಭಾಷ್-ಶಿಲಾ ಪ್ರತಿಮೆಯಂತೆ!

4

''ಪೋಸ್ಟ್ ಸಾರ್" ಎಂದು ಅಂಚೆ ಪೇದೆಯವನು ಕವ್ಹರ್‌ವೊಂದನ್ನು ಒಗೆದು ಹೋದ. ಬಿಚ್ಚಿ ನೋಡಿದ ಸುಭಾಷ್; ಅದು ಅವನ ತಂಗಿಗೆ ಗೆಳತಿಯೋರ್ವಳು ಬರೆದುದಾಗಿತ್ತು.

''ಪ್ರಿಯ ಸಾಂವೂ.

ತಾಯಿಯಿಲ್ಲದ ತವರು ನರಕ ಸದೃಶವೆಂದು ಹೇಳುವುದು ತಪ್ಪೆಂದೆನಿಸುತ್ತದೆ, ನನಗೆ.

ಮೊನ್ನೆ ದೀವಳಿಗೆಯ ಹಬ್ಬಕ್ಕೆ ಅಣ್ಣ ಕರೆಯಲು ಬಂದಿದ್ದ.

''ನಿನಗೆ ನಾನು ಹೆಚ್ಚೋ-ನಿನ್ನಣ್ಣ ಹೆಚ್ಚೋ?" ನನ್ನವರು ಪ್ರಶ್ನಿಸಿದರು.

ನಿನಗೂ ಇದೇ ಪ್ರಶ್ನೆ ಬಿದ್ದದ್ದರೆ – ನೀನೇನು ಉತ್ತರ ಕೊಡಬಹುದಾಗಿದ್ದೆ ಸಾಂವೂ?

ನನಗಂತೂ ಕಣ್ಣಲ್ಲಿ ನೀರು ತುಂಬಿ ಬಂದವು ಆ ಪ್ರಶ್ನೆಯಿಂದ.

ನನ್ನವರಿಗೆ ಕರುಣೆ ಬಂದಿತು.

''ನಿನ್ನಿಷ್ಟ!" ಎಂದು ಭಾರವಾದ ಹೃದಯದಿಂದ ನನ್ನೊಬ್ಬಳನ್ನೇ ಬಿಟ್ಟು ಹೊರಟು ಹೋದರು.

ಆ ವೇದನೆ ನನ್ನನ್ನೂ ಬಾಧಿಸಿತು.

'ಅಣ್ಣಾ, ನರಕ ಚತುರ್ದಶಿಯ ದಿವಸ ರುಕ್ಮಿಣಿಯು-ಶ್ರೀ ಕೃಷ್ಣನಿಗೆ ಆರತಿ ಬೆಳಗಿದಳು' ನಾನು ಹೇಳಿದೆ.

'ಹೌದು. ಆಗಲೇ ಸುಭದ್ರೆಯೂ ಕೂಡ ಶ್ರೀ ಕೃಷ್ಣನಿಗೆ ಆರತಿ ಬೆಳಗಿದ್ದಳು' ಎಂದು ಒತ್ತಾಯದ ದನಿ ತೆಗೆದ.

ಉಭಯ ಸಂಕಟ ನನಗೆ. ಹೇಗೆ ಹೇಗೋ ನನ್ನವರನ್ನು ಸಂತೈಸಿ,-ಅಣ್ಣನ ಮನೆಗೆ ಬಂದೆ.

ಆರತಿ ಬೆಳಗುತ್ತಿರುವಾಗ ನನ್ನಣ್ಣ-ಕೇವಲ ಅಣ್ಣನಾಗಿ ಕಂಡು ಬರಲಿಲ್ಲ. ಇಂಥ ಅಣ್ಣನ ತಂಗಿಯಾಗಿ ಹುಟ್ಟಿದುದು ನನ್ನ ಪೂರ್ವ ಜನ್ಮದ ಸುಕೃತ ಪುಣ್ಯ !.

ನಾನು ಇಲ್ಲಿ ಬಂದ ಕ್ಷಣವೇ ನನ್ನವರೆಂದರು: 'ಹಾ, ನನಗೂ ಒಬ್ಬಳು ತಂಗಿ ಇರುತ್ತಿದ್ದರೆ....!....ರೆ !! ....ರೆ....!!!'

"ಸಾಂವಿ, ಈ "ರೆ" ಒಂದು ಇರದೆ ಹೋಗಿದ್ದರೆ ಜಗತ್ತು ಇರುತ್ತಿತ್ತೋ-ಇಲ್ಲವೋ?

ನಿನಗೂ-ನಿನ್ನಣ್ಣ ಈ ಭಾಗ್ಯ ತಂದು ಕೊಡಲಿ!

ನಿನ್ನಣ್ಣ ನಿನಗೇನು ಮಾಡಿದನೆಂಬುದನ್ನು ವಿವರಿಸಬಲ್ಲೆಯಾ?

ಇಂತೀ, ನಿನ್ನ ಗೆಳತಿ
ಶಾಮಲಾ"

ನಿಟ್ಟುಸಿರೊಂದನ್ನು ಬಿಟ್ಟು ಸುಭಾಷ್-ಕೊನೆಯ ಸಾಲುಗಳನ್ನೋದಿ,

ಸಾಂವೂನ ಅಣ್ಣ-ಸಾಂವೂಗೆ ಮಣ್ಣು ಕೊಟ್ಟ ಶಾಮಲಾ-ಮಣ್ಣು ಕೊಟ್ಟ!!!" ಎಂದು ಎದೆಎದೆ ಹಿಡಿದುಕೊಂಡ.

(5)

ರಜೆ ಮುಗಿಯುತ್ತ ಬಂದಿತ್ತು. ತನ್ನ ಆಪ್ತೇಷ್ಟರಿಗೆ, ಸ್ನೇಹಿತರಿಗೆ ಭೇಟಿಯಾಗುತ್ತ, ತನ್ನ ಜೀವನದಲ್ಲಿ ಹುಟ್ಟಿಕೊಂಡಿದ್ದ ಜಿಗುಪ್ಸೆಯನ್ನು ತೋರಿಸುತ್ತ, ವೈರಾಗ್ಯತನವೇ ನಿಜವಾಗಿ ಒಡಮೂಡಿಕೊಂಡಿದೆ ಏನೋ ಎನ್ನುವಂತೆ ನಿರಾಶಾಭಾವದಿಂದ ಕಾಲವನ್ನು ನೂಕುತ್ತಿದ್ದ.

ಒಂದು ದಿನ ಸಾವಿತ್ರಿಯು ಗಂಡ ಶಂಕರ ಬಂದ-ತನ್ನ ಪುನರ್ವಿವಾಹದ ಆಮಂತ್ರಣ ಕೊಡಲು, ಅವನ ಮುಖ ನೋಡಿದೊಡನೆಯೇ ಕಪ್ಪಿಟ್ಟಿತು. ಸುಭಾಷನ ಮುಖ.

"ಇನ್ನೊಂದು ಹೆಣ್ಣನ್ನು ನರಕಕೂಪದಲ್ಲಿ ಒಗೆಯಲು ನಾಚಿಕೆಯಾಗುವುದಿಲ್ಲವೇ ನಿನಗೆ?" ಕೇಳಿಯೇ ಬಿಟ್ಟ ಅವನನ್ನು.

ಕರಿಗಾಲು ಹೆಣ್ಣಿನ ಮುಷ್ಟಿಯಿಂದ ದೇವರು ನನ್ನನ್ನು ಬೇಗನೆ ಪಾರು ಪಾರುಮಾಡಿದನೆ"ಂದು ಬಂದವನೂ ಕೋಪದಿಂದಲೇ ಹೇಳಿದ.

ವಾದ—ವಿವಾದ ಬೆಳೆದು, ಹೊಡೆದಾಟದ ಸ್ಥಿತಿಗೇರಿತು. ನೆರೆದ ಅಕ್ಕ-ಪಕ್ಕದ ಮನೆಯವರ ಇಬ್ಬರಿಗೂ ತಿಳಿ ಹೇಳಿದರು. ಹೋಗ ಹೋಗುತ್ತ ಶಂಕರ ಒಂದು ಮಾತನ್ನು ಹೇಳಿದ "ಒಂದಲ್ಲ, ಹತ್ತು ಹೆಣ್ಣುಗಳನ್ನು ಮಾಡಿಕೊಳ್ಳುತ್ತೇನೆ. ನನ್ನನ್ನು ಕೇಳುವವರಾರು?"

"ಅಯ್ಯೋ ಸಮಾಜವೇ!" ಎಂದ ಸುಭಾಷ್. "ಗಂಡಸು ಏನೇ ಮಾಡಿದರೂ ಸರಿ. ಆದರೆ ಹೆಣ್ಣು ಮಾತ್ರ ಗಂಡ ಸತ್ತರೆ ತನ್ನ ಉಳಿದ ಆಯುಷ್ಯವನ್ನೆಲ್ಲ "ಜೀವಂತ ಸಮಾಧಿ"ಯಲ್ಲಿ ಕುಳಿತು ಕಾಲ ತಳ್ಳಬೇಕು!! ಇಲ್ಲವೇ ಉರಿಯುತ್ತಿರುವ ಅಗ್ನಿಯಲ್ಲಿ ದೇಹವನ್ನರ್ಪಿಸಿ ತಾನೂ ಒಬ್ಬಳು ಪತಿವ್ರತೆ ಎಂಬುದನ್ನು ತೋರಿಸಿಕೊಡಬೇಕು! ಥೂ!!!" ಎಂದು ನಿಟ್ಟುಸಿರು ಬಿಟ್ಟ.

ಸಾಯಂಕಾಲ ಮನಸ್ಸಮಾಧಾನಕ್ಕಾಗಿ, ಅರಣ್ಯ ಪ್ರಾಂತದಲ್ಲಿರುವ ಭಗವಾನ್ ಸಿದ್ಧೇಶ್ವರನಾಥನ ಮಂದಿರಕ್ಕೆ ಹೋಗಿ, ಪೂಜೆ ಮುಗಿಸಿಕೊಂಡು, ಮರಳಿ ಬರುತಲಿದ್ದ. ಹಳೆಯದೆಲ್ಲವನ್ನೂ ಮರೆತು – ಏನೋ ಅವನ ಅಂತರಾತ್ಮ ಸುಪ್ರಸನ್ನಗೊಂಡಿತ್ತು. ಚಂದ್ರ ಕಿರಣಗಳು ಮನಸ್ಸಿಗೆ ನೆಮ್ಮದಿಯನ್ನುಂಟು ಮಾಡಿದ್ದುವು.

ವೃಕ್ಷಸಮೂಹದ ಒಂದು ಮೂಲೆಯಲ್ಲಿ ಕಿಲಕಿಲನೆ ನಗುವ ಮಧುರ ಕಂಠದನಿ ಕೇಳಬಂದಿತು ಸುಭಾಷನಿಗೆ. ಅಲ್ಲಿ, ಆ ಹೊತ್ತಿನಲ್ಲಿ ಯಾರಿರಬಹುದೆಂಬ ಕುತೂಹಲದಿಂದ ನೋಡ ಹೋದ. ಆತನ ಕಾಲು ಹೆಜ್ಜೆ

ಯನ್ನುಕೇಳಿದೊಡನೆಯೇ ತರುಣನೊಬ್ಬ ಓಡತೊಡಗಿದ, ನಿಂತ ತರುಣಿ ಗಡಗಡ ನಡುಗತೊಡಗಿದಳು.

''ಕುಸುಮೀ, ಅವನಾರು? "ಎಂದ.

ಅವಳು ಹೇಳಲಿಲ್ಲ. ಕಲ್ಲೊಂದನ್ನೆತ್ತಿದವನೇ ಗುರಿ ಹಿಡಿದು ಒಗೆದ; ಓಡಿ ಹೊರಟವನ ಕಾಲು ಮುರಿಯಿತು. ಉರುಳಿ ಬಿದ್ದ.

....ನೀನು? ರಾಮ್ಯಾ....?" ಸಿಟ್ಟು ಬಂದಿತು, ತಮ್ಮನ ಮೇಲೆ.

''ಕುಸುಮೀ, ನೀನು—ನಿನಗೆ ತಿಳಿಯಲಿಲ್ಲವೇನೇ?"

''ನಾನವರನ್ನು ಪ್ರೀತಿಸುತ್ತೇನೆ"ಂದಳು ಕುಸುಮಿ ''ನನ್ನ ವಿಷಯ ನಿನಗೇಕಣ್ಣಾ?" ಎಂದು ಕೇಳಿದ ರಾಮಚಂದ್ರ.

''ನಿನ್ನ ಪ್ರೀತಿ—ಇವನಿಗೆ ಬೇಕಾಗಿಲ್ಲ ಕುಸುಮಿ, ಗಂಡಸು ಬಯಸುವುದು ಹೆಣ್ಣಿನ ಸೌಂದರ್ಯವನ್ನು—ಅವಳ ರೂಪರಾಶಿಯನ್ನಲ್ಲ! ಅದು ಗಂಡಸಿನ ಕಾಮ ಜ್ವಾಲೆಯಲ್ಲಿ ಭಸ್ಮವಾಗಿ ಹೋಯಿತೆಂದರೆ ಹೆಣ್ಣಿನ ದೇಹ-''ಹೆಣ್ಣಿ ದೇಹ"ವಾಗಿ ಉಳಿಯಲಾರದು; ಆ ಜೀವ ಬದುಕಲಾರದು!"

''ಸಿದ್ಧೇಶ್ವರನ ಸಾಕ್ಷಿಯಾಗಿ ಅವರು ನನ್ನ ಕೈ ಹಿಡಿದಿದ್ದಾರೆ, ನನ್ನ ಹಣೆಗೆ ಕುಂಕುಮ ಹಚ್ಚಿದ್ದಾರೆ"

ಕಾಮುಕನಿಗೆ ಯಾವ ದೇವ್ರೂ ಇಲ್ಲ—ಯಾವ ಧರ್ಮವೂ ಇರುವುದಿಲ್ಲ......—!"

''ನಾನು ಕಾಮುಕನೇ? ಬ್ರಹ್ಮಚಾರಿ ಎಂದು ಹೇಳಿಕೊಳ್ಳುತ್ತ, ವ್ಯವಹರಿಸುತ್ತಿರುವ ನಿನ್ನ ಜೀವನವನ್ನು ನಾನು ತಿಳಿಯಲಾರೆನೇ?" ಸುಭಾಷನ ಮಾತಿನ ಮಧ್ಯದಲ್ಲಿಯೇ ಅರಣ್ಯವೂ ಹೆದರುವಂತೆ ಚೀರಿದ ರಾಮಚಂದ್ರ.

''ಪ್ರೇಮವು ಕಾಮವಲ್ಲ, ಕುಸುಮೀ"

''ನಿನ್ನ ಮನೆಗೆ ಬರಹೋಗುತ್ತಿದ್ದವರನ್ನೆಲ್ಲ ಅತಿಥಿಯಂತೆ ಕಾಣುತ್ತಿದ್ದ ನಿನ್ನ ತಂಗಿಯದು ಮಾತ್ರ ಅಲೌಕಿಕ ಪ್ರೇಮವಾಗಿತ್ತೇನೋ?" ಸಾವಿತ್ರಿಯ ಮೇಲೆ ಅಪವಾದ ಹೊರಿಸಲು ಹೋದಳು ಕುಸುಮ.

''ನಾನು ಸಾತ್ರಿಯನ್ನು ಪರರ ಮನೆಯಲ್ಲಿ ಬಿಟ್ಟು ಮೂರುನೂರು ಮೈಲಿಗಳ ಅಂತರದಲ್ಲಿ ಇದ್ದರೂ ಅವಳು ಸೀತೆ-ಸಾವಿತ್ರಿಯರ ಸಮಾನವಾಗಿಯೇ ಬದುಕಿಕೊಂಡಳು ಎಂಬುದನ್ನು ಧೈರ್ಯದಿಂದ ಹೇಳುತ್ತೇನೆ. ಅವಳ ಅಣ್ಣನಾಗಿ ರಾಮಚಂದ್ರ ಬದುಕಲಿಲ್ಲ—ನನಗೆ ತಂಗಿಯಾಗಿ ಅವಳು ಉಳಿಯಲಿಲ್ಲ. ನನ್ನ ಸಾವಿತ್ರಿಯನ್ನು-ನಿನ್ನ ಜೀವನಕ್ಕೆ ಹೋಲಿಸಕೊಳ್ಳಬೇಡ ಕುಸುಮೀ-ನಿನ್ನ ಜೀವನಕ್ಕೆ ಹೋಲಿಸಿಕೊಳ್ಳಬೇಡ".

''ಊರಿನ ನಾಲ್ಕು ಜನರಿಗೆ ಕೇಳು ಹೋಗು ಅವಳು ಯಾಕೆ ವಿಷ ತಿಂದು ಸತ್ತುಹೋದಳೆಂಬುದನ್ನು ದನ್ನು!" ಕಡುಕೋಪದಿಂದಲೇ ಹೇಳಿದಳು ಕುಸುಮಿ.

''ಅಗ್ನಿಯಲ್ಲಿ ಮಿಂದು ಪರಿಶುದ್ಧಳಾದ ಸೀತೆಯ ಮೇಲೆ ಅಪವಾದ ಹೊರಿಸಲು ಒಬ್ಬ ಅಗಸರವನು ಹಿಂಜರಿಯಲಿಲ್ಲ. ಊರಿನ ನಾಲ್ಕು ಜನರೇನು ಬಲ್ಲರು-ನನ್ನ ತಂಗಿಯ ಅಂತರ್ವೇದನೆ! ನಾನು ಕೂಡ ಅವಳ ಅಂತರಾತ್ಮವನ್ನರಿಯಲಾರದೆ ಹೋಗಿ, ವ್ಯರ್ಥ ಒಂದು ಜೀವಿಯ ಜೀವನವನ್ನು ಕಳೆದೆ. ರಾಮಚಂದ್ರಾ, ಕೇಳು, ನಿನ್ನ ತಂಗಿ ಮರ್ಯಾದೆಗಾಗಿ ಸತ್ತಳು; ಸತ್ತು ಬದುಕಿಕೊಂಡಳು! ನನಗೂ ''ದಾರಿದೀಪ" ತೋರಿಸಿ ಹೋದಳು; ಇಡೀ ಸ್ತ್ರೀಕುಲಕ್ಕೇ ಆದರ್ಶವಾದಳು!" ಎನ್ನುತ್ತಲೇ ಅಲ್ಲಿಂದ ಕಾಲ್ತೆಗೆದ.

ಅವನ ಮಾತುಗಳ ಪ್ರತಿಯೊಂದು ಶಬ್ದಗಳೂ ಅರಣ್ಯದಲ್ಲಿ ಪ್ರತಿಧ್ವನಿಗೊಳ್ಳುತ್ತಲಿದ್ದುವಲ್ಲದೆ—ಅವರಿಬ್ಬರ ಹೃದಯವನ್ನೂ ಛೇದಿಸುತ್ತಿದ್ದವು.

## 6

ಬೆಂಗಳೂರಿಗೆ ಹೊರಟು ನಿಂತಿದ್ದ ಸುಭಾಷ್. ದೇವರ ಕೋಣೆಗೆ ಹೋಗಿ, ದೀಪವನ್ನು ಹಚ್ಚಿದ; ತಮ್ಮ ರಾಮಚಂದ್ರನಿಗೂ—ಅವನ ಹೆಂಡತಿಗೂ ಕರೆದು ಒಂದು ಮಾತು ಹೇಳಿದ: ''ಈ ಮನೆತನದ ದೀಪ ಸದಾ ಬೆಳಗುತ್ತಿರಲಿ!" ಎಂದು.

ಹೋಲ್ಡಾಲ್ ತೆಗೆದುಕೊಳ್ಳುವಷ್ಟರಲ್ಲಿ ನಿರ್ಮಲೆ ಬಂದಳು. ಅವಳೂ—ಸಾವಿತ್ರಿಯೂ ಒಂದೇ ಓರಿ

ಗೆಯ ಗೆಳತಿಯರು; ಅವಳನ್ನು ಕಂಡೊಡನೆಯೇ ಪುನಃ ಸಾವಿತ್ರಿಯ ನೆನಪು ಬಂದಿತು ಅವನಿಗೆ

''ನಿರ್ಮಲಾ ಎಂದು ಕೂಗಿದ.

''ನಾನೂ...........ಗಂಡನ ಮನೆಗೆ ಹೊರಟಿದ್ದೇನಣ್ಣಾ!" ಅಸಮಾಧಾನದಿಂದಲೇ ಹೇಳಿದಳು.

ಗಂಡನ ಮನೆ ಸ್ವರ್ಗಸಮಾನವಾಗಿ ಮಾಡಿಕೊಳ್ಳಬೇಕಮ್ಮಾ"

''ನಿನ್ನ ಮನೆ ಸ್ವರ್ಗಎಂದಾಗುವುದು ಅಣ್ಣಾ?"

ಕೇವಲ ಮುಗುಳ್ನಗೆ ನಕ್ಕ ಸುಭಾಷ್.

''ವೇಳೆಯಾಯಿತಣ್ಣಾ, ಟ್ಯಾಕ್ಸಿ ತಂದಿದ್ದೇನೆ ಎಂದು ಎಚ್ಚರಿಕೆಯನ್ನಿತ್ತ ರಾಮಚಂದ್ರ.

''ಇಲ್ಲಿ ಬಾಮ್ಮ ನಿರ್ಮಲಾ" ಎಂದು ಅವಳನ್ನು ಕರೆದೊಯ್ದು, ''ಇದೊಂದಿಷ್ಟು ಉಟ್ಟುಕೊಂಡು ತೋರಿಸಮ್ಮಾ!" ಎಂದು ಹೊಸ ಸೀರೆಯನ್ನೇ ತೆಗೆದು ಕೊಟ್ಟ.

''ಅ—......ಣ್ಣಾ ಎಂದು ಕಣ್ಣೀರಿನಿಂದ ಅವನ ಪಾದ ತೊಳೆದಳು. ಕುಲದೇವಿಗೆ ವಂದಿಸಿ, ಹೊಸ ಸೀರೆಯುಟ್ಟುಕೊಂಡು ಬಂತು ನಿಂತುಕೊಂಡಳು–ಅವನೆದುರಿನಲ್ಲಿ!

ಮಂಜುಗಣ್ಣುಗಳಿಂದ—ಕಣ್ತುಂಬ ನೋಡಿದ ನಿರ್ಮಲಳನ್ನು. ಟ್ಯಾಕ್ಸಿಯಲ್ಲಿ ಕುಳಿತು ತನ್ನ ಮನೆಯನ್ನೂ ನೋಡಿದ. ಆ ಹೃದಯವೇದನೆ ಉಸಿರಾಗಿ ಹೊರಬಿದ್ದಿತು.

ಕೆಂಧೂಳಿ ಹಾರಿಸುತ್ತಿತ್ತು ಟ್ಯಾಕ್ಸಿ;
ದೂರದೂರ ಓಡುತ್ತಿತ್ತು ರೈಲು;

ನಿರ್ಜೀವದಂತೆ ಸುಭಾಷ್ ಎಲ್ಲವನ್ನೂ ನೋಡುತ್ತಿದ್ದ.

**ಸಮಾಪ್ತಿ**



# ಭರತ ಭೂಮಿ ನಮ್ಮದು

ಲೇಖಕರು : **ಕೆ. ಜಿ. ರಂಗಯ್ಯ**

೧

'ಪರಮಹಂಸ' ನುದಿಸಿ ಬಂದ
ಭರತ ಭೂಮಿ ನಮ್ಮದು ।
'ಕರಮ ಚಂದ'ನುದಯದಿಂದ
ಹಿರಿಮೆಯನ್ನು ಪಡೆದುದು ।

೨

ಲೋಕವೆಲ್ಲ ಬಲ್ಲ ಪುಣ್ಯ-
ಶ್ಲೋಕರನ್ನು ಹಡೆದುದು ।
'ಲೋಕಮಾನ್ಯ ತಿಲಕ, ''ಬೋಸ್"ವಿ-
ವೇಕ'ರುದಿಸಿ ಬಂದುದು ॥

೩

**ಲೋಕವೆಲ್ಲ ಬಲ್ಲ ಸದ್‌ವಿ—**
**ವೇಕರುದಿಸಿ ಬಂದುದು ।**
**'ಗೋಖಲೆ'ಯನು ಹಡೆದ ನಾಡು**
**ನಾಕಕಿಂತ ಮಿಗಿಲಿದು ॥**

೪

'ಆದಿಕವಿಯು' ರಾಮಕಥೆಯ
ಹಾಡಿ ನಲಿದ ನಾಡಿದು ।
'ವೇದವ್ಯಾಸ' ಭಾರತನು
ಮೋದದಿಂದ ಬರೆದುದು ॥

೫

"ಭಾಸಕವಿ"ಯು ಬಳಿಕ "ಕಾಳಿ-
ದಾಸ"ರು ದಿಸಿ ಬಂದುದು ।
ದೇಶವಿದುವೆ ಕವಿ "ಕುಮಾರ-
ವ್ಯಾಸ"ನುದಯ ವಾದುದು ॥

೬

ಮೆರೆದರಲ್ಲಿ "ರನ್ನ" ಪಂಪ
"ಹರಿಹರಾ"ದಿ ಕವಿಗಳು ।
ಇರುವರೀಗ ಕವಿ "ಕುವೆಂಪು"
ಕೊರತೆಯನ್ನು ನೀಗಲು ।

೭

ಭುವಿಯೊಳಧಿಕ ಖ್ಯಾತಿವೆತ್ತ
ಕವಿ "ರವೀಂದ್ರ" ಹುಟ್ಟಿದ ।
ಅವನು ಕಲೆಯ ಕೇಂದ್ರವೊಂದ-
ನವನಿಯಲ್ಲಿ ಕಟ್ಟಿದ ॥

೮

ದಾಸಶ್ರೇಷ್ಠ "ಪುರಂದರನ"
ದೇಶವಿದುವೆ ನಮ್ಮದು ।
ದಾಸ ಶ್ರೇಷ್ಠ ''ಕನಕ" ''ತುಲಸಿ-
ದಾಸ"ರನ್ನು ಹಡೆದುದ ॥

೯

ಸಿದ್ಧರುದಿಸಿ ಬಂದ ನಾಡು
ಸಿದ್ಧಿಯನ್ನು ಪಡೆದುದು ।
''ಬುದ್ಧ"ನುದಿಸಿ ಬಂದು ಜನರ-
ನುದ್ಧರಿಸಿದ ನಾಡಿದು ॥

೧೦

''ಭಗತಸಿಂಹ"ನಂಥ ವೀರ—
ಮಗನ ಹಡೆದ ನಾಡಿದು ।
ಜಗದೊಳನ್ಯರೆದುರಿನಲ್ಲಿ
ಮೊಗವನೆತ್ತಿ ಮೆರೆದುದು ॥

೧೧

ಹಿರಿಯನೆನಿಸಿ ಹಿರಿಮೆಗಳಿಸಿ
ತೆರಳಿದನು ''ಜವಾಹಿರ" !
ಮರೆಸಿ ಅವನ ಕೊರತೆ ತುಂಬಿ
ಮೆರೆದನ್ನೆ ''ಬಹಾದುರ" !!

೧೨

ಹಿರಿಯರಳಿದರಯ್ಯೊ ಎಂಬ
ಕೊರಗು ಏಕೆ ನಮ್ಮೊಳು ?
ಭರತಮಾತೆ ಬಂಜೆಯಲ್ಲ
ಹಿರಿಯರನ್ನೆ ಹಡೆವಳು ॥

# ಆಸೆ - ಸಂತೃಪ್ತಿ

ಆಸೆ-ನೆಲೆ :

ಆಸೆ-ಮನುಜನೆದೆಯ ಸುಖದ ಭಾಷೆ
ಎಲ್ಲಿಗೆಲ್ಲಿಗೆ ಕಟ್ಟಿತು, ತೂಗಿತು ಉಯ್ಯಾಲೆ
ಮೇಲೆ-ಕೆಳಗೆ, ಅಕ್ಕ-ಪಕ್ಕ, ಮಂದಮಾರುತದ
ಒಳಗಿನೊಳಗಿನ ಲೀಲೆ !

ಬಗೆಬಗೆಯ ಭಾವ ಕುಣಿದಿತ್ತು ಮಿಂಚಿನೊಡಲಾಗಿ
ನಿಶೆಯ ಮಡಿಲೊಳಗೆ ಅರಳಿ ಬಂದ ಹೂವಾಗಿ
ಭಾವ ಬಂಗಾರವಾಗಿ ಸಿಂಗಾರಗೊಂಡ ಈ ವಿಧ
ಯಾವ ಲೋಕದ ಲೀಲೆ ?

ಬಿಸಿಲ ಕಿರಣವು ತೂರಿ ಬಂದಿಹ ಮಳೆಯ ಹನಿಯ ನಗೆ,
ಎದೆಯ ಮೈಯನು ತಂಪುಗೊಳಿಸಿದ, ಮೆದುಳ ಕಾವನು
ಇಂಗಿಸಿದ ಬಗೆ, ಬಹು ಹಿತದ ನಗೆ-ಹತ್ತುತಿದೆ ಸುಖದ
ನಿಚ್ಚಣಿಗೆಯ ಮೇಲೆ.

ಹಸಿರು ಹಣ್ಣಾದರೂ, ಉಸಿರು ಮಣ್ಣಾದರೂ
ಮನುಜನೆದೆಯಲಿ ಚಿಗುರುತಲೆ ಇದೆ-‘‘ಆಸೆ”
ಅವನ ಚೇತನವು ಹಾರಿಸುವ ಈ ‘‘ಚಿರ ಭಾಷೆ”
ಹಾರುತ್ತಿದೆ ಏರಿ ಏರಿ. ಬಾನಿನೊಡಲ ತೂರಿ ತೂರಿ
ಹಾಡುತ್ತಿದೆ ಸಾವೇರಿ

. . . . . . . .

**ನಡು ನುಡಿ :**

ಆಸೆ ಭಾಷೆಯೆಲ್ಲವು ‘‘ಭರವಸೆ” ಎನ್ನಲೆಲ್ಲಿದೆ ಭರವಸೆ ?
ಹಗಲಿರುಳು ಕಾವಲೆಲ್ಲಿ ಈ ಬದುಕಿನಲ್ಲಿ ?

ಎಂದೋ ಬಿದ್ದಾಗ ಮಾಡಿದ ತಪ್ಪಿನ ಚಿಂತೆ,
''ಆಸೆ ಅತಿಯಾಯ್ತು"—ಎಂದು ನುಡಿಸಿತೇ ?
. . . . . . .

ಮರುನುಡಿ :

ಸಹಜವಾದುದಕೆ ನಿನ್ನದೇನಾಕ್ಷೇಪಣೆ ?
''ಆಸೆ–ನಿರಾಸೆ"ಯು ತೂಗುಯ್ಯಾಲೆಯ ಮಂಚ
ಹಚ್ಚ್ಟವೆ ಎಲ್ಲಿದ್ದರು ಏಕೆ ನಿನ್ನಯ ಚುಂಚ ?
ಪ್ರಶ್ನೆಗೊಂದುತ್ತರ–ಏರಿದರು ಎತ್ತರ !
. . . . . . .

ಕೊನೆನುಡಿ :

ನಿನ್ನ ಆಸೆ ನೆರವೇರಿಸಲು ನೀ ನಡೆಸುವ ಕೃತಿಯ
ಬೆನ್ನೆಲುಬು ''ಬಿಳಿ" ಆಹುದೇನು ?
ಎದೆಯಾಳದಿಂದಲು ನಿಲಿಸು ನಿಲುಗನ್ನಡಿಯ
ನೋಡು, ನಿನ್ನಾಸೆ ಬೆಳೆದ ರಾಕ್ಷಸ ದೇಹ
ಜೋಕೆ, ಆ ಇರುಕಿನಲಿ ಒಡೆದೀತು ಕನ್ನಡಿಯ ಕಾಯ
ನಿನ್ನ ಗೈಮೆಗೆ, ನಿನ್ನ ಭಾಗ್ಯಕೆ ನಿನ್ನ ಮನಹದುಳತೆಗೆ
ಸಂದುದಕೆ, ಸಂತಸವೆಳಸುವುದೇ ಆಸೆ-ಸಂತೃಪ್ತಿ.

—' **ಅಚಲಶರಣ್** '



# 'ತನು ಹಿಂಗಿತು-ಶೂನ್ಯ ಸಂದಿತು'

ಆಧಾರ :
## ಪ್ರಭುಲಿಂಗಲೀಲೆಯ ಸಂಗ್ರಹ

ಬಿ. ರಾಜಶೇಖರಯ್ಯ,
ಮೈಸೂರು

"ಕಬ್ಬಿನ ರಸದ ಅರಿವು ನಮಗೆ ಆಗಬೇಕಾದರೆ, ಕಬ್ಬನ್ನು ಚರ್ವಣ ಮಾಡಿ ।ಅದರ ರಸಾಸ್ವಾದನೆ ಮಾಡಬೇಕು. ಅಂತೆಯೇ ಭಕ್ತಿಯ ಪ್ರಭಾವದ ಅರಿವು ನಮಗಾಗಬೇಕಾದರೆ ನಾವು ಭಕ್ತಿಯನ್ನು ಪರಮನಲ್ಲಿ ಅರಿತು ಆಚರಿಸಬೇಕು"—ಎಂದು ಭಕ್ತಕೋಟಿಗೆ ಭಕ್ತಿಯ ಮರ್ಮವನ್ನು ಮಾರ್ಮಿಕವಾಗಿ ಚಾಮರಸನು ಬೋಧಿಸಿರುತ್ತಾನೆ. ಅಷ್ಟೇ ಅಲ್ಲದೆ, ಭಕ್ತಿಯ ಪಥವನ್ನು ಅರಸಿ ಹೊರಟ ಶರಣಪುಂಜವು ಹೇಗೆ ತನ್ನತನವನ್ನು ಪಡೆಯಿತೆಂಬುದನ್ನು ತನ್ನ ಕೃತಿಯಿಂದಲೇ ಸ್ಪಷ್ಟಪಡಿಸಿದ್ದಾನೆ. ಅಂತೆಯೇ ಸತ್ಯಶರಣರ ಸತ್ಯತೆಯ ಪ್ರಾಪ್ತಿಯನ್ನು ತಿಳಿಸುವ ಕೃತಿರತ್ನವಾಗಿದೆ ಚಾಮರಸನ "ಪ್ರಭುಲಿಂಗಲೀಲೆ". ಈ ಗ್ರಂಥದ ಪ್ರಭಾವವು ವೀರಶೈವ ಧರ್ಮದಲ್ಲಿ ಅಪಾರ ಪರಿಣಾಮಕಾರಿಯಾಗಿದೆ.

ಮೋಕ್ಷ ಸಂಪಾದನೆಗೆ ಮೂರು ಮಾರ್ಗಗಳಿವೆ. ಮೊದಲನೆಯದು ಕರ್ಮಮಾರ್ಗ, ಎರಡನೆಯದು ಜ್ಞಾನ ಮಾರ್ಗ ಮತ್ತು ಮೂರನೆಯದು ಭಕ್ತಿಮಾರ್ಗ. ಕರ್ಮದ ಆಚರಣೆಯಿಂದ ಸ್ವರ್ಗ ಮೊದಲಾದ ಫಲಗಳು ದೊರೆಯುತ್ತವೆ. ಈ ಕರ್ಮದ ಈ ಫಲಗಳನ್ನು ತ್ಯಾಗ ಮಾಡತಕ್ಕವನು ನಿಷ್ಕಾಮ ಕರ್ಮಿಯೆನಿಸುತ್ತಾನೆ. ಇವನ ಈ ಕರ್ಮಫಲ ತ್ಯಾಗವೇ ಮೋಕ್ಷಕ್ಕೆ ಸಾಧನ. ಇದು ಅತ್ಯಂತ ಕ್ಲೇಶಸಾಧ್ಯ. ಇನ್ನು ಜ್ಞಾನ-ಪರಮಾತ್ಮನ ಪ್ರಾಪ್ತಿಗೆ ಬೇಕಾದ ತಿಳುವಳಿಕೆಗೆ ಜ್ಞಾನವೆಂದು ಹೆಸರು. 'ಮೋಕ್ಷೇ ಧೀಃ ಜ್ಞಾನಂ' ಎಂದು ಅಮರಸಿಂಹನ ವಾಕ್ಯವಿದೆ. ಈ ಜ್ಞಾನದ ಪ್ರಾಪ್ತಿಯಾಗಬೇಕಾದರೆ ಅನಂತಕಾಲದ ಅಭ್ಯಾಸ ಬೇಕು. ಕರ್ಮಫಲ ತ್ಯಾಗಕ್ಕಿಂತ ಈ ಜ್ಞಾನಪ್ರಾಪ್ತಿ ಕಷ್ಟತರವಾದ್ದು. ಆದರೆ ಸರ್ವರೂ ಸುಲಭವಾಗಿ ಪರಮಾತ್ಮನಲ್ಲಿ ಸೇರಲು ಅತ್ಯಂತ ಸುಲಭ ಮಾರ್ಗವೆಂದರೆ, "ಭಕ್ತಿ". ನಿರಂತರ ಪರಮಾತ್ಮನ ಸೇವಾಕಾರ್ಯದಲ್ಲಿ ತೊಡಗುವುದೇ ಭಕ್ತಿಯ ಮಾರ್ಗ. ಈ ಭಕ್ತಿಯ ಆಚರಣೆಯಿಂದಲೇ ಅನೇಕರು ಶಿವಸಾಯುಜ್ಯವನ್ನು ಹೊಂದಿರುವರು. ಆದರೆ, ಅನುಭವಮಂಟಪದವರ ಭಕ್ತಿ ಅನ್ಯಾದೃಶವಾದುದು. ಆ ಭಕ್ತಿ, ಜ್ಞಾನದಿಂದ ಕೂಡಿದ್ದು ದೇವಗಂಗೆಯಂತೆ ಪರಮ ಪವಿತ್ರವಾದುದು. ಅನುಭವಮಂಟಪದ ಎಲ್ಲ ಅನುಭಾವಿಗಳ ಅನುಭವವು ಜಗತ್ತಿಗೆ ಈ ಒಂದು ಹೊಸ ಬೆಳಕನ್ನೇ ಚೆಲ್ಲಿದೆ. ಜ್ಞಾನ ಮತ್ತು ಭಕ್ತಿಗಳ ಸಮಾಯೋಗ ಅತಿ ಜಾಗ್ರತೆ ಮೋಕ್ಷದಾಯಕವೆಂಬುದಕ್ಕೆ ಶಿವಶರಣರೇ ಸಾಕ್ಷಿ.

ಪ್ರಕೃತ, ಮಾಯಾ ಕೋಲಾಹಲನಾದ ಅಲ್ಲಮ ಪ್ರಭುವು, "ಭೂರುಹದ ತಾಯ್ವೇರಿಗೆ ಅಮೃತದ ನೀರನೆರೆದಡೆ ಶಾಖೆಗಳಿಗೆ ಸುಸಾರವೇದಿಸುವಂತೆ ಬಸವನ ಭಕ್ತಿಬಂಧುಗಳು ಹಾರವಿಸುವಂತೆ ಎಮ್ಮ ಬಸವನ ಕಾರಣದಿ ಎಲ್ಲರಿಗೆ ತನ್ನಯ ಸಾರ ನಿತ್ಯಾನಂದ ಪದವಿಯನಿತ್ತ" ಬಗೆಯೆಂತೆಂಬುದನ್ನು ನೋಡೋಣ.

ಪರಮಾತ್ಮನ ಘನಮಹಿಮೆಯನ್ನು ಅರಿಯಬೇಕಾದರೆ ಕರ್ಮಭೂಮಿಯೆನಿಸಿದ ಭೂಲೋಕದಲ್ಲಿಯೇ ಸಾಧ್ಯ. ಅಂತೆಯೇ ಕರ್ಮಭೂಮಿಯಲ್ಲಿ ಪರಶಿವನ ಅಂಶವು ಅಲ್ಲಮನಾಗಿ ಮೆರೆಯುತ್ತಿದೆ. ಇದನ್ನು ಪರೀಕ್ಷಿಸಬೇಕೆಂಬುದು ಗಿರಿಜೆಯ ಹಂಬಲ. ಮೊದಲೇ ಚಂಡಿಯೆನಿಸಿದ ಶಿವೆಯು ಹಠ ಸಾಧನೆಗೆ ತನ್ನ ತಾಮಸ ಕಳೆಯನ್ನು ಭೂಮಿಗೆ ಕಳುಹುತ್ತಾಳೆ. ತಾಮಸವು ಎಂದಿಗೂ ತಾಮಸವೇ-ಮಾಯೆಯ ರೂಪದಲ್ಲಿ ಎಲ್ಲರನ್ನೂ ಮೋಹಗೊಳಿಸುತ್ತಿರುವಲ್ಲಿ, ಈ ಮಾಯೆಯನ್ನು

ಕೋಲಾಹಲಗೊಳಿಸಬೇಕೆಂದು ಮದ್ದಲೆಯ ಅಲ್ಲಮನಾಗಿ ಮೈದೋರಿದನು ಅಲ್ಲಮಪ್ರಭು. ಮಾಯೆ ಅಲ್ಲಮನ ಬೆನ್ನಟ್ಟಿದಳು. ಅಲ್ಲಮನು ಅರಣ್ಯವನ್ನು ಹೊಕ್ಕರೂ ಇವಳು ಬಿಡಲಿಲ್ಲ. ಭಕ್ತಿಗೆ ನಿಲುಕುವ ಜ್ಯೋತಿ ತಾಮಸಕ್ಕೆ ಮಣಿದೀತೆ? ಈ ಪ್ರಯೋಗದಲ್ಲಿ ಗಿರಿಜೆ ಸೋತು ಹೋದಳು.

ಇಷ್ಟಕ್ಕೇ ಬಿಡಲಿಲ್ಲ, ಪರೀಕ್ಷಿಸುವ ಛಲವಷ್ಟೆ. ಆ ಬಳಿಕ ತನ್ನ ಸಾತ್ತ್ವಿಕ ಕಳೆಯನ್ನು ಅಟ್ಟಿದಳು. ಸಾತ್ತ್ವಿಕವು ಸಾತ್ತ್ವಿಕವೇ ಹೌದಷ್ಟೆ! ವೈರಾಗ್ಯನಿಧಿ, ಕೇಶಾಂಬರೆ ಅಕ್ಕಮಹಾದೇವಿಯ ರೂಪದಿಂದ ಅಲ್ಲಮನಲ್ಲಿಗೆ ನಡೆತಂದಿತು ಗಿರಿಜೆಯ ಆ ಸಾತ್ತ್ವಿಕಕಳೆ. ಈ ವೇಳೆಗೆ ಬಸವಾದಿಗಳ ಅವತಾರವೂ ಕಲ್ಯಾಣದಲ್ಲಿ ಆಗಿತ್ತಷ್ಟೆ! ಅನುಭವಮಂಟಪದಲ್ಲಿ ಅಕ್ಕನ ಅನುಭವ-ಅನುಭಾವಗಳಿಗೆ ಅಗ್ರಸ್ಥಾನ ದೊರಕಿತು. 'ಭಕ್ತಿಯ ದಾಯ ನಿನ್ನಲಿ ನೆಲಸಿತೌ ಮಹಾದೇವಿ' ಎಂದು ಅಲ್ಲಮಪ್ರಭುವು ಮನಸಾರ ಹೊಗಳಿ ಹಾಡಿದನು. ಹೀಗಾದುದು ಗಿರಿಜೆಗೆ ಆನಂದವಲ್ಲವೇ?

ಅನಿಮಿಷರಿಂದ ದಿವ್ಯದೀಕ್ಷೆಯನ್ನು ಕೈಗೊಂಡ ಪ್ರಭುವು ಗೊಗ್ಗಯ್ಯನಿಗೆ ಉಪದೇಶವಿತ್ತು, ಮುಕ್ತಾಯಕ್ಕಗಳ ದುಃಖವನ್ನು ಶಮನಮಾಡಿ, ಸಿದ್ಧರಾಮನಿಗೆ ತತ್ತ್ವೋಪದೇಶವಿತ್ತು, ಬಸವರಾಜನಿಗೆ ಇಷ್ಟ-ಪ್ರಾಣ ಲಿಂಗಗಳ ಮರ್ಮವನ್ನು ಅರುಹಿ, ಮಹದೇವಿಗೆ ಮಾರ್ಗವ ತೋರಿ, ಭವದ ಭಕ್ತರನ್ನುದ್ಧರಿಸುವ ಸಲುವಾಗಿ ಕಲ್ಯಾಣದಿಂದ ನಿರ್ಗಮಿಸಿ, ಸಕಲ ಸಿದ್ಧಿಸಂಪನ್ನನಾದ ಗೋರಕ್ಷನನ್ನು ಕಂಡು, ಅವನ ಗರ್ವಹರಣವನ್ನು ಮಾಡಿದನು. "ಕಾಯ ಬಲಿದಡೆ ಮಾಯೆ ಬಲಿವುದು, ಮಾಯೆ ಬಲಿದಡೆ ಛಾಯೆ ಬಲಿವುದು, ಕಾಯ-ಮಾಯಾ-ಛಾಯೆ ಬಲಿದಡೆ ಸಿದ್ಧನು ಅವನಲ್ಲ. ಕಾಯ-ಮಾಯಾ-ಛಾಯೆದಾಗಿನ ದಾಯವನು ನೆರೆ ಕಳೆವನಾದಡೆ ರಾಯನಾತನು ಸಿದ್ಧರಲ್ಲಿ. ಗೋರಕ್ಷ!" ಎಂಬ ಪ್ರಭುವಿನ ಉಪದೇಶವನ್ನು ಕೇಳಿದ ಗೋರಕ್ಷನು ಕ್ಷಮೆ ಬೇಡಿ ಪ್ರಭುವಿನಂಘ್ರಿಯಲಿ ಕೈಮುಗಿದೆರಗಿದನು. ಮುಂದೆ ಬಂದು ಅರಣ್ಯದಲ್ಲಿದ್ದ ಮುನಿನಿಕರಕ್ಕೆ ಆತ್ಮಯಜ್ಞದ ಸ್ವರೂಪವನ್ನು ತಿಳುಹಿದನು. "ಲೇಪಿಸಿದ ಅಹಂಕಾರವೇ ಪಶು, ಯೂಪಕಂಭವೇ ಮನಸ್ಸು, ಪವನ ಸ್ಥಾಪಿತವೇ ಬಂಧಿಸುವ ಪಾಶ, ವಿವೇಕವೇ ಶಸ್ತ್ರ, ವ್ಯಾಪಿಸಿದ ಸುಜ್ಞಾನವೇ ವಹ್ನಿ, ಸದಾ ಪುನೀತಮಯು ಆತ್ಮಂ ಅಧ್ವರಿ" ಇದೇ ಆ ಆತ್ಮಯಜ್ಞ.

ಹೀಗೆ ಜಗವನ್ನು ಉದ್ಧರಿಸುತ್ತಾ, "ತಾನು ನಿರ್ಮಿಸಿರುವ ಶೂನ್ಯಸಿಂಹಾಸನವನ್ನು ತನ್ನ ಗುರುವು ಆಗಮಿಸಿ ಎಂದು ಆರೋಹಣಮಾಡಿ ತನ್ನನ್ನು ಪುನೀತನನ್ನಾಗಿಸುತ್ತಾನೋ" ಎಂದು ತನ್ನ ಆಗಮನವನ್ನೇ ನಿರೀಕ್ಷಿಸುತ್ತಿರುವ ಬಸವದಂಡೇಶನನ್ನು ಒರೆಹಚ್ಚುವ ಬಯಕೆಯಿಂದ, ಅಪಾರ ಲೀಲಾಮಯನಾದ ಪ್ರಭುವು ಬರುತ್ತಿರಲು, "ಕಪಟವೇಷಧಾರಿಯಾಗಿ ಬರುತ್ತಿರುವ ಈತನೇ ತನ್ನ ಗುರು"ವೆಂದು ನಿಶ್ಚೈಸಿ, ತನು ಪುಳಕಗೊಳ್ಳುತ್ತಿರಲು, ನಲವಿನಲಿ ಮೈಯಿಕ್ಕಿದನು ಬಸವಣ್ಣ ನಲ್ಲಮಲಿಂಗನಂಘ್ರಿಯಲಿ ಸಕಲ ಭಕ್ತವೃಂದ ಭೃಂಗವು ಆ ಮಹಾಮಹಿಮನ ಪಾದಾರವಿಂದ ಮಕರಂದದಲ್ಲಿ ತೇಲಾಡಿತು. ಬಸವರಾಜನ ಮಂದಿರಕ್ಕೆ ದಯಮಾಡಿದನು ಅಲ್ಲಮನು. ಜಗದ ಯಂತ್ರದ ಸೂತ್ರಧಾರಿಯಾದ ಈತನಿಗೆ ಹಗಲೇನು? ರಾತ್ರಿಯೇನು? ಎಲ್ಲವೂ ಒಂದೇ. ಆದರೆ ಇದನ್ನು ಅರಿಯರು ಲೋಕಜರು.

ಶೂನ್ಯಪೀಠದ ತಲೆಯ ಬಯಲಾಸನದಲ್ಲಿ ಅಮಲ ಬ್ರಹ್ಮ ನೆಲಸಿರಲು, ಬಸವನು ತಲ್ಲೀನನಾಗಿದ್ದಾನೆ. ನೆರೆದಿದ್ದ ಜಂಗಮಶ್ರೇಣಿಯು, "ಬಸವನಾದಡೆ ಇಂದ್ರಜಾಲದ ಹಸರಿಗೆಗೆ ಮರುಳಾದನು, ಆತನ ಗಸಣಿ ನಮಗೇಕೆ?" ಎನುತ ಎದ್ದು ಹೊರಟುಹೋಗಲು, ಮಹದಪಚಾರವಾಯ್ತೆಂದು ಮಮ್ಮಲ ಮರುಗಿದ ಜಂಗಮ ಪ್ರೇಮಿ ಬಸವಣ್ಣ. ಪ್ರಭುವಿಗೆ ಸ್ವಲ್ಪ ಕೆಣಕಬೇಕೆಂಬ ಆಸೆ. "ಬಡಜಂಗಮ ನಾವು ಬಂದರೆ, ನಮ್ಮನು ತೃಪ್ತಿಪಡಿಸದೆ ಏನು ಕಾರಣ ಚಿಂತಿಸುತಿರುವೆ ಬಸವಣ್ಣ?" ಎಂದರು ಪ್ರಭು. ಮತ್ತೂ ಮುಂದುವರಿದು, ಅಣ್ಣನ ಮನೋಸಂಶಯವನ್ನು ದೂರ ಮಾಡಬಯಸಿ, "ಲಕ್ಷದ ಮೇಲೆ ತೊಂಬತ್ತಾರುಸಾವಿರ ಜಂಗಮವು ಸಂತುಷ್ಟಿಪಡುವಂತೆ ತೋರುವೆನು, ಮೊದಲೆನ್ನ ಹಸಿವನ್ನು ದೂರಮಾಡಿಸು" ಎಂದು ಹೇಳಿದ ತಕ್ಷಣ, ಬಸವಣ್ಣನು, ಪನ್ನೀರಿನಲ್ಲಿ ಪ್ರಭುವಿನ ಪಾದಾರವಿಂದಗಳನ್ನು ತೊಳೆದು, ಮುತ್ತಿನಕ್ಷತೆಯಿಟ್ಟು, ಹೊಚ್ಚಹೊಸ ಹೂಗಳನ್ನು ಚೆಲ್ಲಿ, ಧೂಪ ಹಾಕಿ, ರತ್ನದೀಪ

ಚೆಳಗಿ ವಂದಿಸಿದನು. ಪ್ರಭುವಿಗೆ ಬಡಿಸುವ ಕಾರ್ಯ ವಾರಂಭವಾಯ್ತು.

"ಬಿಸಿಬಿಸಿಯ ಪರಿಪಾಕತೆಯ ಷಡುರಸಮಯಂಗಳ ಬೋನವನು ಗಡಣಿಸಿ ಸಮರ್ಪಿಸಿದನು ಬಸವಣ್ಣ". ಬಡಿಸಲು ಅಣ್ಣನಿಗೆ ಮಹಾ ಉತ್ಸಾಹ. ಕೊಪ್ಪರಿಗೆ ಕೊಪ್ಪರಿಗೆಗಳನ್ನೇ ಬಗ್ಗಿಸಿದರು. ಆಕಾಶಕ್ಕೇ ಉಣಬಡಿಸಿದಂತಾಯ್ತು. ಅದಕ್ಕೆ ಉಣಬಡಿಸತಕ್ಕವರಾದರೂ ಯಾರು ? ಮಾಡಿದ ಅಡಿಗೆಯೆಲ್ಲಾ ಮುಗಿಯಿತು "ದೇವರೇ ಹಸಿದು ಉಣುತಲಿಹನು, ಇನ್ನಾವ ಪರಿಯಲಿ ದಣಿಸುವನೋ?" ಎಂದು ಮನದೊಳಗೇ ಮರುಗಿದ ಬಸವಣ್ಣ. "ಆವ ಮುಖದಲಿ ಬಂದು ಬೇಡಿದಡೆ ಈವೆ ನಾಡಂಗೆ" ಎಂಬ ಭಕ್ತಿಯ ಸೇವೆಗೆ ಊಣೆಯವು ಈಗಲಾಯಿತು ಶಿವ ಮಹಾದೇವ" ಎಂದು ಒಂದೇ ಸಮನೆ ಚಿಂತಿಸಿದ ಅಣ್ಣ.

ವಸ್ತುಗಳ ಸಮರ್ಪಣೆ ಈ ಲೀಲಾಮೂರ್ತಿಗೆ ಬೇಡಿರಲಿಲ್ಲ. ತನ್ನನ್ನೇ ಸಮರ್ಪಿಸುವುದು, ಸಮರ್ಪಿಸಬೇಕಾದುದು ಅಣ್ಣನ ಧರ್ಮವಷ್ಟೆ ! ಮಡಿವಳದೇವ ಚನ್ನಬಸವಾದಿಗಳು, "ಒಡಲು ಮನಗಳನು ಒಡನೆ ಅರ್ಪಿಸಿ ಕಡೆಯ ಕಾಣಿಪುದು" ಎಂದು ಸಂದರ್ಭಾನುಗುಣವಾಗಿಯೇ ಎಚ್ಚರಿಸಿ ತನು-ಮನಗಳನ್ನು ಪ್ರಭುವಿನ ಪಾದಕ್ಕೆ ಈಡಾಡಲು ಹೇಳಿದರು. ತನುವಿನ ವ್ಯಾಮೋಹ ಅಣ್ಣನಿಂದ ದೂರ ಸರಿಯಿತು. ಕೂಡಲೇ, "ಹೊತ್ತು ಹೋಗದ ಮುನ್ನ ತನುವಿನ ತುತ್ತ ನೀಡುವೆ ಗುರುವಿಗೆ" ಎನುತಲಿ ಚಿತ್ತದಲಿ ಬಸವದಂಡೇಶನು ಹಾರೈಸುತ್ತಿರುವಲ್ಲಿ ಪ್ರಭುವು, "ನಾನು ಹಸಿದು ಬಂದವನಲ್ಲ, ಏನನ್ನೂ ಆಪೇಕ್ಷಿಸಿ ಬಂದವನಲ್ಲ, ನಾ ನಿನ್ನ ಹಸರಿಸಿದ "ದಾಸೋಹ"ತನವನು ("ನಾನು ನಿನ್ನ ದಾಸನೆಂಬ ಭಾವವನ್ನು") ಸಸಿನ ಮಾಡಲು ಬಂದೆನಲ್ಲದೆ, ಅಶನದಾಸೆಗಳು ಎನ್ನಲಿ ಉಂಟೇ?" ಎಂದು ಅಪ್ಪಣೆ ಕೊಡಿಸಿದಾಗ, ತಾನು ಮಾಡಿದೆನೆಂಬ ಅಹಂಕಾರದ ಅಣ್ಣನ ಮನದ "ಮಮಕಾರ" ಮಾಯವಾಯಿತು. ಕೂಡಲೇ ಗುರುವಿನ ಪಾದಪಂಕಜದಲ್ಲಿ ತನ್ನನ್ನು ಸಮರ್ಪಿಸಿಕೊಂಡನು. ಆಗ ಪ್ರಭುವಿಗಾದ ಆನಂದ ಅಪಾರ. ಆದರೂ ಅಣ್ಣನನ್ನು ಇನ್ನೂ ದಾರಿಗೆ ತರಲೋಸುಗ, ಪುನಃ, "ಬಸವ, ಹೋಗು, ಹಸಿದಿರುವ ಜಂಗಮರನ್ನು ಕರೆದು ತಾ," ಎನ್ನಲು : ಕರೆಯಲು ಹೋದರೆ, "ನಿನ್ನ ಗುರುಗಳ ಮಹಿಮೆಯೋ ಮೇಣ್, ನಿನ್ನ ಮಹಿಮೆಯೋ, ನಿನ್ನ ಗುರುವಾರೋಗಿಸಲು, ನಮಗೆಲ್ಲ ಹಸಿವು ಹಿಂಗಿತು" ಎಂದರು. "ಗುರುವಿಗೊರೆದ ಸುಗಂಧಲೇಪನ, ಗುರುವಗಿಟ್ಟ ಅಕ್ಷತೆ, ಗುರುವಿಗಿಕ್ಕಿದ ಪುಷ್ಪಮಾಲೆಗಳು ಐದೆ ಜಂಗಮಕೆ ಭರಿತವಾಗಿದೆ," ಬಸವಣ್ಣನು, "ಅಭೇದವ ಕರಣದಲಿ ನೆರೆ ಕಂಡು," ಗುರುವಲ್ಲಿಗೆ ಧಾವಿಸಿ, ಅವನ ಪದತಲದಲ್ಲಿ ಶರಣೆಂದು ಮಲಗಿದ.

ಅಲ್ಲಮನ ಪ್ರಭಾವ ಎಲ್ಲರಿಗೂ ತಿಳಿದಾಯ್ತು. ಅಂಗವನ್ನು ಲಿಂಗವಾಗಿಸಿ, ಲೀಲಾಮಯನೆನಿಸಿದ ಅಲ್ಲಮನ ಸಹಜ ನಿಲುವನ್ನು ಅರಿಯುವುದು ದುಸ್ತರವಲ್ಲವೇ ? ಈ ವಿಧದ ಲೀಲಾಮೂರ್ತಿಯಾಗಿದ್ದರೂ ಸಹ ಪ್ರಭುವು, "ನನ್ನನೇತಕೆ ರಟ್ಟುಮಾಡಿದೆ? ನಿನ್ನ ಕತದಿಂದಾದೆನಲ್ಲದ. ಮುನ್ನ ನಾನೆಂದೆಂಬ ವಾಸನೆ ಎನ್ನಲುಂಟೇ?" ಎಂದು ಹೇಳುತ್ತಾರೆ. ತನ್ನ ತಾನರಿದು ಮಹಾ ಮಹಿಮನೆನಿಸಿದ ಪ್ರಭುವು, ತಾನು ಹೀಗಾದುದು ನಿನ್ನಿಂದಲೇ ಎಂದು ಅಣ್ಣನನ್ನು ಕುರಿತು ಹೇಳುವಲ್ಲಿ, ಪ್ರಭುವಿನ "ಇದ್ದೂ ಇಲ್ಲದಿರುವಿಕೆ"ಯ ಕುರುಹು "ಅಲ್ಲಮ"ನೆಂಬ ಸಾರ್ಥಕವಾದ ಹೆಸರಿನಿಂದಲೇ ತಿಳಿಯುತ್ತದೆಂಬುದು ಯಾರಿಗೆ ತಾನೆ ಹೊಳೆಯದು ? ಭಕ್ತಿಯಿಂದ ತನ್ನ ಒಡಲನ್ನೇ ಪರಮಾತ್ಮನಿಗೆ ಅರ್ಪಿಸಿದಾಗಲೇ ನಿಜವಾದ "ದಾಸೋಹ"ವೆಂಬ ಅರ್ಥವನ್ನು ಎಲ್ಲರೂ ಮನಗಂಡರು. ನಾವೂ ಮನಗಂಡೆವು.

ಹೀಗೆ ದಯಾಮಯನಾದ ಗುಹೇಶ್ವರಲಿಂಗಗುರುರಾಯನು, ಮರದ ಬುಡಕ್ಕೆ ನೀರೆರೆದರೆ ಶಾಖೋಪಶಾಖೆಗಳಿಗೆಲ್ಲ ಸಾರವು ಸರಿವಂತೆ, ಲಿಂಗದ ಮುಖವೇ ಜಂಗಮವೆಂಬ ತತ್ತ್ವವನ್ನು ಬಿತ್ತರಿಸಿ, ಎಮ್ಮ ಬಸವನ ಕಾರಣದಲಿ ಎಲ್ಲರಿಗೆ ತನ್ನಯ ಸಾರ ನಿತ್ಯಾನಂದ ಪದವಿಯನು ಇತ್ತ.

ಇಲ್ಲಿ ವಿವೇಚಿಸಬೇಕಾದ ಒಂದಂಶವಿದೆ—ಇದ್ದೂ ಇಲ್ಲದಂತಿರುವುದು ಮಹಾ ಜ್ಞಾನಿಯ ಲಕ್ಷಣ. ಕಾಯವಿದ್ದೂ ಕಾಯವಿಲ್ಲದಿರುವಿಕೆಯೇ ಆತನ ಮರ್ಮ. ಸ್ವಯಂಜ್ಯೋತಿಯಾಗಿ, ತನ್ನನ್ನು ಮುಟ್ಟಿದ ಹಣತೆಗಳನ್ನು ಜ್ಯೋತಿಯನ್ನಾಗಿಸುವುದೇ ಆತನ ಧರ್ಮ.

ಇದೇ ನಮ್ಮ ಅಲ್ಲಮನ ನಿಲುವು. ''ಅಲ್ಲ"ವೆಂದರೆ ''ಶೂನ್ಯ"ವೆಂದರ್ಥ. ''ಶೂನ್ಯ"ವೆಂದರೆ ''ಅಲ್ಲಮ". ಈ ''ಅಲ್ಲಮತ್ವ" (ಶೂನ್ಯತ್ವ) ಸಂಪಾದನೆಯೇ ''ಶೂನ್ಯ ಸಂಪಾದನೆ" ಅಥವಾ ಬ್ರಹ್ಮತ್ವ ಪ್ರಾಪ್ತಿ, ಅಥವಾ ಶಿವಜೀವೈಕ್ಯ. ಈ ಶೂನ್ಯ ಸಂಪಾದನೆಯೇ ವೀರಶೈವದ ಮುಖ್ಯಧ್ಯೇಯ. ಇದರ ಪ್ರಾಪ್ತಿಗೆ ನಿರ್ಮಲವಾದ ಭಕ್ತಿ ಮತ್ತು ಜ್ಞಾನಗಳು ಅತ್ಯವಶ್ಯವೆಂಬುದನ್ನು ಅಲ್ಲಮನ ಈ ಲೀಲೆಯಿಂದ ನಾವು ಅರಿತೆವು.

ಕಾಯಕವೇ ಕೈಲಾಸವೆಂದು ನಂಬಿದ್ದ ಅಣ್ಣನು, ನಿಷ್ಕಾಮಕರ್ಮದಿಂದ, ನಿರ್ಮಲಜ್ಞಾನದಿಂದ ಮತ್ತು ಅಖಂಡವೂ ನಿಶ್ಚಲವೂ ಆದ ಭಕ್ತಿಯಿಂದ ಸರ್ವಜೀವದ "ಅಲ್ಲಮತ್ವ" ಪ್ರಾಪ್ತಿಗೆ ಹೇಗೆ ಕಾರಣನೆಂಬುದು ಈಗ ಪ್ರತ್ಯಕ್ಷ ಸಿದ್ಧವಾಯ್ತು. ಇಂತಹ ನಿಷ್ಕಾಮಕರ್ಮ-ಜ್ಞಾನ-ಮತ್ತು ದೃಢಭಕ್ತಿಗಳ ಸಮಾಗಮವುಳ್ಳವನು ಅತಿ ಜಾಗ್ರತೆ ಶಿವಪದಕ್ಕೆ ಅರ್ಹನೆಂಬುದು ಸಿದ್ಧ. ಇಂತಹ ಮಾರ್ಗದರ್ಶನಕ್ಕೆ ಸದ್ಗುರುವೋರ್ವನ ಆವಶ್ಯಕತೆ ಇದೆಯಷ್ಟೆ. ಆ ಗುರುಪಟ್ಟವು ಅಲ್ಲಮಪ್ರಭುವಿಗಲ್ಲದೆ ಮತ್ತಾರಿಗೆ ಸಲ್ಲಬೇಕು? ಅಂತೆಯೇ ಅಣ್ಣನು ನಿರ್ಮಿಸಿದ್ದ ''ಶೂನ್ಯಸಿಂಹಾಸನ"ವನ್ನು ಪ್ರಭುವು ಆರೋಹಣಮಾಡಿ, ''ನಿರಂಜನ ಗುರುವರ"ನೆನಿಸಲಿಲ್ಲವೇ ?

ಈ ಪ್ರಭುರಾಯನ ಈ ಲೀಲೆಯು ಎಲ್ಲರಿಗೆ ಅನುದಿನವು ಕರುಣದಿಂದಲಿ ವರದವಾಗಲಿ.

ಓಂ ತತ್ ಸತ್



# ಪುನಃ ಬಂದ ಪುತ್ರ

ನಾ ಟ ಕ

[ರವೀಂದ್ರನಾಥ ಠಾಕೂರರ "The Child's Return ಎಂಬ ಕಥೆಯ ಆಧಾರ]

ಲೇಖಕರು :

## -ಟಿ.ವಿ. ಮುತ್ತಾಚಾರ್ಯ

ಪಾತ್ರವರ್ಗ :

1. ರಾಯಚರಣ :

   ಒಬ್ಬ ಸೇವಕ, ಕಾಯಸ್ಥ ಬ್ರಾಹ್ಮಣ, ಉದ್ದನೆಯ ತಲೆ ಕೂದಲು, ದೊಡ್ಡ ಕಣ್ಣು ಆಕರ್ಷಕ ವ್ಯಕ್ತಿ, ಬಂಗಲೆ ಯಜಮಾನರ ಮನೆಯಲ್ಲಿ ಮಗುವನ್ನಾಡಿಸುವುದು ಇವನ ಕೆಲಸ. ವಯಸ್ಸು ಮೂವತ್ತು.

2. ಬಂಗಲೆಯ ಯಜಮಾನರು—
   ವಯಸ್ಸು 43-50. ಅನುಕೂಲ ಬಾಬುವಿನ ತಂದೆ.

3. ಬಂಗಲೆಯ ಯಜಮಾನಿ—
   ಬಂಗಲೆಯ ಯಜಮಾನರ ಪತ್ನಿ ವಯಸ್ಸು 40.

4. ಅನುಕೂಲಬಾಬು—
   ಯಜಮಾನರ ಮಗ. ರಾಯಚರಣನ ಮರಿಯಜಮಾನ, ವಯಸ್ಸು 20.

5. ಚಂದ್ರಿಕಾ—

   ಅನುಕೂಲ ಬಾಬುವಿನ ಪತ್ನಿ. ವಯಸ್ಸು 18.

6. ವೈದ್ಯ.

### ದೃಶ್ಯ—1.

(ಒಂದು ಬಂಗಲೆ. ಬಂಗಲೆ ಯಜಮಾನರು ತಮ್ಮ ಪತ್ನಿಯೊಡನೆ ಮಾತನಾಡುತ್ತ ಕುಳಿತಿರುವರು. ಕುರ್ಚಿ ಮೇಜು ಸೋಫಗಳು ಬಂಗಲೆಯ ವೈಭವವನ್ನು ಸಾರುತ್ತಿವೆ. ರಾಯಚರಣ ಮನೆಯ ಕಸಗುಡಿಸಿ ಕುರ್ಚಿ ಮೇಜುಗಳ ದೂಳು ಕೊಡವುತ್ತಿರುವನು.)

ಯಜಮಾನಿ — ಏನಪ್ಪಾ ರಾ ಯ ಚ ರ ಣಾ, ನೀನೊಂದರಗಳಿಗೆಯೂ ವಿಶ್ರಾಂತಿ ತೆಗೆದುಕೊಳ್ಳದೆ ನಮ್ಮ ಮನೆಕೆಲಸಮಾಡುವುದರಲ್ಲಿಯೇ ಕಾಲಕಳೆಯುವೆಯಲ್ಲಾ, ನಿನಗೆ ಬೇಸರವೇ ಆಗುವುದಿಲ್ಲವೆ?

ರಾಯ — ಅವ್ವಾ, ದಣಿಗಳ ಸೇವೆಗಾಗಿಯೇ ನನ್ನ ಬಾಳು ಮೀಸಲಾಗಿರುವಾಗ ನನಗೇಕೆ ಬೇಸರ?

ಯಜಮಾನ — ದಣಿವನ್ನೂ ಲೆಕ್ಕಿಸದೆ ದಣಿಗಳ ಸೇವೆ ಮಾಡಬೇಕೆ ರಾಯಚರಣಾ; ನಮ್ಮ ಮನೆಯನ್ನು ಯಾವಾಗಲೂ ಕನ್ನಡಿಯ ಹಾಗೆಯೇ ಸ್ವಚ್ಛವಾಗಿಟ್ಟಿರುವೆ. ಸ್ವಚ್ಛವಾಗಿದ್ದರೂ ಮತ್ತೆ ಸ್ವಚ್ಛಮಾಡುವೆ.

ರಾಯ — ಹೌದು ಬುದ್ಧಿ, ಮನ ಸ್ವಚ್ಛವಾಗಿರುವ ದಣಿಯ ಮನೆಯೂ ಸ್ವಚ್ಛವಾಗಿರಬೇಡವೆ? ತಮ್ಮಂತಹ ದಣಿಗಳ ಮನೆಯಲ್ಲಿ ಕೆಲಸಮಾಡುವನಿಗೆ ದಣಿವಾದರೂ ಎಲ್ಲಿಂದ ಬರಬೇಕು? ಆಳು ಯಾವಾಗಲೂ ಆಳಾಗಿರಬೇಕು ಸ್ವಾಮಿ.

ಯಜಮಾನಿ — ರಾ ಯ ಚ ರ ಣಾ, ನಿನ್ನನ್ನು ನಾವು ಆಳು ಎನ್ನಬಾರದು ನೋಡು.

ರಾಯ — ಅದೇಕೆ ತಾಯಿ ?

ಯಜಮಾನಿ — ನೀನು ನಮ್ಮ ಮನೆಗೆ ಚಿಕ್ಕಂದಿನಲ್ಲೇ ಬಂದು ಬಿಟ್ಟೆ. ಆಗ ನಿನಗಿನ್ನೂ ವಯಸ್ಸು ಹನ್ನೆರಡು.

ರಾಯ — ಅ ಹು ದ ಪ್ಪಾ, ನಾನು ನಿಮ್ಮ ಮನೆಯ ಮಗನೇ ಆಗಿ ಬೆಳೆದುದು ನನ್ನ ಭಾಗ್ಯ.

ಯಜಮಾನ — ಅಂದಮೇಲೆ ನೀನು ನಮ್ಮ ಮನೆಯ ಆಳಲ್ಲವೇ ಅಲ್ಲ !

ರಾಯ — ಮತ್ತೇನು ?

ಯಜಮಾನಿ — ನಮ್ಮ ಕುಟುಂಬದಲ್ಲಿ ನೀನೂ ಒಬ್ಬ. ನಮ್ಮ ಮಗ ಅನುಕೂಲನನ್ನು ಚಿಕ್ಕಂದಿನಿಂದ ಎತ್ತಿಕೊಂಡು ಆಡಿಸಿದೆ, ಬೆಳಸಿದೆ, ನಮ್ಮ ಮನೆಕೆಲಸವನ್ನು ಗೊಣಗದೆ ಮಾಡುತ್ತಿರುವೆ. ನಿನ್ನನ್ನು ಆಳು ಎನ್ನಲು ನಮಗೆ ನಾಲಗೆ ಬರುವುದೆ ?

ರಾಯ — ಇದೇನು ತಾಯಿ. ನನ್ನ ವಿಚಾರದಲ್ಲಿ ಇಷ್ಟು ದೊಡ್ಡ ಮಾತುಗಳು ! ನಿಮ್ಮ ಉಪ್ಪಿನ ಋಣವನ್ನು ನಾನೆಷ್ಟು ಸೇ ವೆ ಮಾ ಡಿ ದ ರೆ ತೀರಿಸಬಲ್ಲೆನು ತಾಯಿ. ಹೊಗಳದಿರಿ.

ಯಜಮಾನ — ಇದು ಹೊಗಳಿಕೆಯಲ್ಲ ಚರಣ್. ನೀನು ನಮ್ಮ ಮನೆಗೆ ಕಾಲಿಟ್ಟಗಳಿಗೆ, ನಮ್ಮ ಅನುಕೂಲನಿಗೆ ಎಲ್ಲವೂ ಅನುಕೂಲವಾಗಿಯೇ ಪರಿಣಮಿಸಿದೆ. ನೀನೆತ್ತಿ ಆಡಿಸಿ ಸಾಕಿದ ಮಗು ಅನುಕೂಲ ಶಾಲಾ ಕಾಲೇಜುಗಳಲ್ಲಿ ಓದಿಮುಗಿಸಿ ಪದವೀಧರನಾದ. ಇದೇ ಜಿಲ್ಲೆಯ ಮುನಿಸೀಫನೂ ಆದ. ಇದೆಲ್ಲಾ ನೀನು ಅವನನ್ನು ಚೆನ್ನಾಗಿ ನೋಡಿಕೊಂಡುದರ ಫಲವೇ ಅಲ್ಲವೇ ?

ರಾಯ — ಅದೆಲ್ಲಾ ತಾವು ಮಾಡಿದ ಪೂಜಾಫಲ ದಣಿ. ನಾನೆಷ್ಟರವನು. ನಾನು ನಿಮ್ಮ ಮನೆಯ ಸೇವಕ ಅಷ್ಟೆ.

ಯಜಮಾನಿ — ರಾಯ ಚರಣ್. ತೆಗೆದುಕೋ ಈ ಹೊಸ ಪಂಚೆ- ಅಂಗಿ ಇವನ್ನು ಧರಿಸಿಕೊ.

ರಾಯ — ಇವು ನನಗೇಕೆ ತಾಯಿ ? ಹಿಂದೆ ಕೊಟ್ಟ ಬಟ್ಟೆ ಬರೆಗಳು ಇನ್ನೂ ಒಂದು ವರ್ಷಕ್ಕಾಗುವಷ್ಟಿದೆ. ಈಗೇಕೆ ಇವು ?

ಯಜಮಾನ — ಈದಿನದ ಈ ವ ಸ್ತ್ರ ದಾ ನ ಕ್ಕೆ ಒಂದು ವಿಶೇಷ ಕಾರಣವಿದೆ, ತೆಗೆದುಕೊ.

ರಾಯ — ಏನು ಸ್ವಾಮಿ ?

ಯಜಮಾನ — ನಮ್ಮ ಮಗ ಅನುಕೂಲಬಾಬು ಮುನ್ಸೀಫ್ ಆದುದರ ಸಂತೋಷಾರ್ಥ ಈ ವಸ್ತ್ರದಾನ. ಇವನ್ನು ಧರಿಸು. ತೆಗೆದುಕೊ ಈ ಸಿಹಿ ತಿಂಡಿ.

ರಾಯ — ತಮ್ಮ ಚಿತ್ತ (ಸ್ವೀಕರಿಸುವನು) ಮಹಾಪ್ರಸಾದ—ಮಹಾದಾನ

ನೀನೂ ನಮ್ಮ ಹಾಗೆಯೇ ಕಾಯಸ್ಥ ಬ್ರಾಹ್ಮಣ. ಸಂತೋಷಕಾಲದಲ್ಲಿಸತ್ ಪಾತ್ರ ದಾನವುಮಹಾದಾನವೇ ಅಲ್ಲವೇ ?

ರಾಯ — ಧನ್ಯನಾದೆ ದಣಿ.

ಯಜಮಾನಿ — ಅದಿರಲಿ ರಾಯಚರಣಾ, ನಿನ್ನ ಮದುವೆಯ ವಿಷಯ ಏನಾಯಿತು ?

ರಾಯ — ಅಪ್ಪಾ, ತಾವು ನನ್ನನ್ನು ಮದುವೆಯಾಗು ಎಂದರೆ ಆಗುವೆನು. ಬೇಡವೆಂದರೆ ಬೇಡ ಅಷ್ಟೆ,

ಯಜಮಾನಿ — ಸಂತೋಷ. ಮದುವೆಯಾಗಿ ಬಾ ಹೋಗು. ಏನೂಂದ್ರೆ, ರಾಯಚರಣನಿಗೆ ಮದುವೆಗಾಗಿ ಸ್ವಲ್ಪ ಹಣಕೊಡಿ.

ಯಜಮಾನ — ಆಗಲಿ, ಇದೋ ಈಗಲೆ ಹಣ ಕೊಡುವೆ. ತೆಗೆದುಕೋ ಚರಣ್, (ಕೊಡುವನು.) ಮದುವೆ ಮುಗಿಸಿಕೊಂಡು ಬೇಗ ಬಾ.

ಯಜಮಾನಿ — ಅಹುದಪ್ಪಾ, ಬೇಗನೆ ಬಂದು ಬಿಡಬೇಕು. ನನ್ನ ಸೊಸೆ ಇನ್ನೇನೂ ಇಷ್ಟರಲ್ಲೇ ಮಗುವಿನ ತಾಯಾಗಲಿದ್ದಾಳೆ. ಆ ಮಗುವನ್ನೂ ನೋಡಿಕೊಳ್ಳುವವನೂ ನೀನೇ ? ತಿಳಿಯಿತೆ ?

ರಾಯ — ಅಪ್ಪಣೆ ತಾಯಿ. ಅನುಕೂಲಬಾಬುಗಳ ಸೇವಾಭಾಗ್ಯವೂ ನನಗೆ ಸಿಕ್ಕಲಿ, ಅದು ನನ್ನ ಪುಣ್ಯ ನಾನಿನ್ನು ಹೋಗಿಬರಲೆ ?

ಇಬ್ಬರೂ — ಹೂಂ.

ರಾಯ — ಚಿಕ್ಕತಾಯಿಯವರ ಕೈಲಿ ಹೆಚ್ಚು ಕೆಲಸಮಾಡಿಸ ಕೂಡದು. ಬೇಗ ಬಂದುಬಿಡುವೆ?

## ದೃಶ್ಯ ೨

(ಬಂಗಲೆ ಯಜಮಾನರ ಮನೆ. ಅನುಕೂಲ ಬಾಬು, ಅವನ ಪತ್ನಿ ಚಂದ್ರಿಕಾ ಹಾಗೂ ಅವರ ಕೈ ಕೂಸು.—ಇವರ ಪ್ರವೇಶ.)

ಅನುಕೂಲ — ಅಪ್ಪಾ, ಅಪ್ಪಾ! ಅಮ್ಮಾ!. (ಒಳಗೆ ಯಾರದು ?) ನಾನಪ್ಪಾ ಅನುಕೂಲ, ನಿನ್ನ ಸೊಸೆ ಚಂದ್ರಿಕಾ. ಇಬ್ಬರೂ ಬಂದಿದ್ದೇವೆ (ತಾಯಿ ತಂದೆಗಳು ಬರುವರು) (ಇಬ್ಬರೂ ನಮಸ್ಕರಿಸುವರು)

ತಾಯಿ ತಂದೆಗಳು — ಆಯುಷ್ಯವಂತರಾಗಿ ಬಾಳಿರಿ.

ಯಜಮಾನ — ಅತ್ತೆಮಾವಂದಿರಮನೆ ಇಷ್ಟು ಬೇಗ ಬಿಟ್ಟು ಬಿಟ್ಟಿತೇ ಅನುಕೂಲ ?

ಅನು — ಇನ್ನಷ್ಟು ದಿನ ಇದ್ದುಹೋಗಿ ಎಂದರಪ್ಪಾ, ಆದರೂ ಬಂದುಬಿಟ್ಟೆವು.

ಯಜಮಾನಿ — ಅಲ್ಲಿ ಎಲ್ಲರೂ ಆರೋಗ್ಯವಾಗಿರುವರೆ, ಚಂದ್ರಿಕಾ ?

ಚಂದ್ರಿಕಾ — ಎಲ್ಲಾ ಚೆನ್ನಾಗಿರುವರು ಅತ್ತೆ.

ಇಬ್ಬರೂ — ಸಂತೋಷ.

ಯಜಮಾನ — ಇವನನ್ನು ನೋಡೇ! ನಿನ್ನ ಮೊಮ್ಮಗ!

ಯಜಮಾನಿ — (ಎತ್ತಿಕೊಂಡು ಮುತ್ತಿಟ್ಟು) ಲೇ ತುಂಟಾ, ನಗುತ್ತಿರುವೆಯಾ? ನಿಮ್ಮ ಅಜ್ಜಿ, ತಾತ ನಿನ್ನನ್ನು ಇಷ್ಟು ಬೇಗ ಕಳುಹಿಸಿದರೆ ನಿನ್ನನ್ನು ? (ಯಜಮಾನನೂ ಎತ್ತಿ ಮುದ್ದಾಡುವನು)

ಯಜಮಾನ — ಎಲ್ಲಾ ನಿನ್ನ ಮಗನ ಹಾಗೆಯೇ ಇದ್ದಾನೆ ಕಣೆ!

ಯಜಮಾನಿ — ಏನಿಲ್ಲ. ನಿಮ್ಮ ಸೊಸೆಯ ಹಾಗೆಯೇ ಇದ್ದಾನೆ.

ಯಜಮಾನ — ಊಹೂಂ, ಅನುಕೂಲನ ಹಾಗೇ ಇರುವುದು.

ಯಜಮಾನಿ — ಹಾಗೇನಿಲ್ಲ ಚೆನ್ನಾಗಿ ನೋಡೀಂದ್ರೆ.

ಅನು— ಏಕಮ್ಮಾ ಹೀಗೇಕೆ ಕಿತ್ತಾಡುತ್ತಿದ್ದೀರಿ. ನನ್ನ ಹಾಗೂ ಇಲ್ಲ ಇವಳ ಹಾಗೂ ಇಲ್ಲ, ನಿನ್ನ ಹಾಗೇ ಇದ್ದಾನೆ ಅಂದರು ನನ್ನ ಅತ್ತೆ.

ಯಜಮಾನಿ— ಬಿಡು ನಿಮ್ಮ ಅತ್ತೆಗೇನು ಗೊತ್ತಾಗುತ್ತೆ. ಈಗ ನಮ್ಮ ರಾಯಚರಣ ಇದ್ದಿದ್ದರೆ ಯಾರಹಾಗಿದ್ದಾನೆಂಬುದನ್ನು ಕೂಡಲೇ ಹೇಳಿಬಿಡುತ್ತಿದ್ದ. ಮದುವೆ ಮಾಡಿಕೊಂಡು ಬರಲು ಹೋದವನು ಇನ್ನೂ ಬರಲೇ ಇಲ್ಲ.

ಯಜಮಾನ—ಹೊಸದಂಪತಿಗಳು ಎರಡು ದಿವಸ ಸಂತೋಷವಾಗಿರಬೇಡವೇನೆ? ಅವನು ಬಂದಮೇಲೆ ಇದ್ದೇ ಇದೆ ನಮ್ಮ ಮನೆಯ ಕೆಲಸ. ನಿಧಾನವಾಗಿ ಬರಲಿ ಬಿಡು.

(ರಾಯಚರಣ ಬರುವನು)

ರಾಯ—ನಿಮ್ಮ ಸೇವಕ ನಾನಲ್ಲದೆ ಈ ಮನೆ ಕೆಲಸಮಾಡಲು ಇನ್ನಾರಿದ್ದಾರೆ.

ಚಂದ್ರಿಕಾ—ಅದೋ ರಾಯಚರಣ, ನೆನಸಿಕೊಳ್ಳುತ್ತಿದ್ದ ಹಾಗೇ ಬಂದ.

ರಾಯ—ಹೌದಮ್ಮಾ ಚಂದ್ರಿಕಾ ಬಂದೆ, ನಿಮ್ಮ ಸೇವೆಗೆ.

ಅನು—ಏನು ರಾಯಚರಣಾ, ಮದುವೆಗೆ ಹೋದವನು ಇಷ್ಟು ಬೇಗ ಬರುವುದೇ?

ರಾಯ—ಇನ್ನೇನು ಮಾಡಲಿ ಮರಿದಣಿ? ಅವಳ ಹತ್ತಿರ ಹರಟೆ ಹೊಡೆಯುವುದು ಎಷ್ಟು ದಿವಸ?

ಚಂದ್ರಿಕಾ— ಅದಿರಲಿ, ನಿನ್ನ ಹೆಂಡತಿಯೆಲ್ಲಿ ? ಕರೆದುಕೊಂಡು ಬರಲಿಲ್ಲವೆ?

ರಾಯ—ಇದೀಗ ಸರಿಹೋಯಿತು. ನನ್ನ ಹೆಂಡತಿಯನ್ನು ಇಲ್ಲಿಗೆ ಕರೆದುಕೊಂಡು ಬಂದು ಇಲ್ಲಿ ಸಂಸಾರ ಹೂಡಿದರೆ ನಿಮ್ಮ ಮನೆ ಕೆಲಸದ ಗತಿ ಏನು ತಾಯಿ? ನನಗೆ ಹೊಟ್ಟೆಗೆ ಬಟ್ಟೆಗೆ ಕೊಡುವುದು ಸಾಲದೆ? ಅವಳಿಗೂ.....

ಚಂದ್ರಿಕಾ -- ಕೆಲಸಮಾಡಿಕೊಂಡು ಒಂದು ತುತ್ತು ಅನ್ನ ತಿಂದು ಕಾಲಹಾಕುತ್ತಿದ್ದಳು. ಇದೇನು ಮಹಾ _

ರಾಯ—ಈ ಮನೆಯಲ್ಲಿ ಯಾವ ಮಹಾ ದೊಡ್ಡ ಕೆಲಸವಿದೆ ಅಮ್ಮಾ ಅವರೆ? ಸುಮ್ಮನೆ ಅವಳಿಗೇಕೆ ದಂಡದ ಕೂಳು ಬಿಡಿ, ಆದಿರಲಿ, ಎಲ್ಲಾ ನನ್ನ ಮಾತೇ ಆಗಿಹೋಯಿತು. ನನ್ನ ಪುರಾಣವೇ ಆಯಿತು. ಚಂದ್ರಿಕವ್ವ. ಅನುಕೂಲಬಾಬುಗಳು ಮಗುವಿನ ಸಮೇತ ಈಗತಾನೆ ಅತ್ತೆಯ ಮನೆಯಿಂದ ಇಳಿದಿರುವ ಹಾಗಿದೆ!

ಯಜಮಾನಿ- ಅಹುದು ರಾಯಚರಣಾ, ಈಗ ತಾನೇ ಬಂದರು. ಈ ಮಗು ಯಾರಹಾಗಿದೆ ಹೇಳು.

ಅನು-ಹೇಳಪ್ಪಾ ಚರಣಾ, ಅಪ್ಪನಿಗೂ ಅಮ್ಮನಿಗೂ ಈ ವಿಚಾರದಲ್ಲಿ ದೊಡ್ಡ ಜಗಳವೇ ನಡೆದು ಹೋಯಿತು. ನೀನು ತೀರ್ಪು ಕೊಡು ಮಗು ಯಾರ ಹಾಗಿದೆ?

ರಾಯ — (ಮಗು ಎತ್ತಿಕೊಂಡು ಚೆನ್ನಾಗಿ ನೋಡಿ) ಬಾ ನನ್ನ ಗಿಣಿ, ಮುದ್ದಿನರಗಿಣಿ, ಚಿನ್ನದ ಗಣಿ, ರನ್ನದ ಮಣಿ, ನೀನು ಯಾರಹಾಗಿದ್ದೀಯೆ? ಓಹೋಹೋ ನಿನ್ನ ಮೂಗು ನಿನ್ನ ತಾತನ ಹಾಗೆ, ನಿಮ್ಮತಾಯಿಯ ಹಾಗೆ, ಬಣ್ಣ ನಿಮ್ಮ ತಂದೆಯದೇ. ಒಟ್ಟಿನಲ್ಲಿ ನಿನ್ನ ಆಕಾರವೆಲ್ಲಾ ಇವರೆಲ್ಲರ ಹಾಗೇ ಇದೆ.

ಚಂದ್ರಿಕಾ—ಇದೀಗ ಸರಿಯಾದ ತೀರ್ಪು. (ಎಲ್ಲರೂ ನಗುವರು)

ರಾಯ—ಈಗ ಒಳಗೆ ಹೋಗಿ ದಣಿದುಬಂದ ನಿಮಗೆ ಟೀ ಮಾಡಿ ತರುವೆ ಸ್ವಲ್ಪ ತಡೆಯಿರಿ.(ಹೋಗುವನು)

ಯಜಮಾನಿ—ಟೀ ಮಾಡಿಪ್ಪೇ ಇದೆ ರಾಯಚರಣ, ತೆಗೆದುಕೊಂಡುಬಾ. (ಮಗುವನ್ನು ಕೆಳಗೆ ಬಿಡುವರು. ಅದು ಅಂಬೆಗಾಲಿಡುತ್ತಾ, ರಾಯಚರಣ ಹೋದಕಡೆ ಹೋಗುವುದು).

ಅನು—ನೋಡಿ ನೋಡಿ, ಮಗು ನಮ್ಮ ನವಕುಮಾರ ಎಷ್ಟು ಬೇಗ ರಾಯಚರಣನನ್ನು ಹೊಂದಿಕೊಂಡಿದ್ದಾನೆ. ಅವನು ಹೋದ ಕಡೆಗೆ ಹೋಗುತ್ತಿರುವನಲ್ಲಾ.

ಯಜಮಾನಿ— ಅನುಕೂಲಬಾಬೂ, ನೀನೂ ಅವನ ತೋಳುಗಳ ಮೇಲೆ ನಲಿದು ಬೆಳೆದನಲ್ಲವೆ? ಮಕ್ಕಳೆಂದರೆ, ಅವನಿಗೆಷ್ಟು ಮಮತೆ! (ಮಗುವನ್ನೆತ್ತಿಕೊಂಡು)ರಾಯಚರಣ ಬೇಗ ಬಾ ಮಗುವನ್ನೆತ್ತಿಕೋ.

ರಾಯ—(ಬಂದು) ತೆಗೆದುಕೊಳ್ಳಿ ಟೀ, ಎಲ್ಲರೂ ತೆಗೆದುಕೊಳ್ಳುವರು)

ಬಾ ಮರಿ ಇದೋ ಸೇಬು, ಬಿಸ್ಕತ್ತು. ಕೊಡುವನು, ಮಗುವನ್ನೆತ್ತಿಕೊಂಡು ಬಿಡುಗಣ್ಣಿಂದ ನೋಡುವನು.)

ಚಂದ್ರಿಕಾ — ಇವೇನು ಚರಣಾ, ಹೀಗೆ ನೋಡುವನು.)

ಚರಣ—ಈ ಮಗುವಿನ ಮುಖಲಕ್ಷಣಗಳನ್ನು ನೋಡುತ್ತಿರುವೆನು ತಾಯಿ. ಈ ಮಗು ಸಾಧಾರಣ ಮಗುವಲ್ಲ. ಇವನು ತಂದೆಗಿಂತಲೂ ಹೆಚ್ಚು ಚುರುಕಾಗಿ ಬೆಳೆಯುತ್ತಾನೆ. ಹೆಚ್ಚು ಓದುತ್ತಾನೆ. ಹೆಚ್ಚು ಸಂಬಳ ತರುತ್ತಾನೆ.

ಅನು—ಓಹೋಹೊ, ದೊಡ್ಡ ಜೋಯಿಸನೇ ಆಗಿರುವೆಯಲ್ಲಾ. ದೊಡ್ಡ ಭಾಷಣವನ್ನೇ ಪ್ರಾರಂಬಿಸಿಬಿಟ್ಟೆ.

ರಾಯ—ಇದು ಕೇವಲ ಭಾಷಣವಲ್ಲ ದಣಿ. ಇವನು ಮುಂದೆ ದೊಡ್ಡ ಜಡ್ಜ್ ಆಗಿ ತಿಂಗಳಿಗೆ ಐದು ಸಾವಿರ ರೂಪಾಯಿ ಸಂಬಳ ತರುವುದನ್ನು ನೀವೇ ನೋಡುವಿರಿ.

ಯಜಮಾನಿ—ನಿನ್ನ ನುಡಿ ನಿಜವೇ ಆಗಲಿ ಬಿಡು. ಇನ್ನು ಮುಂದೆ ಈ ಮಗುವನ್ನು ಬೆಳೆಸುವ ಭಾರ ನಿನ್ನದೆ.

ರಾಯ—ಅದಕ್ಕೆ ಅಲ್ಲವೇ ಊರಿಂದ ಬೇಗನೇ ಬಂದುದು? ಮಕ್ಕಳು ನನಗೆ ಬಾಲಕೃಷ್ಣನ

ಮಾನರು. ಮಕ್ಕಳ ಸೇವೆ ಮಕ್ಕಳ ಮಾಣಿಕ್ಯ ಕೃಷ್ಣನ ಸೇವೆ. ಬಾನನ್ನ ಬಾಲಕೃಷ್ಣಾ! (ಎತ್ತಿ ಕೊಂಡು ಹೆಗಲಮೇಲೆ ಕುಳ್ಳಿರಿಸಿಕೊಳ್ಳುವನು) ದಣಿಯವರೇ, ನಾಳೆಯೇ ಈ ಮಗುವಿಗೆ ಒಂದು ತಳ್ಳುವ ಗಾಡಿಯನ್ನು ಮಾಡಿಸಿಕೊಡಬೇಕು. ಮಗುವಿನ ತಲೆಗೆ ಮಕ್‌ಮಲ್ ಟೋಪಿ, ಮೈಗೆ ಒಳ್ಳೆಯ ಅಂಗಿ, ಕೈಗೆ ಬಂಗಾರದ ಗೊಲಸು, ಸಿಂಗಾರದ ಕಡಗ, ಕಾಲಿಗೆ ಅಂದುಗೆ, ಚಿನ್ನದ ಸರ ಇವನ್ನೆಲ್ಲಾ ಹಾಕಿ ಅಲಂಕರಿಸಿ ಗಾಡಿಯಲ್ಲಿ. ಕುಳ್ಳಿರಿಸಿಕೊಂಡು ಬೀದಿಯಲ್ಲಿ ತಳ್ಳಿ ಕೊಂಡು ಹೋಗುವಾಗ ರಾಜಕುಮಾರನಂತೆ ಕಂಗೊಳಿಸ ಬೇಡವೆ?

ಯಜಮಾನ—ಹಾಗೆಯೇ ಆಗಲಿ ಚರಣಾ, ಬೆಳಗ್ಗೆ ಸಂಜೆ ಹೊರಗೆ ಕರೆದುಕೊಂಡು ಸುತ್ತಿಸಿಕೊಂಡು ಬಾ.

(ಹೊರಗೆ ಪೋಸ್ಟ್ ಪೋಸ್ಟ್ ಎಂಬ ಶಬ್ದ)

ರಾಯ—ಅದೋ ಯಾವುದೋ ಪೋಸ್ಟ್ ಬಂದಿದೆ. (ಹೋಗಿ ತರಮನು. ರುಜು ಹಾಕಿಸಿ ಕೊಡುವನು) ಅನುಕೂಲಬಾಬು ಅವರ ಹೆಸರಿಗಿದೆ.

ಅನು— (ಬಿಚ್ಚಿ ಓದುವನು) ಅಪ್ಪಾ, ನನಗೆ ಪದ್ಮಾ ನದೀ ತೀರದಲ್ಲಿರುವ ವಿಹಾರಪುರಕ್ಕೆ ವರ್ಗವಾಗಿದೆ. ಇನ್ನೊಂದು ತಿಂಗಳೊಳಗಾಗಿ ಅಲ್ಲಿಗೆ ಕೆಲಸಕ್ಕೆ ಹಾಜರಾಗಬೇಕು.

ಯಜಮಾನಿ—ಪದ್ಮನದೀತೀರದ ವಿಹಾರಪುರ ನಮ್ಮೂರಿಗೆ ಸಮೀಪದಲ್ಲಿಯೇ ಇದೆ. ಏನೂ ಚಿಂತೆ ಯಿಲ್ಲ.

ಯಜಮಾನ—ಅನುಕೂಲ, ನಿಮ್ಮ ಸೇವೆಗೆ ಈ ರಾಯ ಚರಣ ಇದ್ದೇ ಇರುತ್ತಾನೆ.

## ದೃಶ್ಯ 3

[ಪದ್ಮಾನದೀ ತೀರ. ರಾಯಚರಣ ತಳ್ಳುವ ಗಾಡಿಯಲ್ಲಿ ಒಡವೆ ವಸ್ತ್ರಗಳಿಂದ ಅಲಂಕೃತನಾದ ನವ ಕುಮಾರನನ್ನು ಕುಳ್ಳಿರಿಸಿಕೊಂಡು ಪ್ರವೇಶಿಸುತ್ತಾನೆ. ಪ್ರಕೃತಿಯ ಚೆಲುವಿಗೆ ಅವನು ಮನಸೋತು ಹಾಡುತ್ತಾನೆ ]

ಓ ಪದ್ಮಾನದಿ ಎನಿತಾನಂದದಿ
ಕಂಗೊಳಿಸುವೆ ಮಳೆಗಾಲದಲಿ
ತೋಟಗದ್ದೆಗಳು ಮಕ್ಕಳ ತೆರದಲಿ
ನಲಿಯುತ ನಿಂತಿವೆ ಬಳಿಯಲ್ಲಿ
ಪ್ರೀತಿ ವತ್ಸಲತೆ ಮಡುಗಟ್ಟಿಹುದೋ
ನದಿಯಲಿ ಹೊನಲಿನ ರೂಪದಲಿ

ಮಗು–ರಾಯಚನ್ನಾ, ರಾಯಚನ್ನಾ, ನೀನು ಎಷ್ಟು ಚೆನ್ನಾಗಿ ಹಾಡುವೆ. ಈ ಹಾಡು ಹೇಳಿ ಕೊಡು.

ರಾಯ —ಆ ಹಾ ಮುದ್ದುಪುಟಾಣಿ, ನಿನ್ನ ಮಾತು ಸಕ್ಕರೆಯ ಸವಿ; ಚರಣಾ ಎನ್ನುವುದನ್ನು ಚೆನ್ನಾ ಎನ್ನುವೆ. ಚನ್ನಾ ಎಷ್ಟು ಚೆನ್ನ. ಆಗಲಿ ಹಾಡು ಹೇಳು (ಹೇಳುವನು. ಮಗು ಹಾಗೆಯೇ ಹಾಡುವುದು)

ಮಗು–ಚೆನ್ನಾ ಅಲ್ಲಿ ನೋಡು.

ರಾಯ–ಏನು ಕಂದಾ!

ಮಗು–ನೀರು! ಅಬ್ಬಾ ಎಷ್ಟುನೀರು.

ರಾಯ–ಪದ್ಮಾನದಿ ಮಳೆಗಾಲದಲ್ಲಿ ತುಂಬಿ ಹರಿಯುತ್ತದೆ ದಣಿ.

ಮಗು —ಅಲ್ಲಿಗೆ ಹೋಗೋಣ ಬಾ !

ರಾಯ — ಬೇಡ ಮಗು ಅಲ್ಲಿಗೆಹೋಗಬಾರದು, ದೂರದಿಂದಲೇ ನೋಡು ಸಾಕು.

ಮಗು - ಉಹೂ ! ಅಲ್ಲಿಗೆ ಹೋಗಬೇಕು.

ರಾಯ - ಕೂಡದು ಅಲ್ಲಿನೋಡು. ಸೂರ್ಯ ಮುಳುಗುತ್ತಿದ್ದಾನೆ. ಕತ್ತಲಾಗುತ್ತಿದೆ. ಅ ? ಗೆ ಹೋಗಿಬರಲು ಇದುಸಮಯವಲ್ಲ. ನಾಳೆ ಹೋಗೋಣ.

ಮಗು - ಆಗದು. ಈಗಲೇ ಹೋಗಬೇಕು.. ಚೆನ್ನಾ, ನಡೆ ಹೋಗೋಣ (ಅಳುವುದು).

ರಾಯ - (ಸ್ವಗತ) ಏನು ಮಾಡುವುದು ಮಗು ಚಂಡಿ ಹಿಡಿದಿರುವನಲ್ಲಾ ಇರಲಿ. (ಪ್ರಕಾಶ) ಮಗು ಅಲ್ಲಿ ನೋಡು ಆ ಮರದಲ್ಲಿ ಹೂ ಎಷ್ಟು ಚೆನ್ನಾಗಿದೆ !

ಮಗು- (ನೋಡಿ] ಅಹುದು ಬಲು ಚೆನ್ನಾಗಿವೆ ಚನ್ನಾ ಹೂ ಬೇಕು. ತಂದು ಕೊಡು.

ರಾಯ-(ಸ್ವಗತ) ನದಿಯಕಡೆ ಹೋಗಬೇಕೆಂಬ ಹಠ ನಿಲ್ಲಿಸಿದನಲ್ಲಾ. ಸದ್ಯ ಅಷ್ಟೇ ಸಾಕು. (ಪ್ರಕಾಶ) ಹೂ ತಂದುಕೊಡುವೆ ಇಲ್ಲಿಯೇ ಇರು. (ಹೋಗುವನು).

ಮಗು-'' ಓ ಪದ್ಮಾ ನದಿ, ಎನಿತಾನಂದದಿ-ತಂಗೊಳಿಸುವೆ ಮಳೆಗಾಲದಲ್ಲಿ" (ಹಾಡುವುದು) (ರಾಯಚರಣ ಬರಿಗೈಲಿ ಬರುವನು) ಇದೇಕೆ ಚನ್ನಾ ಹೂ ತರಲಿಲ್ಲ ಯಾಕೆ ?

ರಾಯ-ಅಲ್ಲಿ ನೋಡು ಮಗು ನಿನ್ನೆ ಹೆಚ್ಚು ಮಳೆ ಬಂದಿರುವುದರಿಂದ ಆ ಮರದ ಸುತ್ತಲೂ ಕೆಸರು ನೀರು ತಂಬಿಹೋಗಿದೆ. ಕಾಲಿಟ್ಟರೆ ಹೂತುಕೊಳ್ಳುತ್ತವೆ.

ಮಗು-ಚೆನ್ನಾ, ಆ ಹೂಗಳು ಬೇಕೇ ಬೇಕು. (ಅಳುತ್ತಾ) ತರುವೆಯೋ ಇಲ್ಲವೊ ?

ರಾಯ-ಏನು ಮಾಡಲಿ. ಈ ಮಗುವಿನ ಗಮನವನ್ನು ಬೇರೆಕಡೆಗೆ ತಿರುಗಿಸುವೆನು. ಬಾಬೂ, ಅಲ್ಲಿ ನೋಡು ಪಾರಿವಾಳ !

ಮಗು-ಎಲ್ಲಿ ಎಲ್ಲಿ ?

ರಾಯ-ಅಲ್ಲಿ ಅಲ್ಲಿ. ಕಾಣಲಿಲ್ಲವೆ ? ಬಾ ಬೂ ಪಾರಿವಾಳಾ, ನಮ್ಮ ಪುಟ್ಟಾಣಿ ಕರಿತಾನೆ ಬಾ ಬಾ ಬಾ ........ ಅಯ್ಯೋ ಹಾರಿಹೊರಟೇ ಹೋಯಿತಲ್ಲಾ! (ಗಾಡಿ ತಳ್ಳಿಕೊಂಡು ಹೋಗುವನು.)

ಮಗು-ಗಾಡಿ ನಿಲ್ಲಿಸು ಚನ್ನಾ. ಪಾರಿವಾಳ ಬರಲೇಇಲ್ಲ. ನೀನು ಹೂ ತರಲೇಇಲ್ಲ. ಆ ಹೂ ಬೇಕೇ ಬೇಕು. ಹೋಗು, ಮೊದಲು ಹೋಗು (ಅಳುವನು)

ರಾಯ—ಈಗೇನುಮಾಡಲಿ ? ಈ ಮಗು ಚಂಡಿ ಹಿಡಿದಿರುವನಲ್ಲಾ ... ...... ಮಗೂ, ನಿನಗೆ ಹೂ ಬೇಕೇ ಬೇಕಲ್ಲವೆ. ಹಾಗಾದರೆ ನೀನು ಗಾಡಿಯಲ್ಲೇ ಕುಳಿತಿರಬೇಕು. ಕೆಳಗಿಳಿಯಕೂಡದು. ಆ ನೀರಿನ ಹತ್ತಿರ ಹೋಗಕೂಡದು.

ಮಗು-ಆಗಲಿ ಕೆಳಗೆ ಇಳಿಯೊಲ್ಲ, ಹೋಗು. ನೀರಿನಹತ್ತಿರವೂ ಹೋಗೊಲ್ಲ.

ರಾಯ- ಇದೊಹೊರಟೆ ಜೋಪಾನ ಗಾಡಿಬಿಟ್ಟು ಇಳಿದೀಯೆ ಜೋಕೆ ?(ಹೋಗುವನು)

ಮಗು-(ಅವನು ಹೋದಮೇಲೆ) ಗಾಡಿ ಬಿಟ್ಟು ಏಕೆ ಇಳಿಯಬಾರದು ? ನೀರಿನ ಹತ್ತಿರ ಏಕೆ ಹೋಗಬಾರದು ? ಇಳಿದೇ ಇಳಿಯುತ್ತೇನೆ. (ಇಳಿದು ನದಿಯ ಕಡೆಗೇ ಮಗು ಹೋಗುವುದು. ಸ್ವಲ್ಪ ಹೊತ್ತಾದ ನಂತರ ರಾಯಚರಣ ಹೂ ತೆಗೆದುಕೊಂಡು ಬರುವನು. ಏನೋ ಶಬ್ದವಾಗುವುದು.)

ರಾಯ-ಏನಿದು ಶಬ್ದ ! ಏನಿದು ! ಕೈಗಾಡಿ ಬರಿದಾಗಿದೆಯಲ್ಲಾ! ನವಕುಮಾರ ನೆಲ್ಲಿ ಹೋದ. (ಅತ್ತಿತ್ತ ನೋಡಿ) ಅಯ್ಯೋ ಇನ್ನೇನು ಗತಿ ! ನನ್ನ ರಕ್ತ ಹೆಪ್ಪುಗಟ್ಟಿಹೋದಂತಿದೆ. ನವಕುಮಾರನೆಲ್ಲಿ ಹೋದ? ಅಯ್ಯೋ; ನನ್ನ ಹೃದಯ ಎರಡುಹೋಳಾಗಿರುವಂತಿದೆಯಲ್ಲಾ ! (ಹುಡುಕುವನು) ನವಕುಮಾರಾ ! ನವಕುಮಾರಾ ! ಎಲ್ಲಿರುವೆ ಮಗು ? ಎಲ್ಲಿಯಾದರೂ ಬಚ್ಚಿಟ್ಟಕೊಂಡಿರುವೆಯಾ ? ಓ ಪದ್ಮಾ ನದೀ, ಓ ಪದ್ಮಾವತೀ, ಒಂದೂ ಗೊತ್ತಿಲ್ಲದ ಅಜ್ಞಾನಿಯೇ ನೀನು ? ಕಲಕಲರವದಿಂದ ಹರಿಯುತ್ತಿರುವೆ. ನನ್ನ ಕಂದನನ್ನೇನು ಮಾಡಿದೆಯಮ್ಮಾ ! ಅಯ್ಯೋ ಬಾಬೂ, .ಎಲ್ಲಿರುವೆ. ಎಲ್ಲಿ ಹುಡುಕಿದರೂ ನಿನ್ನ ಸುಳಿವಿಲ್ಲವಲ್ಲಾ ? ಮುಂದೇನುಗತಿ ? ಓಹೋ ಆಗಲೇ ಕತ್ತಲುಕವಿಯುತ್ತಿರುವುದಲ್ಲಾ ! — ಮನೆಗೇನಾದರೂ ಹೋಗಿರಬಹುದೆ ?— ಉಹುಂ. ಅದು ಸಾಧ್ಯವಿಲ್ಲ. ನನ್ನಿಂದ ಒಂದರಗಳಿಗೆ ಆಗಲದ ಮಗು ಮನೆಗೆ ಮರಳಲಾರ. (ಒಳಗೆ ರಾಯಚರಣ, ಕತ್ತಲಾಯಿತು, ಕುಮಾರನನ್ನು ಕರೆದುಕೊಂಡು ಮನೆಗೆ ಹೊರಟುಬಾ : ಎಂಬ ಶಬ್ದವಾಗುವುದು) ಓಹೋ, ಆಳುಗಳು ,ನನ್ನನ್ನೇ ಹುಡುಕುತ್ತ ಬರುತಿರುವಂತಿದೆ. ಮನೆಗೆ ಮರಳದ'ಮಗುವಿಗಾಗಿ ಮಾತೆಯ ಮನ ಮರುಗಿ ಜೀವ ತುಡಿಯುತ್ತಿದೆ. ಅದಕ್ಕೆ ಆ ತಾಯಿ ಆಳುಗಳನ್ನು ಅಟ್ಟಿರುವಳು. ಈಗ ಅವಳಿಗೇನು ಉತ್ತರಕೊಡಲಿ. ಕುಮಾರ ನವಕುಮಾರಾ, ಎಲ್ಲಿಗೆ ಹೋದೆ ? (ತಲೆಯಮೇಲೆ ಕೈಗಳನ್ನಿಟ್ಟು ರೋಧಿಸುತ್ತಾ ಹೋಗುವನು.)

ದೃಶ್ಯ-೪.

[ಪದ್ಮಾ ತೀರದ ವಿಹಾರ ಪುರದಲ್ಲಿ, ಅನುಕೂಲಬಾಬು

ವಿನ ಬಂಗಲೆ. ಅನುಕೂಲಬಾಬು ಅವನ ಪತ್ನಿ ಚಂದ್ರಿಕಾ ಕುಳಿತಿರುವರು.

ಚಂದ್ರಿಕಾ – ಸೂರ್ಯ ಮುಳುಗಿಹೋದ. ಕತ್ತಲು ಕವಿಯಿತು. ಕುಮಾರನನ್ನು ಕರೆದೊಯ್ದ ರಾಯಚರಣ ಇನ್ನೂ ಮನೆಗೆ ಹಿಂದಿರುಗಲೇ ಇಲ್ಲವಲ್ಲಾ !

ಅನು – ಅವನನ್ನು ಹುಡುಕಲು ಹೋದ ಆಳುಗಳೂ ಬರಲಿಲ್ಲ, ಏನಾಶ್ಚರ್ಯ !

ಚಂ – ಅದೋ ರಾಯಚರಣ ಬರುತ್ತಿದ್ದಾನೆ.

ಅನು – ಅವನೊಬ್ಬನೇ ಬರುತ್ತಿದ್ದಾನೆ !

ಚಂ – ಇನ್ನೇನು ಗತಿ. ಕುಮಾರನೇನಾದ ?

(ರಾಯಚರಣ ಬರುವನು)

ಚಂ – ಏನಿದು ರಾಯಚರಣಾ, ನವಕುಮಾರನೆಲ್ಲಿ ?

ಅನು — ಏಕೆ ಮೌನವಾಗಿರುವೆ ? ಮಗು ಎಲ್ಲಿ ?

ರಾಯ – (ದುಃಖದಿಂದ) ನನಗೊಂದೂ ತಿಳಿಯದು ದಣಿಗಳೆ ?

ಚಂ – ಅಯ್ಯೋ ಮುಂದೇನು ಗತಿ ! ಚರಣಾ, ಏನು ಹೀಗೆ ಹೇಳುವೆ ? ನಮ್ಮೊಡನೆ ವಿನೋದವಾಡುತ್ತಿಲ್ಲವಷ್ಟೆ ? ನಿನ್ನಮಾತು ನನ್ನಿಕಿವಿಗಳಿಗೆ ಕಾದ ಸೀಸವಾಗಿದೆಯಲ್ಲಾ !

ರಾಯ — (ಚಂದ್ರಿಕಾಳ ಪಾದಗಳ ಬಳಿ ಕುಸಿದು) ಅಮ್ಮಾ ನವಕುಮಾರ ಏನಾದನೆಂದು ನನಗೆ ತಿಳಿಯದು ? ನದಿಯ ತೀರದಲ್ಲಿ ದೂರದಲ್ಲೇ ಅವನನ್ನು ಆಡಿಸುತ್ತಿದ್ದೆ. ಹೂಬೇಕೆಂದು ಒಂದು ಮರದ ಕಡೆ ಕೈ ತೋರಿಸಿದ. ಆ ಮರದ ಸುತ್ತ ಮಳೆಯ ನೀರು ತುಂಬಿತ್ತು. ಮರ ಹತ್ತಲು ಸಾಧ್ಯವಿಲ್ಲವೆಂದು ಹೇಳಿದೆ. ಅವನು ಕೇಳಲಿಲ್ಲ. ಅವನ ಮನವನ್ನು ಬೇರೆ ಕಡೆಗೆ ತಿರುಗಿಸಲು ಮಾಡಿದ ಪ್ರಯತ್ನವೆಲ್ಲಾ ವಿಫಲವಾಯಿತು. ಗಾಡಿಯಿಂದ ಇಳಿಯಬೇಡವೆಂದು ಹೇಳಿ ಹೂಗಳನ್ನು ತರಲು ಅತ್ತ ಹೋದೆ. ಮತ್ತೆ ಹಿಂದಿರುಗಿ ಬಂದು ನೋಡಿದಾಗ ಗಾಡಿ ಬರವಾಗಿತ್ತು. ಕುಮಾರನಿರಲಿಲ್ಲ. ಹುಡುಕಿದೆ ಕತ್ತಲಾಯಿತು.

(ದುಃಖಿಸುವನು)

ಅನು — ಹಾಗಾದರೆ ನದಿಗೇನಾದರೂ ಬಿದ್ದು ಹೋಗಿರಬಹುದೆ ?

ಚಂ — ಏನು ! ನನ್ನ ಕರುಳಕುಡಿ ನದಿಯ ಪಾಲಾದರೆ ಮುಂದೇನುಗತಿ ! (ಅಳುವಳು)

ಅನು — ಸಹಿಸಿಕೋ ಚಂದ್ರಿಕಾ. ಹುಡುಕೋಣ ಊರಹೊರಗೆ ಕಂದೀರಿಯವರು ಬೀಡುಬಿಟ್ಟಿದ್ದಾರೆ. ಅವರೇನಾದರೂ ಮಗುವನ್ನು ಅಪಹರಿಸಿರಬಹುದೆ ?

ಚಂದ್ರಿಕಾ — ಇಲ್ಲ ಇಲ್ಲ. •ನನ್ನ ಮಗುವನ್ನು ಅವರಾರೂ ಅಪಹರಿಸಿಲ್ಲ. ಈ ದ್ರೋಹಿ ರಾಯಚರಣನೇ ನನ್ನ ಮಗುವನ್ನು ಎಲ್ಲಿಯೋ ಅಡಗಿಸಿರಬೇಕು.

ರಾಯ — ಶಿವಶಿವಾ, ರಾಯಚರಣನು ಶಿಶುಘಾತಕ ದ್ರೋಹಿಯಾದನೇ ? (ಕಾಲು ಹಿಡಿದು) ಅಮ್ಮಾ ಉಂಡ ಮನೆಗೆಂದಿಗೂ ದ್ರೋಹ ಮಾಡವವನಾಗಿಲ್ಲ. ನಾನು ತಮ್ಮ ಮಗುವನ್ನು ಬಚ್ಚಿಟ್ಟಿಲ್ಲವಮ್ಮಾ.

ಚಂದ್ರಿಕಾ — ರಾಯಚರಣಾ, ಹೆತ್ತ ಹೊಟ್ಟೆಗೆ ಬೆಂಕಿ ಸುರಿಯಬೇಡಾ. ನಿನ್ನನ್ನು ಬೇಡಿಕೊಳ್ಳುತ್ತೇನೆ. ನನ್ನ ಕಂದನನ್ನು ಕೊಟ್ಟುಬಿಡು. ನಿನಗೆಷ್ಟು ಹಣ ಬೇಕಾದರು ಕೊಡುವೆ. ಎಲ್ಲಿ ಬಚ್ಚಿಟ್ಟಿರುವೆ ನನ್ನರಗಿಳಿಯನ್ನು ?

(ರಾಯಚರಣ ತಲೆ ಚಚ್ಚಿಕೊಳ್ಳುವನು)

ಅನು — ಚಂದ್ರಿಕಾ, ರಾಯಚರಣ ಅಂತಹ ಹೀನ ಕಾರ್ಯ ಮಾಡಿದ್ದರೆ ಮನೆಗೇಕೆ ಹಿಂದಿರುಗಿ ಬರುತ್ತಿದ್ದ ? ಅವನನ್ನೇಕೆ ನಿಂದಿಸುವೆ ? ಅವನು ದ್ರೋಹಿಯಲ್ಲ.

ಚಂದ್ರಿಕಾ ನಿಮಗೆ ತಿಳಿಯದು ಸುಮ್ಮನಿರಿ. ಮಗುವಿನ ಮೈಮೇಲೆ ಬೆಲೆ ಬಾಳುವ ಚಿನ್ನದಾಭರಣಗಳಿರಲಿಲ್ಲವೆ ? ಈ ಮೋಸಗಾರ ನಮ್ಮ ಮನೆಯಲ್ಲಿ ಇನ್ನೊಂದು ಕ್ಷಣವೂ ಇರಕೂಡದು. ತೊಲಗಾಚೆ ಪಾಪಿ ! ಮುಖ ತೋರಿಸಬೇಡ....ಹೋಗದೆ ಸುಮ್ಮನೆ ನಿಂತಿರುವೆಯಾ. (ದೊಣ್ಣೆ ತಂದು ಆಚೆಗೆ ನೂಕುವಳು.)

ರಾಯ — ಅನುಕೂಲಬಾಬೂ, ಚಂದ್ರಿಕಾ

ತಾಯಿ, ನಾನು ನಿರಪರಾಧಿ ನಿರಪರಾಧಿ (ರೋದಿಸುತ್ತಾ ಹೋಗುವನು.)

ಚಂದ್ರ—ಬನ್ನಿ ಕಂದನನ್ನು ಹುಡುಕೋಣ.

ಅನು – ನಡೆ, (ಹೋಗುವರು)

## ದೃಶ್ಯ – ೫

[ಹಳ್ಳಿಗೆ ಹೋಗುವ ಒಂದು ಹಾದಿ. ರಾಯ ಚರಣ ಶೋಕಮಗ್ನನಾಗಿ ಬರುವನು.]

ರಾಯ – ವಿಧಿಲೀಲೆ! ನನ್ನ ಹಣೆಯಲ್ಲಿ ಬರೆದುದನ್ನು ನಾನು ಅನುಭವಿಸಲೇಬೇಕು. ಈಗೆಲ್ಲಿ ಹೋಗಲಿ? ಏನುಮಾಡಲಿ........ಇನ್ನೆಲ್ಲಿಗೆ ಹೋಗುವುದು? ನನ್ನ ಮಡದಿಯ ಬಳಿಗೆ ಧಾವಿಸುವುದೊಂದೇ ನನಗಿರುವ ಏಕೈಕ ಮಾರ್ಗ. ದಣಿಯ ಸೇವೆಯೊಂದನ್ನೇ ಮಹಾಭಾಗ್ಯವೆಂದು ಬಗೆದು ಮಡದಿಯ ಸುಖ ಸಂತೋಷವನ್ನೇ ಕೈಬಿಟ್ಟ ಪಾಪದ ಫಲವೋ ಏನೋ ನನ್ನೀ ದುರವಸ್ಥೆ. ನಾನು ವೃಥಾ ಅಪರಾಧಿಯಾದೆ. ಅಯ್ಯೋ ದೈವವೆ? ಆಗಲಿ. ನನಗೂ ಮಕ್ಕಳಿಲ್ಲ. ಮಕ್ಕಳಾಗುವ ನಂಬಿಕೆಯೂ ಇಲ್ಲ. ಮಡದಿಯೆಡೆಗೆ ನಡೆಯುವುದೊಂದೇ ಈಗ ನನ್ನ ಮುಂದಿನ ಕರ್ತವ್ಯ.

## ದೃಶ್ಯ – ೬

[ರಾಯಚರಣನ ಸ್ವಗ್ರಾಮದಲ್ಲಿ ಒಂದುಆಸ್ಪತ್ರೆ.]

ರಾಯ – ಪರಮಾತ್ಮಾ, ನನಗೆ ಮಕ್ಕಳಾಗುವುವೆಂಬ ಭರವಸೆಯೇ ಇರಲಿಲ್ಲ ನಿನ್ನ ಕೃಪೆಯಿಂದ ಇದೀಗ ನನ್ನ ಮಡದಿ ತಾಯಿಯಾಗಿ ನಾನು ತಂದೆಯಾಗುವ ಭಾಗ್ಯವನ್ನು ಕರುಣಿಸಿರುವೆ. ನನ್ನ ಕೈಹಿಡಿದವಳ ಯೋಗಕ್ಷೇಮ ನಿನ್ನದು, ತುಂಬು ಗರ್ಭಿಣಿ. ನಿನ್ನ ಮೇಲೆ ಭಾರಹಾಕಿ ಈ ಆಸ್ಪತ್ರೆಗೆ ಅವಳನ್ನು ಸೇರಿಸಿರುವೆ. ಅವಳು ಸುಖವಾಗಿ ಪ್ರಸವಿಸುವಂತೆ ಅನುಗ್ರಹಿಸು ತಂದೆ. (ಒಳಗೆ ಮಗು ಅಳುವ ಶಬ್ದ) ಆಹಾ! ದೇವರೆ, ಕರುಣಿಸಿದೆಯಾ? ನನ್ನ ಮನವನ್ನೆ ಕ್ಷೇಮವಾಗಿರುವಂತೆ ಅನುಗ್ರಹಿಸು. ವೈದ್ಯರೇ, ವೈದ್ಯರೇ, (ಬಾಗಿಲು ತಟ್ಟುವನು.)

ವೈದ್ಯ – (ಬಾಗಿಲು ತೆಗೆದು) ರಾಯಚರಣ್!....

ರಾಯ – ಏನು ವೈದ್ಯರೇ, ಏನಾಯಿತು. ಮಗು ಬಾಣಂತಿ ಆರೋಗ್ಯವೆ?.

ವೈದ್ಯ – ನೀನು ಭಾಗ್ಯಹೀನ ರಾಯಚರಣ್!

ರಾಯ – ಇದೇನು ಸ್ವಾಮಿ ಹೀಗೆ ಹೇಳುವಿರಿ? ಏನಾಯಿತು. ಮಗು ಆರೋಗ್ಯವೆ?

ವೈದ್ಯ – ಮಗು ಆರೋಗ್ಯದಿಂದಿದೆ. ಆದರೆ ನಿನ್ನ ಮಡದಿ ಮಡಿದಳು.

ರಾಯ – ಹಾ! ಶ್ರೀ ಹರಿ. (ಕುಸಿದು ಬೀಳುವನು) ಸುಟ್ಟ ಗಾಯದ ಮೇಲೆ ಮತ್ತೆ ಬರೆಯೊಂದು ಬಿತ್ತೆ.

ವೈದ್ಯ – ಸಹಿಸಿಕೋ ಚರಣ್, ಸಾಯಬೇಕಾಗಿದ್ದ ಮಗುವು ಜೀವ ಸಹಿತ ಇದೆ. ಇದೇ ನಿನ್ನ ಅದೃಷ್ಟ. ಅದನ್ನು ಸಾಕು. ಅವನೇ ನಿನ್ನ ಬಾಳಿನ ಭಾಗ್ಯ.

ರಾಯ – ಬಾಳಿನ ಭಾಗ್ಯ! ನನ್ನ ಕಂದ ನನ್ನ ಬಾಳಿನ ಭಾಗ್ಯ! ನನ್ನ ಕೈಹಿಡಿದವಳು ನನ್ನನ್ನು ಕತ್ತಲೆಯ ಕೂಪಕ್ಕೆ ತಳ್ಳಿ ಹೊರಟು ಹೋದಳು.

ವೈದ್ಯ – ಸಂತೈಸಿಕೋ. ಬಾ. ನಿನ್ನ ಮಗುವನ್ನು ನೋಡು. ಬಾ ಒಳಗೆ. (ಕರೆದುಕೊಂಡು ಹೋಗುವನು.)

## ದೃಶ್ಯ – ೭

(ರಾಯಚರಣನ ಮನೆ. ತನ್ನ ಮಗುವಿನೊಡನೆ ಕುಳಿತಿದ್ದಾನೆ)

ರಾಯ – ಫೇಲ್ನಾ, ನೀನು ಎರಡು ವರ್ಷದ ಮಗುವಾದೆ. ನಡೆಯುವುದನ್ನು ಕಲಿತೆ. ನಿನ್ನ ತಾಯಿ ನಿನ್ನನ್ನು ತಬ್ಬಲಿಮಾಡಿ ಹೊರಟು ಹೋದಳು. ನಿನ್ನನ್ನು ನೋಡಿದಾಗಲೆಲ್ಲಾ, ಆ ನವಕುಮಾರನ ನೆನಪೇ ಆಗುತ್ತದೆ. ಆ ನನ್ನ ದಣಿಯ ಮುದ್ದು ಮಗನಿಗೆ ಮೃತ್ಯುವಾದ ನಾನೆಂತಹ ಪಾಪಿ! ಯಜಮಾನರ ಏಕಮಾತ್ರ ಪುತ್ರ ಜಲ ಸಮಾಧಿಯಾಗುವಂತೆ ಮಾಡಿ ಈಗ ನಾನು ಪುತ್ರ ಭಾಗ್ಯವನ್ನು ಪಡೆದು ಹಿಗ್ಗುತ್ತಿರುವೆನಲ್ಲಾ! ಮಗು, ಫೇಲ್ನಾ, ನಿನ್ನ ಧ್ವನಿ, ಅಳು,

ನಗು ಎಲ್ಲಾ ಕಣ್ಮರೆಯಾದ ನವಕುಮಾರನಂತೆಯೇ ಇವೆ. ಹಾ! ನಾನೇಕೆ ಬೆಚ್ಚುಬೀಳುತ್ತಿದ್ದೇನೆ. ಅಹುದು ಬೆಚ್ಚಿ ಬೆದರಿದಂತಾಗುತ್ತಿದೆ... ಅಹುದು, ಪುತ್ರನನ್ನು ಕಳೆದುಕೊಂಡ ಚಂದ್ರಿಕಾದೇವಿ ನನ್ನ ಮೇಲೆ ಸಂದೇಹ ಪಟ್ಟಿದ್ದು ಸರಿ. ಅವಳ ಮಗುವನ್ನು ಹಾಳುಮಾಡಿದ ಪಾಪಿ ನಾನೇ. ಅಯ್ಯೊ ಆ ತಾಯಿಯ ಹೃದಯ ಪುತ್ರಶೋಕದಿಂದ ಅದೆಷ್ಟು ಸಂತಪ್ತವಾಗಿ ದೆಯೋ !....ಅವಳ ಸಂತಪ್ತ ಹೃದಯವನ್ನು ಸಾಂತ್ವನ ಗೊಳಿಸುವುದು ಸಾಧ್ಯವೆ ?....ಏತಕ್ಕೆ ಸಾಧ್ಯವಿಲ್ಲ ?... ನನ್ನ ಮಗ ಫೇಲ್ಲಾ, ಸುಂದರನಾಗಿದ್ದಾನೆ, ನವ ಕುಮಾರನಂತೆಯೇ ಇದ್ದಾನೆ. ಇವನೇ ನವಕುಮಾರ ನೆಂದು ಹೇಳಿ ಆಕೆಗೆ ಕೊಟ್ಟುಬಿಟ್ಟರೆ ಆಕೆ ಅದೆಷ್ಟು ಆನಂದಿಸುವಳೋ ! ಮಗನೇ, ನೀನಿನ್ನು ನನ್ನ ಮಗ ನಲ್ಲ. ನೀನೇ ನವಕುಮಾರ. ಇನ್ನುಮೇಲೆ ನೀನು ನನ್ನ ಮುಂದಣಿ, ಹೋ ನನ್ನ ಮೈನವಿರೇಳುತ್ತಿದೆ! ಚಂದ್ರಿಕಾ ದೇವಿ ನೀನು ನಿಜವಾಗಿಯೂ ಭಾಗ್ಯವಂತೆ, ಇನ್ನು ಮೇಲೆ ನಾನವನ ತಂದೆಯೆಂಬುದನ್ನೇ ಮುಚ್ಚಿಡುವೆನು. ಮಗೂ, ನಿನ್ನನ್ನು ಕಲ್ಕತ್ತಕ್ಕೆ ಕರೆದೊಯ್ಯುವೆನು. ನಿನಗೆ ಶಾಲೆಯಲ್ಲಿ ಶಿಕ್ಷಣ ಕೊಡಿಸುವೆನು. ನೀನು ಹನ್ನೆರಡು ವರ್ಷದವನಾಗುವವರೆಗೆ ತ್ಯಾಗಜೀವನ ನಡೆಸಿ ಆ ನನ್ನ ಚಂದ್ರಿಕಾ ತಾಯಿಯ ಬೆಂದೆದೆಗೆ ತಂಪೆರೆಯುವೆ. ಬಾ ಮಗು ಹಾಲುಕುಡಿ (ಕುಡಿಸು ವನು). ಮಗೂ ಕಲ್ಕತ್ತಕ್ಕೆ ಹೋಗೋಣವೆ ?

ಮಗು – ಕಲ್ಕತ್ತಾ ? ಎಲ್ಲಿದೆ ಕಕ್ಕತ್ತಾ.

ರಾಯ – ಇಲ್ಲಿಯೇ ಹತ್ತಿರವೇ ಇದೆ. ಹೋಗೋಣ. (ಎತ್ತಿಕೊಂಡು ಮುದ್ದಾಡುವನು.)

## ದೃಶ್ಯ ೮

[ಕಲ್ಕತ್ತಾ ನಗರದಲ್ಲಿ ಒಂದು ಮನೆ. ರಾಯಚರಣ ಐವತ್ತರ ಮುದುಕ. ಹನ್ನೆರಡು ವರುಷದ ಫೇಲ್ಲಾ ಪ್ರವೇಶಿಸುವನು ]

ರಾಯ – ಬಾ ದಣಿ, ಶಾಲೆ ಬಿಟ್ಟಿತೆ ?

ಫೇಲ್ಲಾ – (ಅಳುಮುಖ ಮಾಡಿಕೊಂಡಿರುವನು) ಶಾಲೆಬಿಟ್ಟಿತು. ಆದರೆ .....

ರಾಯ – ಅದೇಕೆ ಅಳುವೆ. ಹೇಳು ಮುಂದಣಿ.

ಫೇ – ಚನ್ನಾ, ನೀನು ಈಗೀಗ ನನ್ನನ್ನು ಸರಿ ಯಾಗಿ ನೋಡಿಕೊಳ್ಳುತ್ತಿಲ್ಲಾ.

ರಾಯ – ಹೀಗೇಕೆ ಹೇಳುತ್ತಿರುವೆ ನನ್ನ ಕುಮಾರ.

ಫೇ – ನನ್ನನ್ನು ದಣಿಗಳ ಮಗನೆಂದು ಮೊದಲು ಮೊದಲು ಬಹು ಚೆನ್ನಾಗಿ ಆದರಿಸುತ್ತಿದ್ದೆ. ಈಗ ನೋಡು ನನ್ನ ಬಟ್ಟೆಗಳೆಲ್ಲಾ ಹರಿದುಹೋಗಿವೆ. ತಲೆ ಕೂದಲೆಲ್ಲಾ ಬೆಳೆದುಹೋಗಿದೆ. ಹುಡುಗರೆಲ್ಲಾ ನನ್ನನ್ನು ಹಳ್ಳಿಗಮಾರ ಎನ್ನುತ್ತಿದ್ದಾರೆ.

ರಾಯ – ಮಗು, ನನಗೆ ವಯಸ್ಸಾಯಿತು. ನಿನ್ನನ್ನು ಈ ಹನ್ನೆರಡು ವರ್ಷದವರೆಗೂ ಕಷ್ಟಪಟ್ಟು ಸಾಕಿದ್ದಾಯಿತು. ನನಗಿನ್ನು ಸಂಪಾದಿಸುವ ಶಕ್ತಿ ಕುಂದುತ್ತಿದೆ. ಆಸ್ತಿಯನ್ನೆಲ್ಲಾ ಮಾರಿ ನಿನ್ನನ್ನು ಪಾಲಿಸಿದೆ. ಈ ಕಲ್ಕತ್ತಾ ನಗರಕ್ಕೆ ಬಂದು ನಿನಗೆ ಶಾಲಾ ಶಿಕ್ಷಣ ಕೊಡಿಸಿದೆ. ಕೂತುಣ್ಣುವನಿಗೆ ಕುಡಿಕೆ ಹೊನ್ನು ಸಾಲದಲ್ಲವೆ? ತಂದ ಗಂಟೆಲ್ಲಾ ಕರಗಿ ಹೋಯಿತು. ಈಗ ನನ್ನಲ್ಲಿ ಒಂದು ಬಿಡಿಗಾಸೂ ಇಲ್ಲ ವಲ್ಲಾ.

ಫೇ — ಸರಿ ಹಾಗಾದರೆ ನನ್ನನ್ನು ನನ್ನ ತಂದೆ ತಾಯಿಗಳ ಬಳಿಗಾದರೂ ಕಳುಹಿಸಿಬಿಡು. ನಿನಗೇಕೆ ಈ ಕಷ್ಟ ? ನಡೆ ಹೋಗೋಣ.

ರಾಯ – ಹೂಂ, ಇದೀಗ ಆಗಬಹುದು.

ಫೇ – ಯಾವಾಗ ಹೊರಡುವುದು ?

ರಾಯ – ನಾಳೆಯೇ ಹೊರಡೋಣ.

ಫೇ – ನಾನೇನೋ ನಮ್ಮ ತಾಯಿತಂದೆಗಳ ಬಳಿ ಸೇರಿಕೊಳ್ಳುವೆ. ನೀನೇನುಮಾಡುವೆ ?

ರಾಯ – ನನ್ನ ಊರಿದೆಯೆಲ್ಲಾ, ಅಲ್ಲಿಗೆ ಹೊರಟು ಹೋಗುವೆ ? ನಿನಗೆ ನನ್ನ ಯೋಚನೆ ಏಕೆ ದಣಿ.

ಫೇ – ಬೇಡ ಬೇಡ. ನಿನಗೆ ಊರಲ್ಲಿ ಯಾರೂ ಇಲ್ಲ. ನಮ್ಮ ಮನೆಯಲ್ಲಿಯೇ ಇದ್ದುಬಿಡು.

ರಾಯ – (ನಕ್ಕು) ನವಕುಮಾರಾ, ನಾನು ಈಗ ಮುದುಕನಾಗಿದ್ದೇನೆ. ಕೆಲಸಮಾಡಲು ಮೈಯಲ್ಲಿ ಬಲ

ವಿಲ್ಲ. ನನ್ನನ್ನು ಮನೆಯಲ್ಲಿಟ್ಟು ಕೊಳ್ಳುವರೇ ನಿನ್ನ ತಾಯಿ ತಂದೆಗಳು ?

ಫೇ – ನೀನು ಚಿಂತಿಸಬೇಡ ಚಿನ್ನಾ ನಾನು ನನ್ನ ತಾಯಿಗೆ ಹೇಳಿ ನಿನ್ನನ್ನು ಮನೆಯಲ್ಲಿಯೇ ಇರಿಸಿ ಕೊಳ್ಳುವಂತೆ ಒಪ್ಪಿಸುವೆನು.

ರಾಯ – (ನಕ್ಕು) ಹೋ! ಹಾಗೆಯೇ ಆಗಲಿ, ಬಾ ಕೈಕಾಲು ತೊಳೆದುಕೊ. ಊಟಕ್ಕೆ ಹೊತ್ತಾ ಯಿತು. (ತಲೆಯನ್ನು ನೇವರಿಸಿ ಒಳಗೆ ಕರೆದೊಯ್ಯು ವನು)

## ದೃಶ್ಯ ೯

[ಅನುಕೂಲ ಬಾಬುಗಳ ಬಂಗಲೆ. ಚಂದ್ರಿಕಾದೇವಿಯು ದೇವೀ ಪೂಜಾಸಕ್ತಳಾಗಿರುವಳು.]

ಚಂದ್ರಿಕಾ – ಜಗನ್ಮಾತೆ, ನಿನ್ನ ಕರುಣೆ ನನ್ನ ಮೇಲೆ ಅಪಾರವಾಗಿರುವುದರಿಂದ ನನಗೆ ಒಳ್ಳೆಯ ಪತಿ ಸಿಕ್ಕಿರುವರು. ಮನೆಯಲ್ಲಿ, ಧನಧಾನ್ಯ ಐಶ್ವರ್ಯ ಸಂಪತ್ತು ಯಥೇಚ್ಛವಾಗಿವೆ. ಆಳುಗಳಿದ್ದಾರೆ. ವಾಸಕ್ಕೆ ಅನುಕೂಲವಾದ ಬಂಗಲೆಯಿದೆ. ಆದರೆ.... (ಅಳು ವಳು)

ಅನುಕೂಲ – (ಪ್ರ ವೇ ಶಿ ಸಿ) ಏಕೆ ಚಂದ್ರಿಕಾ, ಅಳುತ್ತಿರುವೆ, ದೇವೀ ಪೂಜಾಕಾಲದಲ್ಲಿ ಕಣ್ಣೀರೇಕೆ ?

ಚಂದ್ರಿಕಾ – (ಬಿಕ್ಕಿ ಬಿಕ್ಕಿ) ದೇವೀಪೂಜೆಯನ್ನು ಪ್ರತಿತಿತ್ಯವೂ ಮಾಡುತ್ತಿದ್ದೇನೆ ಸ್ವಾಮಿ ನನ್ನ ಭಕ್ತಿ ಯೆಲ್ಲಾ ನಿರರ್ಥಕವಾಗುತ್ತಿದೆ ಅವಳಿನ್ನೂ ನನ್ನನ್ನು ಅನುಗ್ರಹಿಸಲಿಲ್ಲ.

ಅನು – ಯಾವ ಅನುಗ್ರಹವಾಗಬೇಕಾಗಿದೆ ನಿನಗೆ ?

ಚಂ – ತಿಳಿಯಿತೇನು ನನ್ನ ಒಡಲಿನ ಸಂತಾಪ ನಿಮಗೆ ?

ಅನು – ಏನದು ? ಬಾಯಿಬಿಟ್ಟು ಹೇಳಬಾರದೆ?

ಚಂ – ನನ್ನ ನವಕುಮಾರ ನನ್ನಿಂದ ದೂರವಾಗಿ ಇಂದಿಗೆ ಹನ್ನೆರಡು ವರ್ಷಗಳಾದವು.

ಅನು – ಇಷ್ಟೇತಾನೆ? ಪು ತ್ರ ಶೋ ಕ ಇನ್ನೂ ನಿನ್ನಿಂದ ದೂರವಾಗಲೇ ಇಲ್ಲ.

ಚಂ – ನನ್ನ ದೇವೀ, ಜಗನ್ಮಾತೆ, ನನಗಿನ್ನೊಂದು ಪುತ್ರಭಾಗ್ಯವನ್ನು ಕ ರು ಣಿ ಸ ಬಾ ರ ದೆ? ಅಯ್ಯೋ ನಾನೆಂತಹ ಹತಭಾಗ್ಯಳು !

(ಅಮ್ಮಾ, ಎಂಬ ಧ್ವನಿ ಕೇಳಿಬರುತ್ತದೆ)

ಅನು – ಯಾರು ಅಮ್ಮಾ, ಎಂದು ಕರೆಯು ತ್ತಿರುವರು ! ಯಾವುದೋ ಪರಿಚಿತ ಧ್ವನಿಯಂತಿರುವು ದಲ್ಲಾ ; ಇರಲಿ. ನೀನು ಒಳಗೆ ಹೋಗು (ಹೋಗು ವಳು)

(ಅಮ್ಮಾ, ದಣಿಯವರೇ)

(ರಾಯಚರಣ ಓಡಿಬಂದು ಕಾಲಿಗೆ ಬೀಳುವನು)

ರಾಯ – ನಮಸ್ಕಾರ ದಣಿ. ನಮಸ್ಕಾರ.

ಅನು – ಯಾರು ನೀ ನು? ಹೀಗೇಕೆ ಕಾಲು ಹಿಡಿಯುತ್ತಿರುವೆ ?

ರಾಯ – ನನ್ನ ಗುರುತು ಸಿಕ್ಕಲಿಲ್ಲವೆ ಬಾಬೂ, ನಿಮ್ಮ ಚರಣದಾಸ ರಾಯಚರಣ ನಾನು.

ಅನು – ಏನು, ರಾಯಚರಣ ? ಏಳು ಏಳು. ಓಹೋ ಆಗಲೇ ಎಷ್ಟು ಮುದುಕನಾಗಿದ್ದೀಯೆ ರಾಯ ಚರಣ ?

ರಾಯ – ಸ್ವಾಮೀ, ಚಿ ಂ ತೆ ಯೇ ಮುಪ್ಪು ಸಂತೋಷವೇ ಯೌವನವೆಂದು ಹೇಳತ್ತಾರಲ್ಲವೆ ಜನ?

ಅನು – ನಿನಗೇನು ಚಿ ಂ ತೆ ಕ ವಿ ದು ಇಷ್ಟು ಮುಪ್ಪಾವೆ ! ಪಾಪ ಎಷ್ಟು ಬಡವಾಗಿ ಹೋಗಿದ್ದೀಯೆ ! ಏನುಕಥೆ! ಎಲ್ಲಿಂದ ಬಂದೆ ?

ರಾಯ – ಕಲ್ಕತ್ತದಿಂದ.

ಅನು – ನೀನು ಮನೆಬಿಟ್ಟು ಹತ್ತು ಹನ್ನೆರಡು ವರ್ಷ ಕಳೆದುಹೋದವು. ಎಷ್ಟು ಕಷ್ಟಪಟ್ಟೆಯೋ ! ಎಲ್ಲಿ ಅಲೆದೆಯೋ, ಸುಮ್ಮನೆ ನಮ್ಮ ಮನೆಗೆ ಬಂದು ಬಿಟ್ಟಿದ್ದರೆ ಆಗದೇ ಹೋಗಿತ್ತೆ ?

ರಾಯ – ಆಹಾ ! ಯಜಮಾನರೇ ನನ್ನಮೇಲೆ ಅದೆಷ್ಟು ಕರುಣೆತೋರಿಸುತ್ತಿರುವಿರಿ? ಚಂದ್ರಿಕಾಮ್ಮ ನವರು ನನ್ನಲ್ಲಿ ಇಷ್ಟೇ ಪ್ರಸನ್ನರಾಗಿ ಬಿಟ್ಟರೆ ನನ್ನ ಭಾಗ್ಯಕ್ಕೆ ಪಾರವೇ ಇಲ್ಲ ಎಲ್ಲಿ ಅವರು ? ಅವರಲ್ಲಿ ಒಂದು ಮಾತು ಅರಿಕೆಮಾಡಿಕೊಳ್ಳಬೇಕಾಗಿದೆ.

ಅನು – ಹಾಗೆಯೇ ಆಗಲಿ. ಚಂದ್ರಿಕಾ, ಚಂದ್ರಿಕಾ, ಇಲ್ಲಿಬಾ. ನೋಡು ಯಾರು ಬಂದಿದ್ದಾರೆ ?

ಚಂದ್ರಿಕಾ – ಇದೋ ಬಂದೆ. (ನೋಡಿ) ಯಾರಿವನು ಈ ಭಿಕಾರಿ ಮುದಿಯ !

ಅನು – ಚಂದ್ರಿಕಾ, ಇವನು ನಮ್ಮ ರಾಯ ಚರಣನಲ್ಲವೆ ?

ರಾಯ – (ಕಾಲಿಗೆ ಬಿದ್ದು) ನಮಸ್ಕಾರ ತಾಯಿ,

ಚಂ – ಏನು ರಾಯಚರಣ, ಏಕೆ ಬಂದೆ ? ಒಡವೆಗಳ ಆಸೆಯಿಂದ ನನ್ನ ಮಗನನ್ನು ಅಪಹರಿಸಿ ನಮಗೆ ದ್ರೋಹಬಗೆದು ಈಗ ಮತ್ತೆ ನಮ್ಮ ಮನೆಗೆ ಬಂದಿರುವೆಯಾ ?

ರಾಯ – ಅಹುದಮ್ಮಾ, ನಾನು ದ್ರೋಹಿ, ಪಾಪಿ, ಕಳ್ಳ, ಮೋಸಗಾರ ರಾಯಚರಣ. ಪದ್ಮಾನದಿ ಯಲ್ಲಿ ನವಕುಮಾರ ಮುಳುಗಿ ಹೋದನೆಂದು ನಂಬ ಬೇಡಿ. ಕಂಪಾರಿಯವರು ಅಪಹರಿಸಿದರೆಂದೂ ತಿಳಿಯ ಬೇಡಿ. ನಾನೇ ನವಕುಮಾರನನ್ನು ಕದ್ದೊಯ್ದ ಕಡು ಪಾಪಿ.

ಚಂ – ನವಕುಮಾರನನ್ನು ಕದ್ದೊಯ್ದ ಕಡು ಪಾಪಿ !

ಅನು – ಏನು ನನ್ನ ಮಗನನ್ನು ನೀನು ಕದ್ದು...

ರಾಯ – ಅಹುದು ನನ್ನೊಡೆಯ ನಾನೇ ಒಡವೆ ಗಳ ಆಸೆಯಿಂದ ಕಂದನನ್ನು ಕದ್ದೆ.

ಚಂದ್ರಿಕಾ – ರಾಯಚರಣ, ನನ್ನ ಅರಗಿಳಿಯನ್ನು ಎಲ್ಲಿ ಬಚ್ಚಿಟ್ಟಿರುವೆ ? ಅವನೆಲ್ಲಿದ್ದಾನೆ ? ಬೇಗ ಹೇಳು.

ರಾಯ – ಅವನು ಈ ದಾಸನ ಬಳಿಯಲ್ಲೇ ಇದ್ದಾನಮ್ಮಾ.

ಚಂದ್ರಿಕಾ – ರಾಯಚರಣಾ, ಇಷ್ಟು ವರ್ಷ ಗಳಾದ ಮೇಲೆ ನಿನಗೆ ನನ್ನ ಮೇಲೆ ಕರುಣೆ ಬಂತಲ್ಲವೆ ? ನಿನಗೆ ನಾನೆಷ್ಟು ವಂದಿಸಿದರೂ ತೀರದು. ನಡೆ ಹೋಗೋಣ. ನನ್ನ ಮುದ್ದು ಕುಮಾರನನ್ನು ತೋರಿಸು ನಡೆ.

(ಪತಿಯ ಕಡೆ) ನಡೆಯಿರಿ. ಇನ್ನೂ ಸುಮ್ಮನೆ ನಿಂತಿರುವಿರಲ್ಲಾ !

ಅನು – ಆಗಲಿ. ರಾಯಚರಣಾ, ನವಕುಮಾರ ನನ್ನು ಎಲ್ಲಿಟ್ಟಿರುವೆ ?

ರಾಯ – ಕಲ್ಕತ್ತೆದಲ್ಲಿ.

ಅನು – ಸರಿ ಪ್ರಯಾಣಕ್ಕೆ ಸಿದ್ಧರಾಗೋಣವೆ ?

ರಾಯ – ಬೇಡಿ. ನೀವೇಕೆ ಅಲ್ಲಿಗೆ ಬರಬೇಕು. ನಾನೇ ನಾಳೆ ಇಲ್ಲಿಗೇ ಅವನನ್ನು ಕರೆತಂದು ನಿಮಗೆ ಒಪ್ಪಿಸಿ ಕೃತಾರ್ಥನಾಗುವೆನು.

ಚಂದ್ರಿ – ಈ ದಿನವೇ ಹೋಗು ರಾಯಚರಣಾ. ನನ್ನ ಕುಮಾರನನ್ನು ಎಂದಿಗೆ ಬಾಚಿ ತಬ್ಬಿಕೊಂಡು ಮುದ್ದಿಡುವೆನೋ ಎಂದು ನನ್ನ ಮನ ಹಾರೈಸುತ್ತಿದೆ. ನನ್ನ ಕಣ್ಣು ಕಾತರಿಸುತ್ತಿವೆ. ಉಣಬಡಿಸಲು ನನ್ನ ಕೈಗಳು ತವಕಿಸುತ್ತಿವೆ. ನಡೆ ಮೊದಲು. ಹೋಗು. ಹುಂ.

ರಾಯ – ಅಪ್ಪಣೆ ತಾಯಿ. (ಹೋಗುವನು)

ಚಂ – ನೀವೂ ಅವನೊಡನೆ ಹೋಗಿದ್ದರೆ ಚೆನ್ನಾ ಗಿತ್ತು. ಅವನು ವಯಸ್ಸಾದ ಮುದುಕ. ಅರುಳೋ ಮರುಳೋ. ನಮಗೆ ಸುಳ್ಳುಹೇಳಿ ಆಸೆ ಹುಟ್ಟಿಸಿ ಮತ್ತೆ ಎಲ್ಲಿಯಾದರೂ ಹೋಗಿಬಿಟ್ಟರೆ....

ಅನು – ಇರಲಿ. ಚಂದ್ರಿಕಾ, ನಾಳೆವರೆಗೆ ಕಾದು ನೋಡೋಣ. ಅವನು ಬಂದೇ ಬರುವನೆಂಬು ನನಗೆ ನಂಬಿಕೆಯಿದೆ. ಏಕೆ ಯೋಚಿಸುವೆ ?

## ದೃಶ್ಯ—೧೦

[ಅನುಕೂಲಬಾಬುವಿನ ಬಂಗಲೆ

ಅನುಕೂಲಬಾಬು ಮತ್ತು ಚಂದ್ರಿಕಾ ಕುಳಿತಿರುವರು.]

ಚಂ – ನಿನ್ನೆಯೇ ಹೋದ ರಾಯಚರಣ ಇಂದು ಇಷ್ಟು ಹೊತ್ತಾದರೂ ಬರಲೇ ಇಲ್ಲ. ಪುತ್ರನ ಬರವಿಗೆ ಮನ ಕಾತರಿಸುತ್ತಿದೆ.

ಅನು – ನನ್ನ ಮನಸ್ಸು ಹಾಗೆಯೇ ಕಾತರಿಸುತ್ತಿದೆ. ಚಂದ್ರಿಕಾ. ಇಂದು ಭಾನುವಾರ. ಕೋರ್ಟಿಗೆ ರಜಾ. ಈಗಿನ್ನು ಹತ್ತುಘಂಟೆ. ರಾಯಚರಣ ತನ್ನ ಮಾತಿ ನಂತೆ ಬಂದೇ ತೀರುವನೆಂದು ನನ್ನ ನಂಬಿಕೆ

ಚಂ – ನೀವು ಅವನ ಜೊತೆಯಲ್ಲೇ ಹೋಗಿದ್ದರೆ ಚೆನ್ನಾಗಿತ್ತು.

(ರಾಯಚರಣನ ಪ್ರವೇಶ. ಫೇಲ್ನಾ ಅವನ ಜೊತೆಯಲ್ಲಿರುವನು)

ರಾಯ – ಅಮ್ಮಾವರೇ, ನಾನು ಆಡಿದ ಮಾತಿಗೆಂದಿಗೂ ತಪ್ಪುವನಲ್ಲ.

ಚಂದ್ರಿಕಾ – ಬಂದೆಯಾ ರಾಯಚರಣ್, ನವಕುಮಾರನೆಲ್ಲಿ ?

ರಾಯ – ಇದೋ ಇವನೇ ನವಕುಮಾರ.

ಅನು – ಅ ಹು ದೇ, ಇ ವ ನು ನ ಮ್ಮ ನವಕುಮಾರನೆ ?

ರಾಯ – ಅಹುದು ದಣಿಗಳೆ. ನವಕುಮಾರ್, ಇದೋ ಇವರೇ ನಿನ್ನ ತಾಯಿತಂದೆಗಳು. ಇವರಿಗೆ ನಮಸ್ಕರಿಸು.

ಫೇಲ್ನಾ – (ನಮಸ್ಕರಿಸುವನು)

ಇಬ್ಬರೂ ಆಯುಷ್ಮಂತನಾಗು.

ಚಂದ್ರಿಕಾ – (ಬಾಚಿ ತಬ್ಬಿಕೊಂಡು) ಬಂದೆಯಾ ಕುಮಾರ್! ಬಾ ಇಲ್ಲಿ ಕುಳಿತುಕೋ! ಓಹೋ ಎಷ್ಟು ದೊಡ್ಡವನಾಗಿರುವೆ!

(ಪತಿಗೆ), ಇಲ್ಲಿ ನೋಡಿದಿರಾ ನನ್ನ ಮುದ್ದು ಕುಮಾರಾ ಅದೆಷ್ಟು ಚೆಲುವಾಗಿ ಬೆಳೆದಿದ್ದಾನೆ!

ರಾಯ – (ಸ್ವಾಗತ) ಪರಮೇಶ್ವರಾ, ಈ ನಾಟಕಕ್ಕೆ ನೀನೇ ಸೂತ್ರಧಾರ. ನಾನು ನಿನ್ನ ಕೈಗೊಂಬೆ.

ಅನು – ಚಂದ್ರಿಕಾ, ನಿನ್ನ ಪುತ್ರವ್ಯಾಮೋಹವನ್ನು ಏನೆಂದು ಹೇಳಬೇಕು!

ಚಂದ್ರಿಕಾ – ಇದೇಕೆ ಹೀಗೆ ಹೇಳುವಿರಿ ?

ಅನು – ಇವನು ನಿನ್ನ ಮಗನೇ ಎಂಬುದಕ್ಕೆ ಸಾಕ್ಷಿಯೇನು ?

ಚಂ – ಇದಕ್ಕೆ ಸಾಕ್ಷಿ ಬೇರೆ ಬೇಕೆ? ನೋಡಿ ನನ್ನ ನವಕುಮಾರ, ಸುಂದರನಾಗಿಯೇ ಇದ್ದಾನೆ. ದೊಡ್ಡ ಮನೆತನದ ಲಕ್ಷಣಗಳೆಲ್ಲಾ ಈತನ ಮುಖದ ಮೇಲೆ ಕಾಣುವುದಿಲ್ಲವೆ ?

ಅನು – ಅದು ಸರಿ, ಇಷ್ಟರಿಂದಲೇ ಅವನು ನಮ್ಮ ಮಗನೆಂದು ಹೇಳುವುದಕ್ಕಾಗುವುದೇ? ಇನ್ನೂ ನಂಬಲರ್ಹವಾದ ಕಾರಣಗಳು ಬೇಡವೆ? ಇದಕ್ಕೆ ರಾಯಚರಣನೇನು ಹೇಳುವನೋ ಕೇಳೋಣ.

ರಾಯ – ದಣಿಗಳೇ, ದ್ರೋಹಿಯಾದ ನಾನು ಮಗುವನ್ನು ಕದ್ದು ತಮಗೆ ಮೋಸಮಾಡಿರುವ ನಾನು ತಮಗೆ ಯಾವ ಋಜುವಾತುಮಾಡಬಲ್ಲೆ? ಅಮ್ಮನವರು ಅವನನ್ನು ಬಾಚಿ ತಬ್ಬಿಕೊಂಡು ತಮ್ಮ ಮಗನೆಂದೇ ಪ್ರೀತಿ ವತ್ಸಲತೆಯನ್ನ ತೋರಿದ್ದಕ್ಕಿಂತಲೂ ಹೆಚ್ಚಿನ ಸಾಕ್ಷ್ಯವನ್ನು ನಾನು ಹೇಗೆ ತಾನೆ ಒದಗಿಸಲಿ? ನಾನು ತಮ್ಮ ಮಗನನ್ನು ಕದ್ದದ್ದನ್ನು ಭಗವಂತನಿನಾ ಇನ್ನಾರೂ ತಿಳಿಯರಲ್ಲಾ ಸ್ವಾಮಿ !

ಅನು – (ಸ್ವಗತ) ಇವನು ಹೇ ಳು ವು ದು ಸರಿಯೆಂದೇ ತೋರುತ್ತದೆ. ಅಲ್ಲದೆ ಇಂತಹ ಚೆಲುವ ಬಾಲಕ ಇವನಿಗೆ ದೊರೆಯುವುದಾದರೂ ಹೇಗೆ? ಈ ಮುಪ್ಪಿನಲ್ಲಿ ಇವನು ಸುಳ್ಳುಹೇಳಿ ಸಾಧಿಸುವುದಾದರೂ ಏನು ? ಇರಲಿ. ಇನ್ನೂ ಈ ಬಾಲಕನನ್ನು ವಿಚಾರಿಸಿ ನೋಡುವೆನು.

(ಪ್ರಕಾಶ) ಎಲೈ ಬಾಲಕಾ, ಈ ಮುದುಕನ ಬಳಿ ನೀನು ಸೇರಿಕೊಂಡುದು ಯಾವಾಗ ?

ಫೇಲ್ನಾ – ನನ್ನನ್ನು ಚಿಕ್ಕಂದಿನಿಂದಲೂ ನಮ್ಮ ಚನ್ನನೇ ಸಾಕಿರುವಾಗ ನಾನು ಯಾವಾಗ ಇವನ ಬಳಿ ಬಂದೆನೆಂದು ಹೇಳಲಿ.

ಅನು – ನಿನ್ನ ತಾಯಿ ತಂದೆಗಳ ಹೆಸರನ್ನಾದರೂ ಬಲ್ಲೆಯಾ ?

ಫೇ – ಗೊತ್ತು, ನನ್ನ ತಂದೆ ಅನುಕೂಲಬಾಬುವೆಂದೂ ನನ್ನ ತಾಯಿ ಚಂದ್ರಿಕಾ ಎಂದೂ ಈತನೇ ನನಗೆ ಹೇಳುತ್ತಿದ್ದನು. ನೀವೇ ತಾನೆ ಅನುಕೂಲ ಬಾಬು.

ಅನು – ಅಹುದು.

ಫೇ – ಹಾಗಾದರೆ ಚಂದ್ರಿಕಾ ಇವರೇ ಅಲ್ಲವೆ ?

ಅನು – ಹೌದು ಚಂದ್ರಿಕಾ ಇವರೆ. ಅದಿರಲಿ, ಈತ ನಿನ್ನನ್ನು ಹೇಗೆ ನೋಡಿಕೊಳ್ಳುತ್ತಿದ್ದ· ಅದನ್ನು ಹೇಳು.

ಫೇ – ಅದನ್ನು ಸಂತೋಷದಿಂದ ಹೇಳುತ್ತೇನೆ ಕೇಳಿ. ತಂದೆತಾಯಿಗಳು ನನಗೆ ಇವನಷ್ಟು ಪ್ರೀತಿ ತೋರಿಸುವರೋ ಇಲ್ಲವೊ ಎನ್ನುವಂತೆ ನನ್ನಲ್ಲಿ ಪ್ರೇಮ ತೋರಿಸುತ್ತಾನೆ. ನಮ್ಮ ಚನ್ನಾ, ನನ್ನ ಸುಖಕ್ಕಾಗಿ ನನ್ನ ಓದಿಗಾಗಿ ತನ್ನ ಎಲ್ಲ ಆಸ್ತಿಯನ್ನೂ ಮಾರಿ ನನ್ನನ್ನು ಕಲ್ಕತ್ತೆಕ್ಕೆ ಕರೆತಂದು ಓದಿಸುತ್ತಿದ್ದ.

ಅನು – (ಸ್ವ ಗ ತ) ಆಹಾ! ಈ ಬಾಲಕನಿಗೆ ಚರಣನಲ್ಲಿ ಎಷ್ಟು ಪ್ರೇಮ ವಿಶ್ವಾಸಗಳು ಬೆಳೆದಿವೆ! (ಪ್ರಕಾಶ) ರಾಯಚರಣಾ, ಮಗನನ್ನು ಕದ್ದು ನೀನೇಕೆ ಇಷ್ಟು ಕಷ್ಟಪಟ್ಟೆ ?

ರಾಯ – ಇವೆಲ್ಲಾ ಆ ಭಗವಂತನ ಇಚ್ಛೆ ನನ್ನೊಡೆಯಾ. "ತೇನ ವಿನಾ ತೃಣಮಪಿ ನ ಚಲತಿ" ಎಂದು ನಮ್ಮ ದೊಡ್ಡ ದಣಿ ತಮ್ಮ ತಂದೆಯವರು ಆಗಾಗ ಹೇಳುತ್ತಿದ್ದರು. ಪರಮಾತ್ಮನ ಇಚ್ಛೆಯಿಲ್ಲದೆ ಒಂದು ಹುಲ್ಲುಕಡ್ಡಿಯೂ ಅಲುಗಾಡದಂತೆ ದಣಿಗಳೆ.

ಅನು – (ಸ್ವಗತ) ಇವನ ವರ್ತನೆಯನ್ನು ನೋಡಿದರೆ ನಿಷ್ಕಪಟಿಯಾಗಿಯೇ ಕಾಣುತ್ತಾನೆ. ಆದರೆ ಮಗನನ್ನು ಯಾವ ಪ್ರಯೋಜನಕ್ಕಾಗಿ ಅಪಹರಿಸಿದ? ಇವನು ದ್ರೋಹಮಾಡಿರುವುದನ್ನು ಇವನೇ ಬಾಯಿಬಿಟ್ಟು ಹೇಳಿದಮೇಲೆ ಇವನನ್ನು ಕ್ಷಮಿಸುವುದಾದರೂ ಹೇಗೆ? ಒಂದುವೇಳೆ ನಾನಿವನನ್ನು ಕ್ಷಮಿಸದೆ ಇದ್ದರೆ ಲೋಕ ನನ್ನನ್ನು ಪಕ್ಷಪಾತಿಯೆಂದುಜರೆದಾಡುವುದಿಲ್ಲವೆ? ಅಪರಾಧಿಗೆ ತಕ್ಕ ದಂಡನೆ ವಿಧಿಸದೆ ಹೋದರೆ ನಾನು ನ್ಯಾಯಾಧೀಶನ ಕರ್ತವ್ಯವನ್ನು ಮಾಡಿದಂತಾಗುವುದೆ? ಇಲ್ಲ. (ಪ್ರಕಾಶ) ರಾಯಚರಣಾ ನೀನು ಪಶ್ಚಾತ್ತಾಪ ಪಟ್ಟು ಕುಮಾರನನ್ನು ಮತ್ತೆ ತಂದುಒಪ್ಪಿಸಿದ್ದಕ್ಕೆ ನಮಗೆ ಸಂತೋಷವಾಗಿದ್ದರೂ ನೀನು ದಂಡನೆ ಅನುಭವಿಸುವುದನ್ನು ಮಾತ್ರ ತಪ್ಪಿಸಿಕೊಳ್ಳಲಾರೆ. ನಿನಗೆ ದಂಡನೆ ಏನುಗೊತ್ತೆ ?

ರಾಯ — ಹೇಳಿ ದಣಿಗಳೆ ?

ಅನು –ನಮ್ಮಮನೆಯಲ್ಲಿ ಇನ್ನು ನಿನಗೆ ಸ್ಥಳವಿಲ್ಲ. ಎಲ್ಲಿಯಾದರೂ ಹೊರಟು ಹೋಗು ಇದೇ ನಿನಗೆ ದಂಡನೆ.

ರಾಯ – [ಗದ್ಗದ] ಈ ಇಳಿವಯಸ್ಸಿನಲ್ಲಿ ನಾನೆಲ್ಲಿ ಹೋಗಲಿ ಬುದ್ಧಿ !

ಚಂದ್ರಿಕಾ – ಅಯ್ಯೋ ಹೋಗಲಿ ಬಿಡಿ. ಪಾಪ! ಅವನನ್ನು ಕ್ಷಮಿಸಿಬಿಡಿ.

ಅನು – ಚಂದ್ರಿಕಾ, ನಾನೀಗ ನ್ಯಾಯಾಧೀಶ, ಜಡ್ಜ್ ಎಂಬುದು ತಿಳಿದಿರಲಿ. ಅವನನ್ನು ಕ್ಷಮಿಸುವುದು ಸಾಧ್ಯವೇ ಇಲ್ಲ.

ರಾಯ – ನಾನು ಅಜ್ಞಾನಿ, ನಿರಪರಾಧಿ ಎಂಬುದಕ್ಕೆ ಪರಮಾತ್ಮನೊಬ್ಬನೇ ಸಾಕ್ಷಿ ಯಜಮಾನರೇ. ಅಂಗಲಾಚಿ ಬೇಡುವೆ.

ಅನು — ಮಾಡಿದ ತಪ್ಪನ್ನು ಮರೆಮಾಚಿ ದೇವರ ಮೇಲೆ ಹಾಕುವೆಯಾ? ನಿನ್ನಂತಹ ವಿಶ್ವಾಸ ದ್ರೋಹಿಯನ್ನು ನಂಬಿ ಮತ್ತೆ ಮನೆಯಲ್ಲಿ ಇರಿಸಿಕೊಂಡರೆ, ನನ್ನನ್ನು ಯಾರಾದರೂ ಇವನೊಬ್ಬ "ದಡ್ಡ ಜಡ್ಜ್" ಎಂದಾರು. ತೊಲಗಾಚೆ,ನಾನು ಮುನಿಸೀಫ್.

ಫೇಲ್ನಾ – ಅಬ್ಬಾ, ಈ ಮುದುಕ ಎಂತಹ ಭಾರಿ ಮೋಸಗಾರ! ಮುನಿಸೀಫರ ಮಗನಾದ ನನ್ನನ್ನು ಕದ್ದು ನನ್ನ ಗೌರವ ಅಂತಸ್ತುಗಳಿಗೆಲ್ಲಾ ಮಸಿ ಬಳಿದಿರುವನಲ್ಲಾ.

ರಾಯ – ಮಗೂ, ನೀನೂ ನನ್ನನ್ನು ಮೂದಲಿಸುವೆಯಾ ?

ಫೇ – ಛೇ! ನಿನ್ನಂತಹ ವಂಚಕನಿಗೆ ಆಶ್ರಯ ಕೊಡುವನಿಗೆ ಬುದ್ಧಿಯೇ ಇರಲಿಕ್ಕಿಲ್ಲ.

ರಾಯ – ನವಕುಮಾರಾ, ನಾನು ನಿನಗಾಗಿ ಮಾಡಿದ ತ್ಯಾಗ ನನಗೆ ಇದು ಫಲವೆ? ನಿನ್ನನ್ನು ಒಂದುದಿನವಾದರೂ ನೋಯಿಸಿದೆನೆ. ಅರೆ ಹೊಟ್ಟೆ ಹಾಕಿದೆನೆ. ದುಷ್ಟರ ಸಹವಾಸ ಮಾಡಿಸಿದೆನೆ. ನಿನ್ನ ತಾಯಿ ತಂದೆಗಳ ಬಳಿಗೆ ನಿನ್ನನ್ನು ಕರೆದೊಯ್ದು ನಿನ್ನ ಭವಿಷ್ಯವನ್ನು ಮಂಗಳ ಮಯವಾಗಿ ಮಾಡಿದ್ದು ನನ್ನ ದ್ರೋಹವೇ? ಕುಮಾರಾ!

ಫೇಲ್ನಾ – [ಕಣ್ಣೀರಿಡುತ್ತಾ] ಚನ್ನಾ, ಕ್ಷಮಿಸು. ಅಪ್ಪಾಜಿಯವರು ನಿನ್ನನ್ನು ಮನೆಯಲ್ಲಿರಿಸಿಕೊಳ್ಳುವುದಿಲ್ಲವೆನ್ನುತ್ತಿದ್ದಾರೆ. ಏನುಮಾಡಲಿ? .... ಒಂದು

ಉಪಾಯ ಹೊಳೆಯುತ್ತದೆ....ಅಪ್ಪಾಜಿ ನನ್ನದೊಂದು ಪ್ರಾರ್ಥನೆ.

ಅನು – ಏನದು ? ಚೆನ್ನಾನನ್ನು ಮನೆಯಲ್ಲಿಟ್ಟು ಕೊಳ್ಳದಿದ್ದರೆ ಹೋಗಲಿ. ಅವನು ಬೇರೆ ಎಲ್ಲಿಯಾದರೂ ಇದ್ದುಕೊಳ್ಳಲಿ, ತಿಂಗಳಿಗೆ ಸ್ವಲ್ಪ ಹಣ ಕಳುಹಿಸಿಕೊಟ್ಟರೆ ಜೀವನಮಾಡಿಕೊಳ್ಳುತ್ತಾನೆ.

ಚಂದ್ರಿ – ಭೇಷ್ ! ನೋಡಿದಿರಾ, ನನ್ನ ಚಿನ್ನ ಎಂತಹ ಉಪಾಯ ಹೇಳಿದ ? ಹಾಗೆಯೇ ಮಾಡಿರಿ. ಮಗನ ಮಾತು ನಡೆಸಿಕೊಡಿ.

ಅನು – ಸರಿ. ಇದೀಗ ಆಗಬಹುದು. ರಾಯ ಚರಣಾ, ನಿನಗೆ ಜೀವನಾಂಶ ನೀಡಲಾಗುವುದು. ನಿನ್ನ ವಿಳಾಸಕೊಡು. ಅಲ್ಲಿಗೆಪ್ರತಿ ತಿಂಗಳು ಹಣ ಕಳುಹಿಸುವೆ.

ರಾಯ – [ನಕ್ಕು] ಇಂದಿಗೆ ನನ್ನ ಸಂಕಲ್ಪವು ಫಲಪ್ರದವಾಯಿತು ದಣಿಗಳೆ. ಪುನಃ ಬಂದ ನಿಮ್ಮ ಪುತ್ರನಿಂದ ನನಗೆ ಜೀವನಾಂಶ ದೊರೆಯಿತು. ನಿಮಗೆ ನನ್ನ ವಿಳಾಸಬೇಕಲ್ಲವೆ ? ಇದೋ ತೆಗೆದುಕೊಳ್ಳಿ. [ಬರೆದುಕೊಡುವನು] ಎಲ್ಲರಿಗೂ ನಮಸ್ಕಾರ, ನಮಸ್ಕಾರ [ಹೋಗುವನು] ಈ ವಿಳಾಸಕ್ಕೆ ತಾವು ಕಳುಹಿಸುವುದನ್ನೆಲ್ಲಾ ಕಳುಹಿಸಿ.

ಅನು – [ವಿಳಾಸದ ಕಡೆ ನೋಡಿ] ಇಲ್ಲಿ ನೋಡಿ ಇವನ ವಿಳಾಸ ಸುಳ್ಳು ವಿಳಾಸ ಬರೆದಿದ್ದಾನೆ ?

ಚಂದ್ರಿಕಾ – ಏನು ಬರೆದಿದ್ದಾನೆ ?

ಅನು – "ರಾಯಚರಣಾ, ಪರಮಾತ್ಮನ ಚರಣದಲ್ಲಿ ಶರಣ" ಏನು ಇದರ ಅರ್ಥ ! ಓದಿ ಹೇಳಪ್ಪಾ ಪುನಃ ಬಂದ ಪುತ್ರಾ !

ಫೇ – ಅಯ್ಯೋ, ಚನ್ನಾ ನೀನು ವಿಳಾಸಕೊಡದೆ ಎಂತಹ ಮೋಸಮಾಡಿದೆ.

ಅನು – ಮಗೂ, ಅವನು ನಿಜವಾಗಿಯೂ ನಿರಪರಾಧಿ. ನಮ್ಮ ಹಣದಾಸೆಗಾಗಿ ಅವನು ನಿನ್ನನ್ನು ತಂದು ನಮಗೆ ಒಪ್ಪಿಸಿದವನಲ್ಲ. ಅವನು ನಿಃಸ್ವಾರ್ಥಿಯೆಂದು ನನಗೀಗ ತಿಳಿಯಬರುತ್ತದೆ.

ಎಲ್ಲರೂ – ಹೌದೆ ?

ಸಮಾಪ್ತಿ



# ಅಖಂಡ ಸೌಭಾಗ್ಯವತಿ

ಲೇಖಕರು :
ರಾಜೀವ

"ಶಿವುಡಪ್ಪ" ಇದು ಜನತೆಯಿಂದ ಶಾಸ್ತ್ರಿಗಳಿಗೆ ಬಳುವಳಿಯಾಗಿ ಬಂದ ಬಿರುದು. ನಾಯಕನಹಳ್ಳಿಯ ನರಸಿಂಹಶಾಸ್ತ್ರಿಗಳು ಮಹಾ ಸಾಹಸಿ ಜೀವ. ಆ ಊರಿಗೆ ಕುಳವಾಗಿ ಬಂದು ಸೇರಿದ್ದೇ ಒಂದು ಇತಿಹಾಸ. ಹಿರಿಯ ತಲೆಗಳಿಗೆಲ್ಲಾ ಅವರಮೇಲೆ ಅಪಾರ ಭಕ್ತಿ. ಅವರ ಮಾತನ್ನಂತೂ ತೆಗೆದುಹಾಕುವ ಎದೆಗಾರಿಕೆ ಯಾರಿಗೂ ಇಲ್ಲ. ಒಂದಾಣೆ ಬೆಲೆಯ ಆಸ್ತಿಯಿಲ್ಲ ದಿದ್ದರೂ ಅವರು ಚಂದ್ರಮೌಳೀಶ್ವರನ ರಥ ಎಳೆಯಿಸುವ ವೈಖರಿ ಜನರನ್ನು ಬೆರಗುಗೊಳಿಸಿತ್ತು. ರಥ ಎಳೆಯಿ ಸುವುದೆಂದರೆ ನರಸಿಂಹಶಾಸ್ತ್ರಿಗಳ ಮನೆ ಮದುವೆ ಮನೆಯೇ ಆಗಿಹೋಗುತ್ತಿತ್ತು. ಗಿರಿಜಾಕಲ್ಯಾಣ ಸಾಂಗವಾಗಿ ನೆರವೇರುತ್ತಿತ್ತು. ವರ್ಷವರ್ಷದ ಚಂದ್ರ ಮೌಳಿಯ ಲಗ್ನ ನೆರವೇರಿಸುವುದರಲ್ಲಿ ನಿರತರಾದ ಶಾಸ್ತ್ರಿ ಗಳಿಗೆ ತಮ್ಮ ಮಗ ಚಂದ್ರಮೌಳಿಯದೇ ಒಂದು ಸಮಸ್ಯೆಯಾಗಿತ್ತು.

ನರಸಿಂಹಶಾಸ್ತ್ರಿಗಳನ್ನು ನೀವೇ ಮಾತನಾಡಿಸ ಬೇಕೆಂದೇನೂ ಇಲ್ಲ. ಅವರು ಎದುರಾಗಿ ಬಂದರೆ ಸಾಕು ಹಿಡಿದು ನಿಲ್ಲಿಸಿಬಿಡುತ್ತಿದ್ದರು. "ಏನು ಸೂರಿ ಎಲ್ಲಾ ನಿಂದೇ. ನಿಮ್ಮಪ್ಪನ ಕಲ್ಯಾಣ ಭರ್ಜರಿ ನಡೆಯ ಬೇಕು. ನೀನ್ಯಾವ ಉತ್ಸವ ಮಾಡಿಸ್ತೀ ಹೇಳು. ಆಮೇಲೆ ಬಂದು ನನಗೆ ಸೇವೆಗೆ ಅವಕಾಶವೇ ದೊರೆಯ ಲಿಲ್ಲ ಎನ್ನಬೇಡ. ನಮ್ಮಪ್ಪ ತನ್ನ ಕೆಲಸಗಳಿಗೆ ಕಡಿಮೆ ಮಾಡಿಕೊಳ್ಳುವುದಿಲ್ಲ." ಎಂದು ಲಗ್ನಪತ್ರಿಕೆಯ ಕರಡು ಪ್ರತಿ ಬಿಚ್ಚಿ ಹಿಡಿದೇ ಬಿಡುತ್ತಿದ್ದರು. ನಂತರ ಕಿವಿಯಲ್ಲಿ ಹೇಳುವವರಂತೆ ಚಂದ್ರಮೌಳಿ ಸಾಮಾನ್ಯನಲ್ಲಪ್ಪ. ನಿನಗೆ ಗೊತ್ತೋ ಇಲ್ಲವೋ. ನಮ್ಮ ತಂದೆ ಕೃಷ್ಣಶಾಸ್ತ್ರಿ ಗಳು ಹುಲುಕುಂಟೆಯವರು. ಒಮ್ಮೆ ಮಲಗಿದ್ದಾಗ ಕನಸಾಯಿತು. ಸೊಂಟದುದ್ದ ಕೊಳಕಿನ ರಾಶಿಯಲ್ಲಿ ಶುದ್ಧ ಸ್ಫಟಿಕಶಿಲೆಯ ಲಿಂಗ ಮುಳುಗಿಹೋಗಿದೆ. ಆದರೂ ಲಿಂಗದ ಮೇಲೆ ಮಲದ ಲೇಪವಾಗಿಲ್ಲ. ದಿವ್ಯ ತೇಜಸ್ಸು ಸುತ್ತಲೂ ಹರಡುತ್ತಿದೆ. ನಮ್ಮ ತೀರ್ಥರೂಪರು ಕನಸಿ ನಲ್ಲೇ ಎದ್ದು ನಡೆದು ಬಂದರಂತೆ. ಅವರ ಗುರಿ ಒಂದೇ —ಹೊಳೆಯುತ್ತಿದ್ದ ಶಿವಲಿಂಗ. ಮುಳ್ಳು, ಕಲ್ಲು ಕೊರಕಲು, ಬೇಲಿ ಯಾವುದೂ ಅವರನ್ನು ತಡೆಯಲಿಲ್ಲ. ಬೆಳಗು ಹರಿಯುವುದರಲ್ಲಿ ಒಂದು ಪಾಳುದೇಗುಲದ ಮುಂದೆ ನಿಂತಿದ್ದರು. ಅವರ ಕನಸಿನ ಕಣ್ಣು, ಬೆಳಕು ಮಾಯವಾಗಿತ್ತು. ಆದರೆ ನಡೆದ ವಿಚಾರ ಚೆನ್ನಾಗಿ ನೆನಪಿನಲ್ಲಿತ್ತು. ರಾತ್ರಿಯಿಡೀ ನಿದ್ದೆಯಿಲ್ಲದೆ ನಡೆದು ಬಂದುದರಿಂದ ನಿದ್ದೆ ಕಣ್ಣು ತುಂಬಿತ್ತು. ದೇವಾಲಯದ ಕಲ್ಲಿನ ಮೇಲೆಯೇ ಉರುಳಿ ನಿದ್ದೆಹೋದರು. ನಂತರ ಎಚ್ಚರವಾದ ಮೇಲೆ ಮೊದಲನೆಯ ಕೆಲಸವೆಂದರೆ ಅವರು ಮಾಡಿದ್ದು ನಮ್ಮಪ್ಪನ ಸೆರೆಬಿಡಿಸಿದ್ದು. ಚಂದ್ರಮೌಳಿ ಕೈಗೆ ಬಂದ ಕೂಡಲೇ ಸಂಕಲ್ಪ ಮಾಡಿಬಿಟ್ಟರು. ಈ ಊರಿನಲ್ಲೇ ದೇವಸ್ಥಾನ ಕಟ್ಟಬೇಕು. ಚಂದ್ರಮೌಳೀ ಶ್ವರನನ್ನು ಅಲ್ಲಿ ಸ್ಥಾಪಿಸಬೇಕು. ನೋಡಪ್ಪ ಈ ದೇವಸ್ಥಾನ ಅವರೇ ತಮ್ಮ ಕೈಯಿಂದ ಕಟ್ಟಿದ್ದು. ಕಲ್ಲು ಮಣ್ಣು, ಮರಳು, ಸುಣ್ಣ, ಗಾರೆ ಎಲ್ಲವನ್ನು ಹೊತ್ತು ತಂದು ಹಗಲೂ ರಾತ್ರಿ ದುಡಿದು ಇದನ್ನು ಕಟ್ಟಿಯೇಬಿಟ್ಟರು ನೋಡು, ಈಗ ನಿನ್ನಸೇವೆ ಯಾವುದು ಹೇಳು" ಎಂದು ಮುಗಿಸುತ್ತಿದ್ದರು. ಈ ಕತೆಯನ್ನವರು ಸೂರಿಗಾಗಲೀ, ಇತರರಿಗಾಗಲೀ ಹೇಳಿದ್ದು ಎಷ್ಟನೆಯ ಸಲವೋ. ಆದರೆ ಅವರಿಗೆ ಮಾತ್ರ ಅದರಲ್ಲಿ ಬೇಸರ ವಿರಲಿಲ್ಲ. ಅಲ್ಲದೆ ಪ್ರತಿ ಬಾರಿಯೂ ಹೊಸ ಕತೆಯಂತೆ ಯೇ ಭಾವನಾಪೂರ್ಣರಾಗಿ ಹೇಳುತ್ತಿದ್ದರು. ಅವರಿಗೆ ಕಿವಿ ಕೇಳಿಸದೆ ಇದ್ದುದರಿಂದ ಬಹಳ ಎತ್ತರದ ದನಿಯಲ್ಲಿ ಮಾತನಾಡುತ್ತಾ ಈ ಕಿವಿಮಾತನ್ನು ಹೇಳಿ ಚಂದ್ರ

ಮೌಳಿಯ ಸೇವೆಗೆ ಸಿದ್ಧಗೊಳಿಸುತ್ತಿದ್ದರು. ಆದರೆ ಅವರ ಮಗ ಚಂದ್ರಮೌಳಿಯ ಕಲ್ಯಾಣ ಸಿದ್ಧತೆ ಅವರಿಗೆ ಕಾಲ್ತೊಡಕಾಗಿತ್ತು. ಅದಕ್ಕೆ ಕಾರಣ ಚಂದ್ರಮೌಳಿ ಅಲ್ಪಾಯು.

ದಿನಕ್ಕೊಮ್ಮೆಯಾದರೂ ಚ ಂ ದ್ರ ಮೌ ಳಿ ಯ ಜಾತಕ ಗುಣಿಸದೆ ಸಮಾಧಾನವಿರಲಿಲ್ಲ ಶಾಸ್ತ್ರಿಗಳಿಗೆ. ನೂರಾರು ಜನ ಗ್ರಾಮಸ್ಥರು ದಿನವೂ ಡಾಕ್ಟರ ಶಾಪ್‌ನಲ್ಲಿ ಮುತ್ತುವ ಜನರಂತೆ "ಕಿವುಡಪ್ಪ"ನವರನ್ನು ವಿಚಾರಿಸಿಕೊಂಡು ಬರದಿರುತ್ತಿರಲಿಲ್ಲ. ಅವರ ಜಾತಕ ಫಲಾಫಲಗಳನ್ನು ಗುಣಿಸಿ ಹೇಳಿದಂತೆ ಸ್ವಲ್ಪ ವಿರಾಮ ಸಿಕ್ಕಾಗ ಚಂದ್ರಮೌಳಿಯದೂ ಒಮ್ಮೆ ಗುಣಿಸುತ್ತಿದ್ದರು. ನೂರನೆಯ ಬಾರಿಗೆ ತಮ್ಮಲ್ಲಿಗೆ ತಾವು ''ಛೆ! ಏನಾದರೇನು ಚಂದ್ರಮೌಳಿ ಅಲ್ಪಾಯು, ಇವನಿಗೆ ಲಗ್ನ ಹೇಗೆ ಮಾಡಿಸುವುದು ? ಇರುಳು ಕಂಡ ಬಾವಿಗೆ ಹಗಲು ಬೀಳುವುದು ಹೇಗೆ? ಕಂಡವರ ಮಕ್ಕಳನ್ನ ಬಾವಿಗೆ ತಳ್ಳಿ ಆಳ ನೋಡುವುದೇ ? ಸಾಧ್ಯವಿಲ್ಲ. ಸಾಧ್ಯವಿಲ್ಲ" ಎಂದು ಉದ್ಗರಿಸುತ್ತಿದ್ದರು. ಆದರೆ ಬೆಳೆದ ಮಗ ತನ್ನುದ್ದಕ್ಕೂ ನಿಂತಿದ್ದಾನೆ. ಕೈತುಂಬಾ ಸಂಬಳ ತರುತ್ತಿದ್ದಾನೆ. ಅವನಿಗೊಂದು ಹೆಣ್ಣು ದಿಕ್ಕು ಬೇಡವೆ ? ರೋಗವಿದ್ದರೆ ಪರಿಹಾರವೂ ಇಲ್ಲವೇನು ? ಈ ಬಗೆಯ ಯೋಚನೆಗಳು ಅವರನ್ನು ಮುತ್ತಿ ತಿನ್ನುತ್ತಿದ್ದವು ಪರಿಹಾರ ಮಾತ್ರ ಗೋಚರವಾಗಲಿಲ್ಲ.

'ಎಲ್ಲಕ್ಕೂ ಕಾಲ ಬರಬೇಕು' ಎಂಬಂತೆ ನರಸಿಂಹ ಶಾಸ್ತ್ರಿಗಳ ಮಗನ ಮದುವೆಗೂ ಕಾಲ ಬಂತು. ಒಂದು ದಿನ ಬ್ಯಾಲಕೆರೆ ಸುಬ್ಬಾಜೋಯಿಸರು ಒಂದು ಜಾತಕ ತಂದು ಕಿವುಡಪ್ಪನ ಕೈಗಿತ್ತರು. "ನೋಡು, ಇದಕ್ಕೆ ಈ ಲಗ್ನಮಾಸದಲ್ಲಿ ಏನಾದರೂ ಕಂಕಣ ಪ್ರಾಪ್ತಿಯಾದೀತೇನೋ" ಎಂದರು ಜಾತಕ ನೋಡುತ್ತ ನೋಡುತ್ತ ಕಿವುಡಪ್ಪನ ಮುಖ ಅರಳಿತು ಹಳೇ ಗೂಡಿನಿಂದ ಕನ್ನಡಕ ಮೂಗೇರಿತು. ಕಣ್ಣರಳಿತು. ಮುಖದಲ್ಲಿ ಮಂದಹಾಸ ಮಿನುಗಿತು. ತಮ್ಮ ಒಡಕು, ಗೊಗ್ಗರ ಅವಾಜು ತೀಕ್ಷ್ಣಧ್ವನಿಯಲ್ಲಿ "ಸುಬ್ಬಣ್ಣಾ! ಈ ಹೆಣ್ಣು ಮಗಳು ಅಖಂಡ ಸೌಭಾಗ್ಯವತಿಯಾದ್ದಾಳೆ. ಈ ವರ್ಷ ತಪ್ಪದೇ ಕಂಕಣಯೋಗ ಒದಗಿದೆ ಏನು ಹೇಳ್ತಿ, ಯಾರ ಮಾತೂ ಕೇಳ್ಬೇಡ ನಾನುಂಟು ನೀನುಂಟು ಹುಡುಗ ಹುಡುಗೀನ್ನ ನೋಡಲಿ. ಈಸಾರಿ ಮೊದಲನೇ ಲಗ್ನದಲ್ಲಿಯೇ ನಾದಸ್ವರ ಊದಿಸಿಬಿಡುವ. ನಮ್ಮ ಚಂದ್ರಣ್ಣನ್ನ ನೋಡಿದ್ದೀ ತಾನೇ ? ನನ್ಹಂಗೆ ಜಾತಕ ಪುರಾಣ ಹೇಳುವನಲ್ಲ. ಅಲ್ಪಸ್ವಲ್ಪ ಹಳೇ ಸಂಪ್ರದಾಯಾಚರಣೆಯೂ ಉಂಟು. ಪೋಸ್ಟ್ ಇಲಾಖೆಯಲ್ಲಿದ್ದಾನೆ. ಸಂಬಳ ಸಂಸಾರಕ್ಕೆ ಸಾಕು. ಇನ್ನಾರಿಗೂ ಜಾತಕ ತೋರಿಸೋದು ಬ್ಯಾಡ. ನಮ್ಮ ಚಂದ್ರನ ಜಾತಕಕ್ಕೆ ಎಲ್ಲಾ ಗುಣವೂ ಕೂಡಿಬರುತ್ತದೆ. ನಾ ಹೇಳೋ ಮಾತು ನಂಬ್ತೀ ತಾನೆ ? ವರದಕ್ಷಿಣೆ ವಿಚಾರ ನಿನಗೇ ಬಿಟ್ಟದ್ದು. ನಿನ್ನಳಿಯಂಗೆ ಏನು ಬೇಕೋ ತಾ. ನಾ ಬೇಡ ಅನ್ನಲ್ಲ. ನನ್ನ ಸೊಸೆ ವಿಚಾರ ನನಗೆ ಬಿಡು. ಕೈಲಾದಷ್ಟು ಚಿನ್ನ, ಬಣ್ಣ ಹಾಕ್ತೀನಿ. ಇನ್ನೇನಪ್ಪ ? ಹೂಂ ಅನ್ನು. ಇಲ್ಲ ಊರಿಗೆ ಹೋಗಿ ಯಜಮಾನತೀನೂ ಒಂದು ಮಾತು ಕೇಳಿ ಬಂದು ಹೇಳಿದರೂ ಪರವಾ ಇಲ್ಲ" ಎಂದೆಲ್ಲ ಉಪದೇಶಮಾಡಿದರು.

ಹೂವಿನ ಸರ ಎತ್ತಿದಂತೆ ಮದುವೆ ನಡೆದೇ ಹೋಯಿತು. ಶಾಸ್ತ್ರಿಗಳು ಒಂದು ದೀರ್ಘ ನಿಟ್ಟುಸಿರು ಬಿಟ್ಟರು. ಬ್ರಹ್ಮನ ಬರಹಕ್ಕೆ ಬೃಹಸ್ಪತಿಯ ಬುದ್ಧಿಯಿಂದ ವ್ಯಾಖ್ಯಾನಮಾಡಿದ್ದರು. ಅಲ್ಪಾಯು ಮಗನಿಗೆ ಅಖಂಡ ಸೌಭಾಗ್ಯವತಿ ಸಾವಿತ್ರಿಯೊಬ್ಬಳನ್ನು ಕಟ್ಟಿ ಮೋಜು ನಡೆಸಿದರು. ವಿಜ್ಞಾನಿಯ ನವ್ಯಪ್ರಯೋಗಕ್ಕೆ ಬಡಪಾಯಿ ಕೋತಿಯ ಮರಿಯೊಂದು ಈಡಾಗಿದ್ದಿತು. ಈ ಮದುವೆ ಬ್ರಹ್ಮಸಂಕಲ್ಪಕ್ಕೆ ವಿರುದ್ಧವಾಗಿದ್ದರೆ ಏನಾದರೂ ಅಡಚಣೆ ಉಂಟಾಗಬೇಕಿತ್ತು. ಅಂತಹುದೇನೂ ಆಗಲಿಲ್ಲವಲ್ಲ. ಅಂದಮೇಲೆ ನಾನು ಮಾಡಿದ್ದು ಸರಿ ಎಂದು ಸಮಾಧಾನ ಪಟ್ಟುಕೊಳ್ಳುತ್ತಿದ್ದರು. ಕಳ್ಳನೂ ಹೇಳಿಕೊಳ್ಳುತ್ತಾನೆ, 'ನನಗೆ ಹೊಟ್ಟೆಗಿಲ್ಲ. ಕೆಲಸ ಕೇಳಿದರೆ ಯಾರೂ ಕೊಡೋದಿಲ್ಲ. ಹೊಟ್ಟೆ ತುಂಬುವುದಾದರೂ ಹೇಗೆ ? ನನಗೆ ತೋರಿದ್ದು ಮಾಡಿದ್ದೇನೆ. ದೇವರೇ ಕ್ಷಮಿಸಿಬಿಡು.'

ದೂರದ ಬಳ್ಳಾರಿಯಲ್ಲಿದ್ದ ಚಂದ್ರಮೌಳಿ ಮದುವೆಯಾದ ಮೇಲೆ ಪ್ರಯತ್ನಪಟ್ಟು ಹತ್ತಿರದ ಯಶವಂತಪುರಕ್ಕೆ ವರ್ಗ ಮಾಡಿಸಿಕೊಂಡ. ಶಾಸ್ತ್ರಿಗಳಿಗೆ ಬಹಳ ಸಂತೋಷವಾಯಿತು ಮಗ ಸೊಸೆಯರ ಸಂಸಾರ ತಮ್ಮ ಮನೆಯಲ್ಲೇ ನಡೆಯುವುದಕ್ಕೆ ಅನುಕೂಲವಾಯ್ತು

ತಲ್ಲಾ ಎಂದು. ಸುಬ್ಬಾಜೋಯಿಸರಿಗೆ ಸಾವಿತ್ರಿಯನ್ನು ಮನೆ ತುಂಬಿಸಿಕೊಡಲು ಪತ್ರ ಬರೆದರು. ಓಹೋ ಅಗತ್ಯವಾಗಿ. ತಾವು ಹೇಳಿದ ದಿವಸ ನಾವು ಸಿದ್ಧ. ತಮ್ಮ ಪದಾರ್ಥ ತಮಗೆ ಒಪ್ಪಿಸಿದರೆ ತಾನೇ ನಮಗೆ ನೆಮ್ಮದಿ ಎಂದು ಉತ್ತರವೂ ಬಂತು. ದಿನ ನಿಶ್ಚಯವೂ ಆಯಿತು. ಅಂದಿಗೆ ಎಂಟನೇ ದಿನ ಭಾನುವಾರ. ಹುಡುಗನಿಗೆ ರಜಾ ಇರುತ್ತೆ. ಆ ದಿನ ನಿಷೇಕ ಪ್ರಸ್ಥ ನೆರವೇರಲಿ.

ಶನಿವಾರ ಚಂದ್ರಮೌಳಿ ಯಥಾವಿಧಿಯಾಗಿ ಆಫೀಸ್ ಡ್ಯೂಟಿಗೆ ಹೋಗಿದ್ದನು. ಏನೋ ಭಯಂಕರ ಹೊಟ್ಟೇನೋವು ಪ್ರಾರಂಭವಾಯಿತು. ಕೆಲಸ ಸಾಗಲಿಲ್ಲ. ಇವನ ಸಂಕಟ, ನರಳಾಟ ನೋಡಿ ಸಹೋದ್ಯೋಗಿ ನರಸಣ್ಣ ಟ್ಯಾಕ್ಸಿಮಾಡಿ ಬೆಂಗಳೂರಿಗೆ ಸಾಗಿಸಿದ. ದೊಡ್ಡಾಸ್ಪತ್ರೆಯಲ್ಲಿ ದೊಡ್ಡ ಡಾಕ್ಟರೇ ಪರೀಕ್ಷಿಸಿದರು. ಹೊಟ್ಟೆಯಲ್ಲಿ ಏಡಿಹುಣ್ಣಿದೆ. ರೋಗ ಮರೆಮಾಚಿ ಉಲ್ಬಣಾವಸ್ಥೆಗೆ ಬಂದಿದೆ. ಆಪರೇಷನ್ ಮಾಡಬೇಕಾಗುತ್ತೆ. ಈತನ ವಾರಸುದಾರರನ್ನು ತಕ್ಷಣ ಕರೆಸಿ ಎಂದರು. ನರಸಣ್ಣ ಶಾಸ್ತ್ರಿಗಳಿಗೆ ಸುದ್ದಿ ಮುಟ್ಟಿಸಿದ. ಶಾಸ್ತ್ರಿಗಳ ಎದೆ ಥಡ್ ! ಎಂದಿತು. ಬಿದ್ದೆನೋ ಕೆಟ್ಟೆನೋ ಎಂದು ಓಡಿಬಂದರು. ಚಂದ್ರಮೌಳಿ ಅರೆಪ್ರಜ್ಞೆಯಲ್ಲಿದ್ದನು. ಅವನನ್ನು ಏನೂ ಕೇಳುವಂತಿರಲಿಲ್ಲ. ಡಾಕ್ಟರು "ಏನು ಶಾಸ್ತ್ರಿಗಳೇ ಆಪರೇಷನ್ ಮಾಡಬಹುದಷ್ಟೇ, ಬೇರೆ ಉಪಾಯವಿಲ್ಲ" ಎಂದರು. ವಿಧಿಯಿಲ್ಲದೆ ಹೂಂ ಎನ್ನಬೇಕಾಯಿತು. ಶಾಸ್ತ್ರಿಗಳಿಗೆ ಡಾಕ್ಟರ ಕೆಲಸ ಪ್ರಯೋಜನವಿಲ್ಲದ್ದು, ಎಂಬ ಭಾವನೆ ಸಂಪೂರ್ಣವಾಗಿತ್ತು. ಮಾಡುವುದನ್ನು ಮಾಡಲಿ ಎಂದು ಒಪ್ಪಿಗೆಯಿತ್ತು ಹೊರಗಡೆ ಬೆಂಚಿನ ಮೇಲೆ ಜಾತಕ ಹಿಡಿದು ಗುಣಿಸುತ್ತಾ ಕುಳಿತರು. ಹೇಗೆ ಲೆಖ್ಖ ಹಾಕಿದರೂ ಅಷ್ಟೆ. ಆವತ್ತಿಗೆ ಸರಿಯಾಗಿ ಇಪ್ಪತ್ತಾರು ವರ್ಷ ಕಳೆದು ಎರಡು ತಿಂಗಳು ಮುಗಿಯುತ್ತದೆ. ಚಂದ್ರದಶಾ ಪ್ರಾರಂಭ. ಚಂದ್ರಭುಕ್ತಿಯಲ್ಲಿ ಮರಣ. ಖಚಿತವಾಗಿ ಕಾಣಿಸುತ್ತಿದೆ. ವೈದ್ಯರ ಹರಿತವಾದ ಶಸ್ತ್ರಕ್ಕಿಂತಲೂ ಶಾಸ್ತ್ರದ ಹರಿತವಾದ ಲೆಖ್ಖ ಯಮಧರ್ಮರಾಯನ ಕೈಕತ್ತಿಯಂತೆ ಅವರೆದುದು ಹೊಳೆಯುತ್ತಿದೆ. ಸಾವಿತ್ರಿಯ ಜಾತಕ ಆಕೆ ಅಖಂಡ ಸೌಭಾಗ್ಯವತಿ ಪೂರ್ಣಾಯು ಇದಕ್ಕೇನರ್ಥ ?

ಡಾಕ್ಟರೇನೋ ಆಪರೇಷನ್ ಮಾಡಿ ಮುಗಿಸಿದರು. ಆದರೆ ಜ್ವರದ ಏರಿಕೆ ನಿಲ್ಲಲಿಲ್ಲ. ಅದು ವಿಷಮಿಸುತ್ತಲೇ ಹೋಯಿತು. ಸನ್ನಿಯಿಂದ ಸಂಪೂರ್ಣ ಪ್ರಜ್ಞೆ ಮುಚ್ಚಿಹೋಯಿತು. ರೋಗಿಯನ್ನು ಹಿಂದಿನ ಸ್ಥಿತಿಗೆ ತರುವ ವೈದ್ಯರ ಯತ್ನ ಕೈಮೀರುತ್ತ ಹೋಯಿತು. ಅದೆಂಥ ನಂಜಿನ ಜ್ವರವೋ ಯಾವ ಇಂಜೆಕ್ಷನ್‌ನೂ ಸಹ ಅದನ್ನು ಕೆಳಗಿಳಿಸಲಾರದಾಯಿತು. ಮೂರು ದಿನ ಹಗಲೂ ರಾತ್ರಿ ಶಾಸ್ತ್ರಿಗಳು ಮಗನ ಬಳಿ ಕುಳಿತರು. ಆಯುಃಪೂರ್ತಿ ಮಾಡಬೇಕಾದ ಸೇವೆಯೆಲ್ಲಾ ಮೂರೇ ದಿನದಲ್ಲಿ ಮುಗಿಸುವರಂತೆ ಕಣ್ಣಲ್ಲಿ ಕಣ್ಣಾಗಿ ಕಾಯ್ದರು. ಆದರೆ ಜಾತಕದ ಮಾರಕ ಚಂದ್ರ ಬಿಡಲಿಲ್ಲ. ಮೂರನೆಯ ದಿನ ರಾತ್ರೆ ಕಾಯುತ್ತ ಕುಳಿತಂತೆಯೇ ನಿದ್ರಿಸುತ್ತಿದ್ದ ಶಾಸ್ತ್ರಿಗಳ ಕಣ್ಣು ತಪ್ಪಿಸಿ ವಿಧಿ ಚಂದ್ರಮೌಳಿಯ ಜೀವ ಸೆಳೆಯಿತು. ಯಾರಿಗೂ ಸುಳಿವು ಕೂಡ ಕೊಡಲಿಲ್ಲ. ಒಂದು ಘಂಟೆಯ ನಂತರ ಡ್ಯೂಟಿಯ ನರ್ಸ್ ರೋಗಿಗೆ ಇಂಜೆಕ್ಷನ್ ಕೊಡಲು ಬಂದಾಗ ರೋಗಿಯ ಕೈ ಹಿಮದಂತಿತ್ತು. ಆಕೆ ಚೀರಿಕೊಂಡಳು. ವಾರ್ಡ್ ಡ್ಯೂಟಿ ಡಾಕ್ಟರು ನಿರ್ದಯವಾಗಿ ಚಂದ್ರಮೌಳಿಯನ್ನು ಹೆಣದ ಮನೆಗೆ ತಳ್ಳಿಸಿದರು. ಶಾಸ್ತ್ರಿಗಳು ಕಣ್ಣು ಬಿಟ್ಟಾಗ ಮಂಚದ ಮೇಲೆ ಮಗನಿರಲಿಲ್ಲ. ವಿಚಾರಿಸಿದ ಮೇಲೆ ಅದನ್ನು ರಾತ್ರಿಯೇ ಸಾಗಿಸಿದ ವಿಚಾರ ತಿಳಿಯಿತು. ಶಾಸ್ತ್ರಿಗಳು ಧೊಪ್ಪನೆ ಮೂರ್ಛೆ ಬಿದ್ದರು. ವಿಧಿಯ ವಿಕಟಾಟ್ಟಹಾಸ ಕಿವಿಯಲ್ಲಿ ಕೇಳಿಸಿದಂತಾಗುತ್ತಿತ್ತು—ಶಾಸ್ತ್ರಿಗಳಿಗೆ. ಮರುದಿನ ನರಸಣ್ಣನ ಸಹಾಯದಿಂದ ಚಂದ್ರಮೌಳಿಯ ದೇಹ ಜಟಕಾದಲ್ಲಿ ನಾಯಕನಹಳ್ಳಿಯ ಕಡೆ ಸಾಗಿತು.

ನಿಷೇಕದ ಗಂಡಾಗಿ ಹಸೆಮಣೆಗೇರಬೇಕಾಗಿದ್ದ ಚಂದ್ರಮೌಳಿ ಸ್ಮಶಾನದ ಹೆಣವಾಗಿ ಚಿತೆಯೇರಿದ್ದನ್ನು ಕಂಡು ಮನೆ ಮಂದಿಯಲ್ಲದೆ ಗ್ರಾಮದವರೆಲ್ಲ ಭೋರಾಡಿ ಅತ್ತರು. ಶಾಸ್ತ್ರಿಗಳು ತಲೆ ಚಚ್ಚಿಕೊಳ್ಳುತ್ತಾ ಸೊಸೆಯ ಮುಖ ತಿರುಗಿಸಿಕೊಂಡು "ಅಯ್ಯೋ. ಪಾಪಿ ನಿನ್ನ ಮಗನ ಸಾವು ತಿಳಿದಿದ್ದರೂ ಕರ್ಪೂರದ ಬೊಂಬೆಯಂಥಾ ಹೆಣ್ಣಿನ ಬಾಳು ಮುರಿದೆಯಲ್ಲಾ. ದೇವರ ಕಣ್ಣಿಗೆ ಮಣ್ಣೆರಚಿದರೆ ಸೂರ್ಯನಿಗೆ ಉಗುಳಿದಂತಾಗುವುದಿಲ್ಲವೆ, ಹುಚ್ಚಾ, ತಿಳಿಗೇಡಿ, ಛಿ! ನಿನ್ನ ಹೇಸಿ ಗುಣವನ್ನು ತೊಳೆದು ಚೊಕ್ಕಟ ಮಾಡಿಕೋ" ಎಂದು ಮನ

ದಲ್ಲಿಯೇ ನುಡಿದುಕೊಳ್ಳುತ್ತಾ ಹೊರಗೆ ಬಂದವರೆದುರು ಮೂಕವಾಗಿ ರೋದಿಸುವಂತೆ ಕಾಣಿಸುತ್ತಿದ್ದರು.

ಚಂದ್ರಮೌಳಿಯ ಮರಣಕ್ಕಿಂತ ಹೆಚ್ಚಾಗಿ ಶಾಸ್ತ್ರಿಗಳನ್ನು ಬಾಧೆಪಡಿಸಿದ್ದು ತಮ್ಮ ನಡವಳಿಕೆ. ದೇವರಿಗೇ ಮೋಸಮಾಡಲು ಹೋದ ತಮ್ಮ ಅಲ್ಪತನ ಅರಿವಾಗಿ, ಅವರನ್ನು ಹಣ್ಣುಮಾಡತೊಡಗಿತು. ಯಾಂತ್ರಿಕವಾಗಿ ಅಪರ ಕರ್ಮದಲ್ಲಿ ಭಾಗವಹಿಸಿ ಶಾಸ್ತ್ರವಿಧಿಯಂತೆ ಮಗನ ಕೆಲಸ ನಡೆಸುತ್ತಿರುವ ನರಸಿಂಹಶಾಸ್ತ್ರಿಗಳನ್ನು ಕಂಡು ಊರಿಗೆ ಊರೇ ಮರುಗಿತು ವೈಕುಂಠ ಸಮಾರಾಧನೆಯ ದಿವಸವಂತೂ ಶಾಸ್ತ್ರಿಗಳ ಕಣ್ಣೀರು ಕೋಡಿ ಹರಿಯಿತು. ಸೊಸೆಗೆ ಸಾವು ಮಾಡಿದ ಅನ್ಯಾಯ ಅವರ ಕಣ್ಣೆದುರು ಧುತ್ತೆಂದು ಬಂದು ನಿಂತಿತು. ಪೂರ್ಣಚಂದ್ರನಂತೆ ಬಿಳಿಯ ದುಂಡುಮುಖ, ಬಾಳೆಯ ದಿಂಡಿನಂತೆ ಕೈಕಾಲು ತುಂಬಿಕೊಂಡು ಆಗತಾನೇ ಜೀವನದ ಹೊಸಲಲ್ಲಿ ಕಾಲಿಡುತ್ತಿದ್ದ ಆ ಹೆಣ್ಣುಮಗುವಿಗೆ ತಾನೆಂಥ ಅನ್ಯಾಯಮಾಡಿದೆ. ದೇವರು ನನ್ನನ್ನು ಕ್ಷಮಿಸಿಯಾನೇ ಎಂದು ಕೊರಗತೊಡಗಿದರು.

ಸಮಾರಾಧನೆ ಊಟಕ್ಕೆ ಬಂದವರಿಗಂತೂ ದುಃಖದ ಕಣ್ಣೀರಿನ ಕಟ್ಟೆ ತುಂಬಿ ಹೊರ ತುಳುಕುವಂತಿದ್ದರೂ ಗಂಭೀರವಾಗಿರುವವರಂತೆ ಭಕ್ಷ್ಯಭೋಜ್ಯಗಳನ್ನು ಹೊತ್ತು ಬಡಿಸಲು ತರುತ್ತಿದ್ದ ವೃದ್ಧ ದಂಪತಿಗಳನ್ನು ಕಂಡು ಕರುಳು ಕಿವಿಚುತ್ತಿತ್ತು. ಬಾಯಿಗಿಟ್ಟ ತುತ್ತು ಮರಳಿನ ಉಂಡೆಯಂತೆ ಕುಳಿತುಕೊಳ್ಳುತ್ತಿತ್ತು. ಲಾಲಾರಸವೆಲ್ಲಾ ಕಣ್ಣೀರಿನ ಮೂಲಕ ಹರಿದುಹೋಯಿತೋ ಎಂಬಂತೆ ಗಂಟಲು ಆರಿ ಒಣಗಿದ ದರಿಯಂತಾಗಿತ್ತು. ಆದರೂ ಸತ್ತವನ ಶಾಂತಿಗಾಗಿ ಶಾಸ್ತ್ರದಂತೆ ಊಟ ಸಾಗಬೇಕಾಗಿತ್ತು. ಕೈಬಾಯಿಗಳ ಕೆಲಸ ಯಾವ ಆಸಕ್ತಿಯೂ ಇಲ್ಲದೆ ಸಾಗಿತ್ತು. ಆಗೊಮ್ಮೆ ಒಳಮನೆಯಲ್ಲಿ ಹೆಂಗಸರು "ಅಯ್ಯೋ ಘಾತವಾಯಿತು. ಬನ್ನಿ ಬನ್ನಿ ಸಾವಿತ್ರಿ ಬೆಂಕಿ ಹೊತ್ತಿಸಿಕೊಂಡಿದ್ದಾಳೆ. ಅಡಿಗೆಗಾಗಿ ತೋಡಿದ್ದ ಉದ್ದದ ಒಲೆಯಲ್ಲಿ ಬಿದ್ದಿದ್ದಾಳೆ" ಎಂದು ಕೂಗಾಡತೊಡಗಿದರು. ಊಟಮಾಡುತ್ತಿದ್ದವರೆಲ್ಲ "ಅಯ್ಯೋ ಅಯ್ಯೋ ರಾಮ ರಾಮ! ಎಂತಹ ಕೆಲಸವಾಯಿತು" ಎಂದು ಅರಚಾಡುತ್ತ ಕೈತೊಳೆವರೊ ಇಲ್ಲವೋ ಒಳನುಗ್ಗತೊಡಗಿದರು. ನರಸಣ್ಣ ಮತ್ತೆ ಗುರುತರವಾದ ಜವಾಬ್ದಾರಿಗೆ ಸಿಕ್ಕಿಬಿದ್ದನು. ಶಾಸ್ತ್ರಿಗಳು ತಮ್ಮ ಕೆಲಸದ ಪರಿಣಾಮವನ್ನು ಕಂಡು ಮೂರ್ಛೆ ಬಿದ್ದರು. ಅವರ ಹೆಂಡತಿಯಂತೂ ಥರಥರನೆ ನಡುಗುತ್ತಿದ್ದರು. ನರಸಣ್ಣನೇ ಸ್ನೇಹಿತನ ಹೆಂಡತಿಯ ರಕ್ಷಣೆಗೂ ಧಾವಿಸಬೇಕಾಯಿತು. ಆದಷ್ಟು ಬೇಗ ಎಲ್ಲಿಂದಲೋ ಜಟಕಾವೊಂದನ್ನು ತಂದು ಆಕೆಯನ್ನು ಆಸ್ಪತ್ರೆಗೆ ಸಾಗಿಸಬೇಕಾಯಿತು. ಕೊನೆಯ ಋಣ ತೀರಿಸಲೆಂದು ಬಂದ ನರಸಣ್ಣನ ಕೊರಳಿಗೆ ಋಣಪಾಶ ಮತ್ತೂ ಬಲವಾಗಿ ಉರುಳುಬಿದ್ದಿತ್ತು. ಮತ್ತೊಮ್ಮೆ ಜೀವನ್ಮರಣ ಹೋರಾಟ ಪ್ರಾರಂಭವಾಗಿದ್ದಿತು. ಶಾಸ್ತ್ರಿಗಳೂ ನರಸಣ್ಣನೂ ಆಸ್ಪತ್ರೆಯ ಹೊರಬಾಗಿಲ ಬೆಂಚಿನ ಮೇಲೆ ಕುಳಿತಿದ್ದಾಗ "ನರಸೂ ನಾನು ಪರಮಪಾಪಿ ಕಣಯ್ಯ. ಅಖಂಡ ಸೌಭಾಗ್ಯವತಿಯನ್ನು ತಂದುಕೊಂಡರೆ ನನ್ನ ಮಗ ಬದುಕುಳಿದಾನು ಎಂದು ಈ ಘೋರ ಪಾಪ ಮಾಡಿದೆ ನೋಡಯ್ಯ. ಆಕೆ ನನ್ನ ಕಣ್ಣು ಮುಂದೆ ಸೌಭಾಗ್ಯವತಿಯಾಗಿ ಸಾಗಿಹೋಗಲು ಪ್ರಯತ್ನಿಸಿದ್ದಾಳೆಂದು ತೋರುತ್ತೆ. ತಿಳಿದೂ ತಿಳಿದೂ ನಾನು ಮಾಡಿದ ದ್ರೋಹಕ್ಕೆ ಎಂತಹ ಪ್ರಾಯಶ್ಚಿತ್ತವಾಯಿತು ನೋಡು" ಎಂದೆಲ್ಲಾ ಪೇಚಾಡಿಕೊಂಡರು ನರಸೂವಿನ ಆಧುನಿಕ ಮನಸ್ಸು ಹೀಗೆ ಯೋಚಿಸಿತು. "ಸಾವಿತ್ರಿ ಅಖಂಡ ಸೌಭಾಗ್ಯವತಿಯಾಗಿ ಬದುಕುಳಿಯಲು ಸಾಧ್ಯವಿಲ್ಲವೇ" ಎಂದು ಶಾಸ್ತ್ರಿಗಳಿಗೆ ನರಸಣ್ಣ ಸೂಕ್ಷ್ಮವಾಗಿ ತಿಳಿಸಿದ: "ಶಾಸ್ತ್ರಿಗಳೇ ನನ್ನದೊಂದು ಮಾತು ಕೇಳುತ್ತೀರಾ? ನೀವು ತಪ್ಪು ತಿಳಿಯದಿದ್ದರೆ ಈಗ ನಡೆದಿರುವ ಅನಾಹುತ ಸರಿಪಡಿಸಲು ಸಾಧ್ಯವಿದೆ. ನಿಮ್ಮ ಮನಸ್ಸಿಗೆ ಅರ್ಧ ನೆಮ್ಮದಿಯೂ ದೊರೆಯುತ್ತೆ. ಸಾವಿತ್ರಿಯನ್ನು ನಾನು ಮರುಮದುವೆಯಾಗುತ್ತೇನೆ. ಅವಳ ಸೌಭಾಗ್ಯವನ್ನು ಅಖಂಡವಾಗಿಸುತ್ತೇನೆ. ಬ್ರಹ್ಮಬರಹ ಸುಳ್ಳಾಗಲಾರದಲ್ಲವೆ ?" ಶಾಸ್ತ್ರಿಗಳು ದೀರ್ಘವಾಗಿ ಆಲೋಚಿಸಿದರು. ಸಾಂಪ್ರದಾಯಿಕ ಜಡಬುದ್ಧಿಗೆ ಪ್ರಪಂಚವೇ ಮುಳುಗಿಹೋದಂತೆ ಕಾಣಿಸಿದರೂ ಆಧುನಿಕ ಜಗತ್ತಿಗೆ ಅದರ ತಾಪ ಲೇಶಮಾತ್ರವೂ ತಟ್ಟಲಾರದು ಎಂಬ ಸತ್ಯ ಅವರ ತಲೆಗೆ ಹೊಳೆಯಿತು. ಕಿವುಡಪ್ಪನ ಕಿವಿಯಲ್ಲೂ ಮಂಗಳವಾದ್ಯಗಳು ಭೋರ್ಗರೆದವು.



ಶ್ರೀ ಕ್ಷೇತ್ರದಲ್ಲಿ ಪ್ರತಿನಿತ್ಯ ನಡೆಯುತ್ತಿರುವ ದಾಸೋಹದ ದೃಶ್ಯ



ಶ್ರೀ ಕ್ಷೇತ್ರದ ಮಠದ ಮುಂಭಾಗ

# ಕನ್ನಡ ಅಲಂಕಾರ ಗ್ರಂಥಗಳ ಚರಿತ್ರೆ

ಪಂಡಿತ ಕೆ. ಸಿ. ಶಿವಲಿಂಗಯ್ಯ

ಸಾಹಿತ್ಯದಲ್ಲಿ "ಅಲಂಕಾರ"ವೆನ್ನುವುದು ಶಬ್ದಾರ್ಥ ವೈಚಿತ್ರ್ಯಗಳನ್ನೂ, ಕಾವ್ಯದಲ್ಲಿನ ಸೌಂದರ್ಯ ತತ್ತ್ವವನ್ನೂ ವಿಚಾರಮಾಡಿ ತಿಳಿಸುವ ಸಾಧನ. ಪ್ರಾಚೀನಾಲಂಕಾರಿಕರು ಕಾವ್ಯ ಲಕ್ಷಣವನ್ನು ಬೋಧಿಸುವ ಶಾಸ್ತ್ರಕ್ಕೆ "ಅಲಂಕಾರ ಶಾಸ್ತ್ರ" ಎಂದು ಹೆಸರು ಕೊಟ್ಟಿದ್ದಾರು.

ಸಾಮಾನ್ಯವಾಗಿ ಮೊದಲು ಕಾವ್ಯಗಳು ಹುಟ್ಟಿ, ಆಮೇಲೆ ಅಲಂಕಾರ ಶಾಸ್ತ್ರ ಆವಿರ್ಭವಿಸುವುದೇ ಕ್ರಮ. ಈಗ ತಿಳಿದಿರುವ ಮಟ್ಟಿಗೆ ಶ್ರೀಮದ್ರಾಮಾಯಣವೇ 'ಆದಿಕಾವ್ಯ'ವೆಂದೂ, 'ಅಗ್ನಿ ಪುರಾಣ'ವೇ ಲಕ್ಷಣ ಗ್ರಂಥಗಳಿಗೆಲ್ಲಾ ಮೂಲವೆಂದೂ ಅಭಿಪ್ರಾಯವುಂಟು. ಆದರೆ ಇದರಲ್ಲಿನ ಲಕ್ಷಣಭಾಗ ಪ್ರಾಚೀನ ತಮವಾದದ್ದಲ್ಲವೆನಿಸುವುದರಿಂದ ಈಗ ಇರುವ ಲಕ್ಷಣ ಗ್ರಂಥಗಳಲ್ಲಿ ಭರತನ "ನಾಟ್ಯಶಾಸ್ತ್ರ"ವೇ ಆದ್ಯಕೃತಿಯೆನಿಸಿದೆ. ಇದರ ಕಾಲ ಸು. ಕ್ರಿ. ಶ. 1ನೆಯ ಶತಮಾನವೆಂದು ವಿದ್ವಾಂಸರ ಅಭಿಪ್ರಾಯ. ಇದಕ್ಕಿಂತಲೂ ಹಿಂದೆ ಶಿಲಾಲಿ, ಕೃಶಾಶ್ವ ಎಂಬುವರು ಬರೆದಿದ್ದರೆಂದು ಹೇಳಲಾದ 'ನಟಸೂತ್ರ'ಗಳು ಈಗ ಉಪಲಬ್ಧವಿಲ್ಲ.

ಸಂಸ್ಕೃತ ಆಲಂಕಾರಿಕರಲ್ಲಿ 'ನಾಟ್ಯಶಾಸ್ತ್ರ'ದ ಭರತ (ಕ್ರಿ. ಶ. 1ನೆಯ ಶತಮಾನ), "ಕಾವ್ಯಾಲಂಕಾರ"ದ ಭಾಮಹ (6ನೆಯ ಶತಮಾನ), "ಕಾವ್ಯಾದರ್ಶ"ದ ದಂಡಿ ( –"– ), "ಕಾವ್ಯಾಲಂಕಾರ ಸೂತ್ರವೃತ್ತಿ"ಯ ವಾಮನ (8 ನೆಯ ಶತಮಾನ) ಮತ್ತೊಂದು "ಕಾವ್ಯಾಲಂಕಾರ" ರಚಿಸಿದ ರುದ್ರಟ (9–"–), [ಅಗ್ನಿಪುರಾಣದ ಅಲಂಕಾರ ಭಾಗದ ಕರ್ತೃಕಾಲ ತಿಳಿದಿಲ್ಲ] "ಕಾವ್ಯ ಮೀಮಾಂಸೆ"ಯ ರಾಜಶೇಖರ (10ನೆ-ಶ) "ವಕ್ರೋಕ್ತಿ ಜೀವಿತ"ದ ಕುಂತಲ (11-ಶ)—ಇವರು ಪ್ರಾಚೀನರೆಂದು ಕರೆಯಲ್ಪಟ್ಟಿದ್ದಾರೆ.

ಇನ್ನು ನವೀನರಲ್ಲಿ— 1. "ಧ್ವನ್ಯಾಲೋಕ"ದ ಆನಂದ ವರ್ಧನ (9-ಶ-ಮಧ್ಯ), 2. "ದಶರೂಪಕ"ದ ಧನಂಜಯ (10-ಶ-ಕೊನೆ), 3. "ಕಾವ್ಯಪ್ರಕಾಶ"ದ ಮಮ್ಮಟ(11-ಶ-ಕೊನೆ), 4. "ಕಾವ್ಯಾನುಶಾಸನ"ದ ಹೇಮಚಂದ್ರ (1088–1173) 5. "ಪ್ರತಾಪ ರುದ್ರಯಶೋಭೂಷಣ"ದ ವಿದ್ಯಾನಾಥ [13–ಶ-ಕೊನೆ] 6. "ಸಾಹಿತ್ಯದರ್ಪಣ"ದ ವಿಶ್ವನಾಥ [14–ಶ-ಆದಿ] 7. "ಕುವಲಯಾನಂದ"ದ ಅಪ್ಪಯ್ಯ ದೀಕ್ಷಿತ [16–ಶ-ಕೊನೆ] 8. "ರಸಗಂಗಾಧರ"ದ ಜಗನ್ನಾಥ [17–ಶ-ಕೊನೆ]—ಇವರು ಮುಖ್ಯರು.

ಪ್ರಾಚೀನರಲ್ಲಿ ಅಲಂಕಾರಗಳ ಸಂಖ್ಯೆ ಸುಮಾರು 35. ನವೀನರಲ್ಲಿ ಅವು ಕ್ರಮವಾಗಿ ಹೆಚ್ಚಿ 100 ಕ್ಕೆ ಮೀರಿಹೋಗಿವೆ. ಇದಿಷ್ಟೂ ಸಂಸ್ಕೃತ ಅಲಂಕಾರ ಶಾಸ್ತ್ರಗಳ ವಿಷಯವಾಯಿತು.

ಇನ್ನು ಕನ್ನಡ ಅಲಂಕಾರ ಗ್ರಂಥಗಳಲ್ಲಿ-ಏಕೆ ಉಪಲಬ್ಧವಾಗಿರುವ ಎಲ್ಲ ರೀತಿಯ ಕೃತಿ—ರಾಶಿಯಲ್ಲಿ—"ಕವಿರಾಜ ಮಾರ್ಗ"ವೇ ಪ್ರಾಚೀನವಾದದ್ದು. ಇದು ಬಹುಮಟ್ಟಿಗೆ "ದಂಡಿ"ಯ "ಕಾವ್ಯಾದರ್ಶ"ದ ಅನುವಾದವಾಗಿದೆ. ಇದರಲ್ಲಿ ದೋಷಾದೋಷಾನುವರ್ಣನ ನಿರ್ಣಯಂ, ಶಬ್ದಾಲಂಕಾರ ವರ್ಣನ ನಿರ್ಣಯಂ, ಅರ್ಥಾಲಂಕಾರ ಪ್ರಕರಣಂ-ಎಂದು 3 ಪರಿಚ್ಛೇದಗಳಿವೆ. ಸಂಸ್ಕೃತ ಲಕ್ಷಣ ಗ್ರಂಥವನ್ನು ಅನುಸರಿಸಿ ಕೃತಿ ರಚನೆ ಮಾಡಿದ್ದಾಗ್ಯೂ ಕವಿರಾಜ ಮಾರ್ಗಕಾರನು ತನ್ನತನ ಅಭಿವ್ಯಕ್ತಪಡಿಸದೆ ಬಿಟ್ಟಿಲ್ಲ. ಉದಾಹರಿಸುವುದಾದರೆ-ಉಪಮಾದಿ ಅನೇಕ ಅರ್ಥಾಲಂಕಾರಗಳಿದ್ದರೂ, ಕನ್ನಡ ಭಾಷೆಗೆ ನಿದರ್ಶನಾಲಂಕಾರವು ಹೆಚ್ಚು ಒಗ್ಗುವುದೆಂದೂ ಇದಕ್ಕೇ "ದೃಷ್ಟಾಂತ"ವೆಂಬ-ಹೆಸರುಂಟೆಂದೂ ತಿಳಿಸಿರುವನಲ್ಲದೆ ಕನ್ನಡ ಕವಿಗಳು ಇದನ್ನು ಅತ್ಯವಾಗಿ ಬಳಸಬೇಕೆಂದೂ ಹೇಳಿದ್ದಾನೆ.

ಇಂತುದಿತ ಭೇದಮುಂ ದೃ

ಷ್ಟಾಂತಾಳಂಕಾರ ಮಾರ್ಗಮುಂ ಕನ್ನಡಮೊಳ್ |

ಸಂತತ ಗುಣಮುಂ ಕೆಯ್ಕೊ

ಳ್ವಂತಾಗಿರೆ॥ ಬಗೆದು ಪೇಳ್ಗೆ ಪರಮು ಕವೀಶರ್॥

[III. P. 154]

''ಸಂಸ್ಕೃತ ಲಾಕ್ಷಣಿಕರು ಈ ವಿಚಾರವನ್ನು ಈ ರೀತಿಯಲ್ಲಿ ಎಲ್ಲಿಯೂ ಹೇಳಿಲ್ಲ''ವೆಂದು ವಿದ್ವಾಂಸರ ಅಭಿಪ್ರಾಯ. [ಡಾ॥ ಕೆ. ಕೃಷ್ಣಮೂರ್ತಿ-ಪರಿಷತ್ಪತ್ರಿಕೆ-ಸಂ. 47, ಸಂಚಿಕೆ 2-ಡಿಸೆಂಬರ್ 62] ''ಕವಿರಾಜಮಾರ್ಗಕಾರ''ನ ಮಾರ್ಗದರ್ಶನದಲ್ಲಿಯೇ ಕನ್ನಡದ ಮುಂದಿನ ಸಾಹಿತ್ಯ ತನ್ನ ವಿಶಿಷ್ಟ ರೂಪವನ್ನು ತಾಳಿತೆನ್ನಬಹುದು

ಎರಡನೆಯದು ಸು. ಕ್ರಿ. ಶ. 1145ರಲ್ಲಿದ್ದ ನಾಗವರ್ಮನ ''ಕಾವ್ಯಾವಲೋಕನ''. ಇವನು ರುದ್ರಟ, ವಾಮನ, ಭಾಮಹ, ದಂಡಿ, ಭರತ, ರಾಜಶೇಖರ ಇವರ ಕೃತಿಗಳನ್ನು ಅನುಸರಿಸಿದ್ದಾನೆ. ಈ ಕೃತಿಯಲ್ಲಿ ಶಬ್ದಸ್ಮೃತಿ, ಕಾವ್ಯಮಲ ವ್ಯಾವೃತ್ತಿ. ಗುಣವಿವೇಕ, ರೀತಿ ಕ್ರಮ ರಸನಿರೂಪಣ, ಕವಿಸಮಯ-ಎಂಬ ಐದು ಅಧಿಕರಣಗಳಿವೆ. ಸೂತ್ರಗಳಿಗೆಲ್ಲ ಪ್ರಾಚೀನ ಕನ್ನಡ ಕಾವ್ಯಗಳಿಂದ ಉದಾಹರಣೆಗಳನ್ನು ಆಯ್ದು ಕೊಟ್ಟಿರುವುದು ನಾಗವರ್ಮನ ವೈಶಿಷ್ಟ್ಯ. ಕವಿರಾಜ ಮಾರ್ಗಕ್ಕಿಂತ[ಹೆಚ್ಚು] ಶಾಸ್ತ್ರೀಯವಾಗಿದೆ ಕಾವ್ಯಾವಲೋಕನ. ಇಲ್ಲಿ ''ಧ್ವನಿ''ಯ ಪ್ರಸ್ತಾಪವಿಲ್ಲವೇ ಹೊರತು, ಮಿಕ್ಕೆಲ್ಲ ಕಾವ್ಯ ತತ್ತ್ವಗಳ-ಕೂಲಂಕಷ ಪ್ರತಿಪಾದನೆಯಿದೆ.

ರೀತಿ ವಿನೂತ ವಸ್ತು ಕೃತಿಗೊಪ್ಪುವ ಮೆಯ್

ರಸಭಾವ ವೃತ್ತಿನಿ

ರ್ಣೀತಿಯ ಜೀವಮಂತದರಿನನ್ವಿತಮಪ್ಪ

ಕವೀಶ್ವರಂ ಬುಧ—

ವ್ರಾತಮೊರಲ್ದು ಬಿಚ್ಚಳಿಸಿ ನಚ್ಚುವಳಂಕೃತಿ

ಕೂಡದಿರ್ದೊಡಂ

ರೀತಿಯೊಳೊಂದೆ ಪೇಳ್ವುದು ರಸಂ ಬಿಡೆ ಬಂಧುರ

ಕಾವ್ಯ ಬಂಧಮುಂ ॥

(ಸೂತ್ರ 187)

ಇಲ್ಲಿ ರೀತಿಯನ್ನು ಉತ್ತಮ ಕಾವ್ಯದ ''ಶರೀರ''ವೆಂದೂ, ರಸವನ್ನು ''ಜೀವ'' ಎಂದೂ ನಿರ್ದೇಶಿಸಿ, ಎರಡಕ್ಕೂ ಸಮಪ್ರಾಧಾನ್ಯ ಕೊಡಲಾಗಿದೆ. ರಸಸ್ಪರ್ಶವಿಲ್ಲದ ಕಾವ್ಯವಿರಲಾರದು....ಕಾವ್ಯಸೌಂದರ್ಯಕ್ಕೆ ಕಾರಕಗಳು ''ಗುಣ''ಗಳು; ಆದರ [ಕಾವ್ಯ ಸೌಂದರ್ಯ] ಆಧಿಕ್ಯವನ್ನು ತರಬಲ್ಲವು-ಅಲಂಕಾರಗಳು. ಇದೇ ಅಭಿಪ್ರಾಯ ''ವಾಮನ''ನದು ಕೂಡ.

[ಕಾವ್ಯ ಶೋಭಾಯಾಃ ಕರ್ತಾರೋ ಧರ್ಮಾ ಗುಣಾಃ; ತದತಿಶಯ ಹೇತವಸ್ತು ಅಲಂಕಾರಾಃ]

ನಿರತಿಶಯ ಕಾವ್ಯಶೋಭಾಕರಂಗಳಾಗಿರ್ಪ

ಧರ್ಮಮವು ಗುಣಮಕ್ಕುಂ

ಇಲ್ಲಿ ರಸಗಳೂ ಗುಣದಲ್ಲೇ ಅಂತರ್ಗತವಾಗುತ್ತವೆ.

—ನಾಗವರ್ಮ

ಮೂರನೆಯದು ಉದಯಾದಿತ್ಯನ ಉದಯಾದಿತ್ಯಾಲಂಕಾರ [ಸು. ಕ್ರಿ. ಶ. 1150] ಇದು 72 ಪದ್ಯಗಳಿಂದ ಕೂಡಿದ ಪುಟ್ಟ ಕೃತಿ. ಬಹುಮಟ್ಟಿಗೆ ದಂಡಿಯ ''ಕಾವ್ಯಾದರ್ಶ''ವನ್ನೇ ಅನುಸರಿಸಿದ್ದಾನೆ. ಕಾವ್ಯ ಭೇದಗಳು, ರೀತಿ, ರಸ, ಗುಣ (10); ಶಬ್ದಾಲಂಕಾರ, ಅರ್ಥಾಲಂಕಾರಗಳು (36) ಇದರಲ್ಲಿ ಉಕ್ತವಾಗಿವೆ.

ಕನ್ನಡದೊಳ್ ಚಂಪೂಕೃತಿ

ಸನ್ನುತತರ ವಚನ ಕಾವ್ಯ ಮೆನಿಕುಂ ಚತ್ತಾ-

ಣಂ ನೆರೆ ವೈದಂಡಕಮೆನೆ

ಸನ್ನುತಿಯಂ ಸರ್ಗಬಂಧ ಕೃತಿ ತಳೆದಿರ್ಕುಂ ॥

[ಪದ್ಯ 6]

ಇದರಿಂದ-ಇವನ ಕಾಲಕ್ಕೆ ''ಚಂಪೂ'' ರೀತಿಯ ಕಾವ್ಯರಚನೆ ರೂಢಮೂಲವಾಗಿತ್ತೆಂದು ತಿಳಿದುಬರುತ್ತದೆ. [ಇವನಿಂದೀಚಿನ ಆಲಂಕಾರಿಕರು ಯಾರೂ ''ಚತ್ತಾಣ ಬೆದಂಡೆ'' ಗಳನ್ನು ಹೇಳಿಲ್ಲವೆಂಬುದು ಸುಸ್ಪಷ್ಟ.]

ಸು. 1200ರಲ್ಲಿದ್ದ ''ಕವಿಕಾಮ''ನ ''ಶೃಂಗಾರ ರತ್ನಾಕರ'' ಅಥವಾ ''ರಸವಿವೇಕ''ವು ಕ॥ ಅ॥ ಗ್ರಂ॥

ಗಳಲ್ಲಿ ನಾಲ್ಕನೆಯದು. ಇದರಲ್ಲಿ ರಸವಿಷಯ-ಅದರಲ್ಲೂ ಶೃಂಗಾರ ರಸ ವಿಷಯ, ನಾಯಕನಾಯಿಕೆಯರ ಪ್ರಭೇದಗಳು, ಶೃಂಗಾರ ಚೇಷ್ಟೆಗಳೇ ಮೊ ಪಕರಗಳು ವಿಸ್ತಾರವಾಗಿ ಪ್ರತಿಪಾದಿತವಾಗಿವೆ. (i) ನವರಸ ವ್ಯಾವರ್ಣನ, (ii) ಭಾವ ಭೇದ ನಿರ್ಣಯ, (iii) ನಾಯಕ ನಾಯಿಕಾ ವಿಕಲ್ಪ ವಿಸ್ತರ, (iv) ಸಖಸಖೀ ಸಂಭೋಗ ವಿಪ್ರಲಂಭ ಪ್ರಮಾ ವಿಸ್ತರ—ಎಂಬ 4 ಪರಿಚ್ಛೇದಗಳಿವೆ. "…. ಚಿತ್ತದಿಂ ಕಾಣ್ಬುದು ಭಾವಂ, ಭಾವದಿಂ ಪುಟ್ಟುಗುಂ ಒದವಿ ರಸಂಗಳ್…." ಎನ್ನುವುದರಿಂದ ಇಲ್ಲಿ ರಸಾನುಭವದ ಬಾಹ್ಯ ಚಿಹ್ನೆಗಳಿಗೇ ಪುರಸ್ಕಾರ ಕೊಟ್ಟಿರುವಂತೆ ಮೇಲು ನೋಟಕ್ಕೆ ಕಂಡರೂ, ನಾಯಕ ನಾಯಿಕೆಯರ ಭಾವವು ಪುಷ್ಟಿಗೊಂಡಾಗ ..ರಸವು ಉಂಟಾಗುವುದೆಂದೂ ಕವಿಕಾಮನ ಅಭಿಪ್ರಾಯ [ಭಾ|| ಕಾ|| ಮೀಮಾಂಸೆ ಪುಟ 451] ಈತನು ಸ್ಥಾಯಿಭಾವ ಸಂಚಾರಿಭಾವಗಳನ್ನು ಹೇಳಿದ್ದರೂ, ವಿಭಾವಾನುಭಾವಗಳನ್ನು ಹೆಸರಿಸಿಲ್ಲದಿರುವುದು ವಿಚಾರಾರ್ಹವಾಗಿದೆ.

5ನೆಯದು ಮಾಧವನ [ಸು. 1500] 'ಮಾಧವಾಲಂಕಾರ'. ಇದು ದಂಡಿಯ 'ಕಾವ್ಯಾದರ್ಶ'ದ ಕ್ರಮವಾದ ಕನ್ನಡ ಭಾಷಾಂತರ. ಇದರಲ್ಲಿ 3 ಪರಿಚ್ಛೇದಗಳಿವೆ. ಒಂದು ಪದ್ಯ ಇದು:

ಪದದಿಂದೆ ಶಬ್ದದೀಪಂ
ವಿದಿತಂ ಬೆಳಗದೊಡೆ ಸಕಲ ಲೋಕ ನಿವಾಸಂ |
ಪುದಿಯುದದೇಂ ಮಾಣ್ಬುದೆ ಕೇಳ್
ಪೊದಳ್ದಜ್ಞಾನಾಂಧಕಾರದಿಂದನವರತಂ ||

[i-20]

ಸುಮಾರು 1550ರಲ್ಲಿದ್ದ ಸಾಳ್ವನ "ರಸರತ್ನಾಕರ" ಮತ್ತು "ಶಾರದಾ ವಿಲಾಸ"—ಇವು ಕ|| ಅ|| ಗ್ರಂಥಗಳಲ್ಲಿ 6 ಮತ್ತು 7ನೆಯ ಕೃತಿಗಳು. 'ರಸರತ್ನಾಕರ'ದಲ್ಲಿ [i] ಶೃಂಗಾರ ಪ್ರಪಂಚ ವಿವರಣಂ [ii] ನವರಸ ಪ್ರಪಂಚ ವಿವರಣಂ [iii] ನಾಯಕ ನಾಯಿಕಾ ವಿವರಣಂ [iv] ವ್ಯಭಿಚಾರಿಭಾವ ವಿವರಣಂ-ಎಂಬ 4 ಪ್ರಕರಣಗಳಿವೆ. ಲಕ್ಷಣ ಹಾಗೂ ಪ್ರಭೇದಗಳ ಜೊತೆಗೆ ಅಲ್ಲಲ್ಲೇ "ವಿಚಾರ"ವನ್ನೂ ಸೇರಿಸಿರುವುದು ಸಾಳ್ವನ ವಿಶೇಷ ಗುಣ.

"ಭಾವದೆ ಪುಟ್ಟಿದ ರಸಮಂ ಭಾವುಕರದನರಿದು ಸವಿವುದೇ ಅನುಭಾವಂ" ಎಂದು ಅರಿವುಗೊಂಡಿದ್ದಾನೆ ಕೃತಿಕಾರ.

"ಶಾರದಾ ವಿಲಾಸ"ದಲ್ಲಿ ಈಗ ನಮಗೆ ದೊರೆತಿರುವುದು "ಧ್ವನಿ ವ್ಯಂಗ್ಯ ಪ್ರಕರಣ"ವೆಂಬ ಇದರ ಎರಡನೆಯ ಆಶ್ವಾಸ ಮಾತ್ರ. "ಧ್ವನಿ"ಯ ಬಗ್ಗೆ ಕನ್ನಡದಲ್ಲಿ ನಿರೂಪಣೆಯಿಲ್ಲದಿರುವುದನ್ನು ಮನಗಂಡ ಕವಿಸಾಳ್ವನು ಆ ಕೊರತೆಯನ್ನು ಪರಿಹರಿಸಲು ಈ ಕೃತಿಯಲ್ಲಿ ಪ್ರಯತ್ನ ಮಾಡಿರುವುದು ಕಂಡುಬರುತ್ತದೆ.

8ನೆಯದು "ತಿಮ್ಮ" ಕವಿಯ [ಸು.1600] "ನವರಸಾಲಂಕಾರ". ಇದೊಂದು ಸಂಕಲನ. ಸೂತ್ರ. ವೃತ್ತಿ ಮೊದಲಾದುವನ್ನು ಸಂಸ್ಕೃತದ ಅಮೃತಾನಂದೀಯ, ಸಿಂಗಭೂಪಾಲೀಯ, ಏಕಾವಳಿ, ರಸಕಳಿಕೆಗಳಿಂದಲೂ ಕನ್ನಡದ ಉದಾಹರಣ ಪದ್ಯಗಳನ್ನು ಪಂಪ, ಪೊನ್ನ, ನೇಮಿಚಂದ್ರ, ನಾಗಚಂದ್ರ ಮೊದಲಾದ ಪೂರ್ವಕವಿಗಳ ಗ್ರಂಥಗಳಿಂದಲೂ ತೆಗೆದು ಉದ್ಧರಿಸಿದ್ದಾನೆ.

ಕ್ರಿ. ಶ. 1645ರಿಂದ 1706ರ ವರೆಗೆ ಚಿಕ್ಕದೇವರಾಜ ಒಡೆಯರ ಮಂತ್ರಿಯಾಗಿದ್ದ ತಿರುಮಲಾರ್ಯನು ಬರೆದ "ಅಪ್ರತಿಮ ವೀರಚರಿತ"ವು 9ನೆಯದು. ಇದರಲ್ಲಿ ವಾಮನನ ಮತವನ್ನನುಸರಿಸಿ ಶಬ್ದಗುಣ ಅರ್ಥಗುಣಗಳನ್ನೂ, ವಿದ್ಯಾನಾಥನ ಪ್ರತಾಪರುದ್ರೀಯದ ಪ್ರಕಾರ ರೀತಿ ಶಯ್ಯಾ ಪಾಕಾದಿಗಳನ್ನೂ ಕೆಲವು ಶಬ್ದಾಲಂಕಾರಗಳನ್ನೂ ಸಂಗ್ರಹವಾಗಿ ಹೇಳಲಾಗಿದೆ. ಧ್ವನಿ ವಿವರಣೆ, ರಸವಿಚಾರ, ದೋಷ ನಿರೂಪಣೆಗಳ ಬಗ್ಗೆ ವಿಚಾರ ನಡೆದಿಲ್ಲ. ತನ್ನ ಸ್ವಾಮಿಯಾದ ಚಿಕ್ಕದೇವರಾಜನ ಮಹಿಮೆ, ಶೌರ್ಯಾದಿಗಳನ್ನು ಕೀರ್ತಿಸುವ ಸ್ವಂತ ಪದ್ಯಗಳನ್ನು ಲಕ್ಷ್ಯವಾಗಿ ಕೊಟ್ಟಿದ್ದಾನೆ ತಿರುಮಲಾರ್ಯ.

ಜಾಯೇಂದ್ರನು [ಸು.1730] ಬರೆದಿರುವ "ಕುವಲಯಾನಂದಾಲಂಕಾರ" ಮತ್ತು "ರಸಮಂಜರಿ" —ಇವು 10 ಮತ್ತು 11ನೆಯ ಅಲಂಕಾರ ಗ್ರಂಥಗಳು.

ಇವುಗಳಲ್ಲಿ ಮೊದಲನೆಯದು ಅಪ್ಪಯ್ಯ ದೀಕ್ಷಿತನ ''ಕುವಲಯಾನಂದ"ದ ಕನ್ನಡ ಅನುವಾದ; ಎರಡನೆಯದರಲ್ಲಿ ['ಶೃಂಗಾರ ತಿಲಕ"ವೆಂದೂ ಇದಕ್ಕೆ ಹೆಸರುಂಟು.] ನಾಯಕ ನಾಯಿಕೆಯರ ಪ್ರಭೇದಗಳು, ಸಾತ್ತ್ವಿಕ ಭಾವಗಳು, ಶೃಂಗಾರದ ದಶಾವಸ್ಥೆಗಳು-ಮುಂತಾದ ವಿಷಯಗಳು ಪ್ರತಿಪಾದಿತವಾಗಿವೆ.

ಹನ್ನೆರಡನೆಯದು ಹಾಗೂ ಕೊನೆಯದು-ಮೈಸೂರಿನ ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿದ್ದ ''ಅಳಿಯ ಲಿಂಗರಾಜ"ನು [1823-81] ರಚಿಸಿದ ''ನರಪತಿ ವಿಜಯ". ಇದರಲ್ಲಿ ಪ್ರಭು ಮುಮ್ಮಡಿ ಕೃಷ್ಣಭೂಪರನ್ನು ನಾಯಕರನ್ನಾಗಿ ಮಾಡಿಕೊಂಡು ''ಚಂಪ್ರಾಲೋಕ" ವನ್ನು ಅನುಸರಿಸಿ ಅಲಂಕಾರಗಳನ್ನು ರಚಿಸಲಾಗಿದೆ.

ಒಟ್ಟಿನಲ್ಲಿ ಹಳಗನ್ನಡದಲ್ಲಿರುವ ಎಲ್ಲ ಅಲಂಕಾರ ಗ್ರಂಥಗಳೂ ಸಂಸ್ಕೃತ ಗ್ರಂಥಗಳನ್ನನುಸರಿಸಿ ವಿರಚಿತವಾದವು. ಬಹುಮಟ್ಟಿಗೆ ನೂತನ ವಿಷಯಗಳು ಆವಿರ್ಭವಿಸದೆ ಹಿಂದ-ಹಿಂದಣ ವಿಚಾರಗಳೇ ಮತ್ತೆ ಮತ್ತೆ ಬರುತ್ತಿರುವುದು ಕಂಡುಬರುತ್ತದೆ.

ಆಧುನಿಕ ವಿದ್ವಾಂಸರ ಪೈಕಿ ''ಅಲಂಕಾರ ಶಾಸ್ತ್ರ"ದ ಬಗ್ಗೆ ಯೋಗ್ಯ ಕೆಲಸ ಮಾಡಿರುವ ಮಹನೀಯರು—

[i] ಶ್ರೀ ಎ. ಆರ್. ಕೃಷ್ಣಶಾಸ್ತ್ರಿಗಳು ಹಾಗೂ ವರದಾಚಾರ್ಯರು [ಕ॥ ಕೈಪಿಡಿ]

[ii] -"- ತೀ. ನಂ. ಶ್ರೀ [ಭಾರತೀಯ ಕಾವ್ಯ ಮೀಮಾಂಸೆ]

[iii]-"- ಡಾ॥ ಕೆ. ಕೃಷ್ಣಮೂರ್ತಿ [ಕ॥ಧ್ವನ್ಯಾಲೋಕ... ಕೃತಿಗಳು ಹಾಗು...ಲೇಖನಗಳು]



# ಪಂಚಾಚಾರ

ಲೇಖಕರು :

**ಪಂಡಿತ ಮ. ಮಲ್ಲಪ್ಪ**

ವೀರಶೈವ ತತ್ವಜ್ಞಾನದಲ್ಲಿ ಅಷ್ಟಾವರಣ, ಷಟ್ಸ್ಥಲ ಮತ್ತು ಪಂಚಾಚಾರ ಬಹುಮುಖ್ಯವಾಗಿವೆ. ಜ್ಞಾನ ಪ್ರಾಪ್ತಿಗೆ ಇವು ಫಲಕಾರಿ ಸಾಧನೆಗಳಾಗಿವೆ.

"ಅಷ್ಟಾವರಣ ಸಂಪನ್ನಃ ಪಂಚಾಚಾರ ಪರಾಯಣಃ । ವೈದಿಕಂ ಕರ್ಮ ಕುರ್ವೀತ ಜ್ಞಾನೈಕ ಫಲ ಸಾಧನಮ್ [೧]"

ಆಚಾರಃ ಪ್ರಥಮೋ ಧರ್ಮಃ ಎಂಬ ಉಕ್ತಿಯು ಆಚಾರದ ಮಹತಿಯನ್ನು ತಿಳಿಸುತ್ತದೆ. ಆಚಾರವಿಲ್ಲದ ಅರಿವು ಗಣನೆಗೆ ಬಾರದು. ಮಾನವನ ಸರ್ವತೋಮುಖ ವಿಕಾಸಕ್ಕೆ ಆಚಾರವೇ ಅನುಕೂಲಕರವಾಗಿರುತ್ತದೆ. ಸೂಕ್ಷ್ಮಾಂಗವಿಕಾಸವು ದೊರಕದಿದ್ದರೆ ಮಾನವನು ಹೀನಜೀವಿಯಾಗುತ್ತಾನೆ. "ಒಬ್ಬ ಪುರುಷನು ತನ್ನ ಆಚಾರ ವಿಚಾರ, ಆಹಾರ ವಿಹಾರಾದಿಗಳನ್ನು ವ್ಯತ್ಯಾಸ ಪಡಿಸಿಕೊಂಡರೆ, ಅವನ ಆ ಹೊಸನಡತೆಯ ಶೀಲ ಸ್ವಭಾವಾದಿಗಳನ್ನು ಅವನ ವೀರ್ಯಕಣಗಳು ಆಕರ್ಷಿಸಿ ಸಂಗ್ರಹಿಸಿಟ್ಟುಕೊಂಡಿದ್ದು ಅವನ್ನು ಸಂತಾನ ರೂಪವಾಗಿಹೊರಗೆಡಹುತ್ತವೆ." ಮಾನವನ ನೈತಿಕ ಬೆಳವಣಿಗೆಗೆ ಆಚಾರವೇ ಪರಮಸಾಧನೆಯು. ಆಚಾರವೇ ಸ್ವರ್ಗ ಅನಾಚಾರವೇ ನರಕ ಎಂದು ಬಸವೇಶ್ವರರು ಹೇಳಿದರೆ ಆಚಾರ ಸಹಿತ ಭಕ್ತ, ಅನಾಚಾರ ಸಹಿತ ನರ ಎಂದು ಚೆನ್ನ ಬಸವೇಶ್ವರರು ಹೇಳಿದ್ದಾರೆ. ಆಚಾರ ಬಿಟ್ಟು ಮತ್ತೊಂದು ಮಾನವನಿಗಿಲ್ಲ. "ಆಚಾರವೇ ಭಕ್ತಂಗೆ ಅಲಂಕಾರವು. ಆಚಾರವೇ ಭಕ್ತಂಗೆ ಸರ್ವ ಪೂಜ್ಯವು. ಇಂತೀ ಆಚಾರವುಳ್ಳವನೇ ಭಕ್ತನು ಆಚಾರವುಳ್ಳವನೇ ಮುಕ್ತನಯ್ಯಾ. ನಿಜಗುರುಸ್ವತಂತ್ರ ಸಿದ್ಧಲಿಂಗೇಶ್ವರಾ" [೩] ಧರ್ಮದೃಷ್ಟಿಯಿಂದ ಆಚಾರವು ಲಿಂಗರೂಪವನ್ನು ಪಡೆದಿರುವುದು. ಭಕ್ತಸ್ಥಲದ ಆಚಾರ ಲಿಂಗ, ಅಷ್ಟಾವರಣದ ಕ್ರಿಯಾಲಿಂಗ ಇವು ನಿದರ್ಶಿಸುತ್ತವೆ. ನಡತೆಗೆ ಸಾಧನ, ಆತ್ಮ ತತ್ವ ಪ್ರಕಾಶಸಾಧ್ಯವು ಆಚಾರವಾಗಿದೆ. ಲಿಂಗಾಚಾರ, ಸದಾಚಾರ, ಶಿವಾಚಾರ, ಭೃತ್ಯಾಚಾರ, ಗಣಾಚಾರ— ಇವುಗಳೇ ಪಂಚಾಚಾರಗಳು. ವೀರಶೈವರಿಗೆ ಷಟ್ಸ್ಥಲಾಚಾರಗಳೇ ಪ್ರಾಣ ಎಂಬ ಉಕ್ತಿಯು ಮಹತ್ವ ಪೂರಿತವಾಗಿದೆ." [೪] ಪಂಚಾಚಾರಗಳು ಮಾನವನಿಗೆ ಷಟ್ಸ್ಥಲೋಪಾಸನೆಗೆ ತುಂಬ ಸಹಾಯಕಗಳಾಗಿವೆ. ಇವುಗಳ ಆಚರಣೆಯಿಂದ ಮಾನವನ ಅಹಂಕಾರಾಭಿಮಾನಗಳೂ, ರಾಗ ದ್ವೇಷಗಳೂ, ಕಾಮಕ್ರೋಧಗಳೂ ತೊಲಗಿ ಅವನಲ್ಲಿ ಸಮದೃಷ್ಟಿ ದಾಸಭಾವ ನಿರಹಂಕಾರತೆಗಳು ಸಹಜವಾಗಿ ವ್ಯಾಪಿಸುವುವು.

ಇಷ್ಟಲಿಂಗವಲ್ಲದೆ ಬೇರೆ ದೇವರ ಪೂಜೆಯು ಇಲ್ಲದಿರುವುದೇ ಲಿಂಗಾಚಾರ. ಲಿಂಗ ಸಾಧನೆಯೇ ಇದರ ಪರಮಗುರಿ, ಲಿಂಗದ ನಡೆ, ಲಿಂಗದ ನೋಟ, ಲಿಂಗದ ಕಳೆ. ಲಿಂಗದ ಗುಣ ತನ್ನಲ್ಲಿ ವೈತಾಳುವುದೇ ಲಿಂಗಸಿದ್ಧಿಯು. ಇಷ್ಟಲಿಂಗೋಪಾನೆಸಯಿಂದ ಲಿಂಗಸಿದ್ಧಿಯು ಲಭ್ಯವಾಗುತ್ತದೆ. ಇಷ್ಟಲಿಂಗದ ಪೂಜೆ ಧ್ಯಾನಾದಿಗಳಿಂದ ಇಷ್ಟ ಲಿಂಗದಲ್ಲಿ ಸಮರತಿಯನ್ನು

---

೧ ಶಂಕರ ಸಂಹಿತೆ ೨ ಜೀವಾತ್ಮ ೩ ವಚನ ಶಾಸ್ತ್ರಸಾರ ೪ ಷಟ್ಸ್ಥಲ ಸಿದ್ಧಾಂತ. ಪುಟ ೧೦೬ ಡಾ॥ ಟಿ. ಜಿ. ಸಿದ್ಧಪ್ಪಾರಾಧ್ಯ.

ಪಡೆಯುವುದೇ ಇಷ್ಟಲಿಂಗೋಪಾಸನೆಯು. "ಅಂಗವ ಸರಿವನಕ್ಕವಶಿಲಿಂಗಪೂಜೆಯ ಮಾಡಲೇಬೇಕು. ಆತ್ಮನ ಕ್ಷುಧೆಯುಳ್ಳನಕ್ಕ ಬಂದ ಪದಾರ್ಥವ ಲಿಂಗಾರ್ಪಿತ ಮಾಡಲೇಬೇಕು. ಇದು ಅರಿವಿನ ಬಿತ್ತು, ಜ್ಞಾನದ ಗೊತ್ತು. ಸರ್ವಸಮಯದ ಯುಕ್ತಿ ಈ ಶಾನ್ಯ ಮೂರ್ತಿ ಮಲ್ಲಿಕಾರ್ಜುನ ಲಿಂಗವನರಿವಶಕ್ತಿ.೫" ಪತಿವ್ರತೆಯಾದ ಸತಿಗೆ ಒಬ್ಬನೇ ಗಂಡನಿರುವಂತೆ ನಿಷ್ಠಾಪರನಾದ ವೀರಶೈವನಿಗೆ ಇಷ್ಟಲಿಂಗ ಒಂದೇ ದೈವವಾಗಿದೆ. ದಿನಪೂರ್ತಿಕಾಲದಲ್ಲಿ ಲಿಂಗಪೂಜೆಮಾಡಬೇಕು. ಇಷ್ಟ ಲಿಂಗ ಪ್ರಾಣಲಿಂಗ ಭಾವಲಿಂಗಗಳಲ್ಲಿ ಆಚಾರ ಲಿಂಗ ಗುರುಲಿಂಗ ಶಿವಲಿಂಗ ಜಂಗಮ ಲಿಂಗ ಪ್ರಸಾದ ಲಿಂಗ ಮಹಾಲಿಂಗಗಳಾಗುತ್ತವೆ. ಇಷ್ಟಲಿಂಗದಿಂದ ತನುಶುದ್ಧಿ, ಭಾವಲಿಂಗದಿಂದ ಭಾವಶುದ್ಧಿ, ಪ್ರಾಣಲಿಂಗದಿಂದ ಮನಶುದ್ಧಿಯಾಗುತ್ತದೆ. ಲಿಂಗಾಚಾರದಿಂದ ಜೀವಶುದ್ಧಿಯಾಗುತ್ತದೆ. ಸಕಲವನ್ನೂ ಲಿಂಗಮಯವಾಗಿ ನೋಡಬೇಕು, ರೂಪಿಸಬೇಕು ಲಿಂಗದಲ್ಲಿ ಲಿಂಗಧಾರಿಗಳಲ್ಲಿ, ಲಿಂಗೋಪಾಸಕರಲ್ಲಿ, ಯಾವಬಗೆಯ ಭೇದವನ್ನೂ ಎಣಿಸಬಾರದು. ವೀರಶೈವಧರ್ಮದ ಪ್ರಥಮ ನೈತಿಕಾಚಾರವು ಲಿಂಗಾಚಾರವು." ಲಿಂಗವಲ್ಲದೆ ಅನ್ಯವನರಿಯದಿಹುವೇ ಲಿಂಗಾಚಾರ, ಶ್ರೀಗುರು ಕರುಣಿಸಿಕೊಟ್ಟ ಲಿಂಗ ಜಂಗಮವಲ್ಲದೆ ಅನ್ಯದೈವಂಗಳ ತ್ರಿಕರಣದಲ್ಲಿ ಅರ್ಚಿಸದಿರುವುದೇ ಲಿಂಗಾಚಾರ೬" ಲಿಂಗಗುಣವನ್ನು ಅಂಗಗುಣದಲ್ಲಿ ಅಳವಡಿಸುವುದೇ ಇದರ ಮರ್ಮ.

ತನಗೂ ಪರರಿಗೂಹಿತವಾಗುವಂತೆ ಇತರರಿಗೆ ನೋವಾಗದಂತೆ ನಡೆದುಕೊಳ್ಳುವುದೇ ಸದಾಚಾರ. ಸತತವೂ ಒಳ್ಳೆಯ ನಡೆನುಡಿಗಳಿಂದ ನಡೆಯುವವನೇ ಸದಾಚಾರಿಯು. ಸಜ್ಜನಃ ಶಿವಭಕ್ತಶ್ಚಯೇನ ಮಾರ್ಗೇಣ. ಸರ್ವದಾ ತುಷ್ಟಸ್ತೋಷಯತೇ ದೇವಿ ಸದಾಚಾರಃ ಸ್ಮೃತಃಸಃ॥೭ಸದ್ಗುಣಭರಿತನಾಗಿರುವುದರಿಂದಲೇ ತನಗೂ ಇತರರಿಗೂ ಹಿತಪ್ರದವಾಗಿರುವುದು. ಸಮಷ್ಟಿಚೇತನದ ಹಿತದ ಸಂಗಡ ವ್ಯಷ್ಟಿಚೇತನದ ಹಿತವನ್ನು ಸಾಧಿಸುವ ನೈತಿಕಜೀವನವೇ ಸದಾಚಾರದ ಉಸಿರು. ಲೋಕ ವ್ಯವಹಾರದಲ್ಲಿ ಸರಿಯೆನಿಸಿಕೊಂಡುಸಾಗಬೇಕಾದರೆ ಮಾನವನು ಒಳ್ಳೆಯಸ್ವಭಾವದವನಾಗಿರಬೇಕು. ಕೆಟ್ಟ ಕೆಲಸಗಳಿಂದ ವಿದೂರನಾಗಿರುವುದೇ ಸದಾಚಾರವು. "ನುಡಿಯಲಿ ಕರ್ಕಶವಿಲ್ಲದೆ ನಡೆಯಲ್ಲಿ ಬೇಸರ ಪೋಗದೆ, ಹಿಡಿದ ಭಕ್ತಿಯ ಕಡೆತನಕ ಬಿಡದೆ, ಬಡತನ ಎಡರು ಕಂಟಕಗಳು ಬಂದಲ್ಲಿ ಚಿಂತೆಯಿಂದ ಕಾಂತಿಗುಂದದೆ "ಶಿವಶಿವಾ" ಎಂಬ ನುಡಿಯ ಮರೆಯದಿರ್ದ ಸದ್ಭಕ್ತರಿಗೆ ಬೇಡಿದ ಪದವಿಯನೀವ ನಮ್ಮ ಅಖಂಡೇಶ್ವರಾ೮ ಅಪಾನ ಪೇಯ. ಅಭಕ್ಷ ಭಕ್ಷಣ, ಕೊಲೆ, ಚೋರತನ ನಿಂದೆ ಮೊದಲಾದ ಕೃತಿಗಳೆಲ್ಲವೂ ನಿಂದ್ಯವಾದವುವೆಂದು ಎಲ್ಲರೂ ಒಪ್ಪಿಕೊಳ್ಳುತ್ತಾರೆ. ಈ ಬಗೆಯಿಂದ ಸಮಾಜದ ಶಾಂತಿರಕ್ಷಣೆಯು ಉಳಿಯದು. ಇಂತಹದನ್ನು ಕಾನೂನಿಂದ ಕಾಪಾಡದೆ ಪ್ರೀತಿಯಿಂದ ಕಾಪಾಡುವ ಸದಾಚಾರದ ಸನ್ನುತಿಯು ಯಾರಿಗೆ ತಾನೇ ಬೇಡ ! ಇದರಿಂದ ಮನುಶ್ಯಧ್ಧಿಯಾಗುತ್ತದೆ." ಸದಾಚಾರದಲ್ಲಿ ಉನ್ನತ್ತಶೀಲ, ಆಚಾರಶೀಲ, ಸಂಬಂಧಶೀಲಲ, ಉದ್ಯೋಗಶೀಲ. ಉತ್ಕಲಶೀಲ, ಪ್ರಸನ್ನಶೀಲ್ಲ,ಜ್ಞಾನಶೀಲ, ಮುಂತಾದಎಂಟುಬಗೆಗಳಿವೆ. "ಷಟ್ ಸ್ಥಲ ತತ್ವಗಳಿಗನುಸರಿಸಿ, ನೀತಿಯುತನಾಗಿ ತಾನು ನಡೆಯುವುದಲ್ಲದೆ, ತನ್ನ ಮನೆಯವರೆಲ್ಲರೂ ನಡೆಯುವಂತೆ ಮಾಡಿ, ತ್ಯಾಜ್ಯ ಹಾರಾದಿಗಳನ್ನು ಬಿಟ್ಟು, ಪಾದೋದಕ ಪ್ರಸಾದೋಪಜೀವಿ ಯಾಗಿರತಕ್ಕದ್ದು. ಮತ್ತು ಉದ್ಯೋಗಶೀಲನಾಗಿ, ಆ ಉದ್ಯೋಗವನ್ನು ಪ್ರಮಾಣಿಕನಾಗಿ ಶಿವಾರ್ಪಣ ಬುದ್ಧಿಯಿಂದ ಮಾಡತಕ್ಕದ್ದು ಮತ್ತು ತನ್ನನಡತೆಯನ್ನು ಸಜ್ಜನಸದ್ಭಕ್ತರು ಒಪ್ಪುವಂತೆ ನೀತಿಮಯವಾಗಿರಿಸಬೇಕು. ಈ ಬಗೆಯ ವರ್ತನವೇ ಸದಾಚಾರವೆನಿಸುವುದು. ಕಾಯಕ ನಿರತನಾಗಿ ಸ್ವಾವಲಂಬಿಯಾಗಿ ಪರಹಿತರತನಾಗಿ ಜೀವಿಸಬೇಕೆಂಬುದೇ ಸದಾಚಾರದ ಗೊತ್ತುಗುರಿ ಯಾಗಿರುವಲ್ಲಿ ಕಾಯಕ ಕಲ್ಪನೆಯ ಮಹತಿಯು ವೀರಶೈವರಲ್ಲಿ ಮೂರ್ತಗೊಂಡಿರುವುದು ಸ್ಪಷ್ಟವಾಗುತ್ತದೆ.

ವೀರಶೈವರನ್ನೆಲ್ಲ ಒಂದೇ ಎಂದು, ಲಿಂಗಾಂಗಿಗಳನ್ನೆಲ್ಲ ಒಂದೇ ಎಂದು ಯಾವ ಭೇದವನ್ನೂ ಎಣಿಸದೆ

---

೫ ೬ ಸೂಕ್ಷ್ಮಾಗಮ. ವಚನ ಶಾಸ್ತ್ರಸಾರ ೭ ಚನ್ನಬಸವೇಶ್ವರ ೮ ಷಣ್ಮುಖಸ್ವಾಮಿ.
೯ ವೀರಶೈವಾಚಾರ ಪ್ರದೀಪಿಕೆ.

ನಡೆಯುವುದೇ ಶಿವಾಚಾರ. "ಶೈವಾಚಾರವು ಸಾಮಾಜಿಕದಲ್ಲಿ ಒಂದು ಅಪೂರ್ವ ಸಂಘಟನೆಶಕ್ತಿಯನ್ನು ತುಂಬುತ್ತದೆ. ಸಮಾಜ ರಚನೆಗೆ ಸಮಾಜ ಸ್ಥಿರತೆಗೆ ಅಡಿಗಲ್ಲಾಗಿದೆ ಶಿವಾಚಾರ. ಸಮಾಜಗಳಿಗೂ ರೀತಿ ನೀತಿಗಳಿಗೂ ಧರ್ಮ ಧ್ಯೇಯ ಗಳಿಗೂ ಉತ್ತೇಜಕವಾಗಿ ವಜ್ರಕವಚವಾಗಿದೆ ಶಿವಾಚಾರ."೧೦ ಶಿವಾಚಾರಿಗಳಿಗೆ ಶಿವನೇ ತಂದೆಯು, ಪಾರ್ವತಿಯೇ ತಾಯಿಯು, ಶಿವಭಕ್ತರೇ ಬಂಧುಗಳು, ಶಿವಕುಲವೇ ಶ್ರೇಷ್ಠಕುಲವು ಎಂದು ಆಗಮಗಳಲ್ಲಿ ಕಟ್ಟಳೆಗಳಿರುತ್ತವೆ. ಇದರಿಂದ ಸಮಾಜದ ಬಂಧುರತೆಗೆ ಅವಕಾಶವಾಗುತ್ತದೆ. ಶಿವಾಚಾರವು ಸಮಾಜ ಗೌರವಕ್ಕೂ ದೃಢತೆಗೂ ಮೂಲಾಧಾರ ವೆನಿಸಿದೆ. ಸಮಾಜದಲ್ಲಿ ಸಮತೆಯು ಬೆಳೆದು ವಿಷಮತೆಯು ಇಲ್ಲವಾಗುತ್ತದೆ. ದೀಕ್ಷೆಯಿಂದ ಪೂರ್ವದ ಗುಣಗಳೆಲ್ಲವೂ ನಷ್ಟವಾಗುವುದರಿಂದ ಸರ್ವರಲ್ಲಿಯೂ ಏಕರೀತಿಯ ಬಳಕೆ ವ್ಯವಹಾರವು ನಡೆದು ಸರ್ವಸಮತಾಭಾವನೆಗೆ ಅವಕಾಶವಾಗುತ್ತದೆ. ಮನ ಬಯಸಿದುದನ್ನು ಶಿವಾಚಾರದಿಂದ ಸಂಪಾದಿಸಿ ಸುಖಪಡಬೇಕು. "ಭಕ್ತನ ಮನ ಹೆಣ್ಣಿನೊಳಗಾದರೆ, ವಿವಾಹವಾಗಿ ಕೂಡುವುದು. ಭಕ್ತನ ಮನ ಮಣ್ಣಿನೊಳಗಾದರೆ ಕೊಂಡು ಆಲಯವ ಮಾಡುವುದು. ಭಕ್ತನ ಮನ ಹೊನ್ನಿನೊಳಗಾದರೆ ಬಳಲಿ ದೊರಕಿಸುವುದು ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನಾ" ೧೨ ಶಿವಭಕ್ತರೆಲ್ಲರೂ ಪ್ರಾಣ ಸ್ವರೂಪಿಗಳಾಗಿ ಗುರುಜಂಗಮರಿಗೆ :ಅರ್ಥ ಪ್ರಾಣಾಭಿಮಾನವನ್ನು ಅರ್ಪಿಸುವುದೇ ಶಿವಾಚಾರ.

ಶಿವಭಕ್ತರಿಗೆ, ಶಿವಗಣಕ್ಕೆ, ಶಿವಲಿಂಗಕ್ಕೆ, ಶಿವ ಧರ್ಮಕ್ಕೆ ಅನ್ಯಾಯವೆಸಗುವಂತಹ ಪ್ರಸಂಗದಲ್ಲಿ ಉಚಿತ ರೀತಿಯಿಂದ ಪ್ರತಿಭಟಿಸುವುದೇ ಗಣಾಚಾರ. ಇದರಿಂದ ನಡೆನುಡಿಯು ಶುದ್ಧಿಯಾಗುತ್ತದೆ. ಸಮಾಜವು ಕೇವಲ ಸಾತ್ವಿಕವಾಗಿಇಲ್ಲವೇ ಅತಿ ವಿನಯವಿನೀತವಾಗಿದ್ದರೆ ಅದು ಒಮ್ಮೊಮ್ಮೆ ಶಕ್ತಿಹೀನವೆನಿಸಿಕೊಂಡು ಪ್ರಗತಿಯನ್ನು ಪಡೆಯದಂತಾಗುತ್ತದೆ. ಈ ಸದ್ವೃತ್ತಿ ಶೀಲವನ್ನು ದುಷ್ಟರು ದುರುಪಯೋಗಪಡಿಸಿಕೊಳ್ಳಲು ಯತ್ನಿಸುತ್ತಾರೆ. ಆಗ ದುರ್ಬಲರನ್ನು ಕಾಪಾಡುವುದು ಕಷ್ಟಕರವಾಗುತ್ತದೆ. ಅಷ್ಟೇ ಅಲ್ಲದೆ ಆ ಸಮಾಜವು ಅಪಹಾಸ್ಯಕ್ಕೆ ಗುರಿಯಾಗಬೇಕಾಗುತ್ತದೆ. ಆದಕಾರಣ ಈ ಬಗೆಯ ದುಷ್ಪ್ರವೃತ್ತಿಯನ್ನು ನಿರ್ಮೂಲಗೊಳಿಸಬೇಕಾಗುತ್ತದೆ. ದುಷ್ಟ ನಿಗ್ರಹ ಮತ್ತು ಶಿಷ್ಟ ಪರಿಪಾಲನೆಯ ಕಾರ್ಯ ಪ್ರವೃತ್ತವಾಗುವುದರ ಮೂಲಕ ಈ ಗುಣಗಳು ಗಣಾಚಾರದಲ್ಲಿ ಸಮಾವೇಶಗೊಳ್ಳುತ್ತವೆ. ವ್ಯಕ್ತಿ ಇಲ್ಲವೇ ಸಮಾಜವಿಘಾತಕಾರ್ಯವು ತಲೆಹಾಕಿದಾಗ ಅದನ್ನು ಎದುರಿಸಿ ವಿನಾಶಗೊಳಿಸಬೇಕು ಇಲ್ಲವೇ ಅದಕ್ಕಾಗಿ ಪ್ರಾಣವನ್ನೇ ಸಮರ್ಪಿಸಲು ಸಿದ್ಧನಾಗಬೇಕು ವ್ಯಕ್ತಿಗತ ದುರ್ಗುಣದ ನಾಶವೇ ಇದರ ಪರಮ ಗುರಿಯು. ಅರುವತ್ತುನಾಲ್ಕು ಶೀಲಗಳನ್ನು ಬಿಡದೆ ನಡೆಯಿಸುವುದೇ ಗಣಾಚಾರ.

ವೀರಶೈವರ ಕಲ್ಯಾಣಕ್ಕಾಗಿ ವೀರಶೈವರ ಉದ್ಧಾರಕ್ಕಾಗಿ ಅವರ ಸೇವೆಯನ್ನು ಮಾಡುವುದೇ ಭೃತ್ಯಾಚಾರ. "ಭೃತ್ಯಾಚಾರ ಎಂಬುದು ಸಮಾಜದಲ್ಲಿ ವ್ಯಕ್ತಿ ಹೊಂದಿಕೊಳ್ಳುವ ಬಗೆಯನ್ನು ವಿಧಿಸುತ್ತದೆ. ಭೃತ್ಯಾಚಾರವೇ ಒಂದು ವಿಧದಲ್ಲಿ ಭಕ್ತ್ಯಾಚಾರ. ಆದುದರಿಂದ ಭಕ್ತಸ್ಥಲದಲ್ಲಿ ಹೇಳಿರುವುದೆಲ್ಲ ಭೃತ್ಯಾಚಾರಕ್ಕೆ ಅನ್ವಯಿಸುತ್ತದೆ. ಗುರುಲಿಂಗಜಂಗಮಕ್ಕೆ ಕಿಂಕರಭಾವದಿಂದ ನಡೆದುಕೊಳ್ಳಬೇಕು. ಭಕ್ತನಿಗೆ ಎಂದರೆ ಲಿಂಗವಂತರಿಗೆ ತಾನು ದಾಸನೆಂದು ತಿಳಿಯಬೇಕು ೧೩. ಭೃತ್ಯಾಚಾರವು ಸದಾಚಾರಕ್ಕೆ ಕೈಗನ್ನಡಿಯಾಗಿದೆ. ಶಿವಭಕ್ತರನ್ನು ಕಂಡರೆ ಅವರಿಗೆ ಆಳಾಗಿ ಇರುವುದು: ಏನೂ ಸಣ್ಣಕೆಲಸವಲ್ಲ. ಅದು ಒಂದು ಮಹಾಭಾಗ್ಯಶೀಲರ ಸುಕೃತಿಯು. ಆದಕಾರಣವೇ "ಎನಗಿಂತ ಕಿರಿಯರಿಲ್ಲ ಶಿವಭಕ್ತರಿಗಿಂತ ಹಿರಿಯರಿಲ್ಲ೧೪'. ತಾನು ಎಲ್ಲರಿಗಿಂತಲೂ ದೊಡ್ಡವನು ಎಂದುಕೊಳ್ಳುವ ವೃತ್ತಿಯುಳ್ಳ ಸಣ್ಣ ಮನುಷ್ಯನು ಮತ್ತೊಬ್ಬನಿಲ್ಲ. ತಾವು ಕಡಿಮೆ ಎಂದು ಮಹನೀಯರು ಹೇಳಿಕೊಂಡಿದ್ದಾರೆ. ಆದಕಾರಣವೇ ಅವರು ಎಂದೆಂದಿಗೂ ದೊಡ್ಡವರಾಗಿ ಬೆಳಗಿದ್ದಾರೆ. ದಾಸಾನುದಾಸರಾಗಿ ಮಾನಾಪಮಾನಗಳನ್ನು ಸಹಿಸಿಕೊಂಡು ಹಗಲಿರುಳು ಸಮಾಜಸೇವಾ

---

೧೦ ಪಂಚಾಚಾರಪ್ರಕಾಶಿಕೆ ಪುಟ ೪೮ ೧೧ ಪಂಚಾಚಾರ ಪುಟ ೨೬. ೧೨ ವಚನಶಾಸ್ತ್ರ ಸಾರ. ೧೩. ವೀರಶೈವಾಚಾರ ಪ್ರದೀಪಿಕೆ ೧೪. ಬಸವೇಶ್ವರ.

ಕಾರ್ಯಗಳಲ್ಲಿ ನಿರತರಾದ ವಿಭೂತಿಗಳೇ ಭೃತ್ಯಾಚಾರಿಗಳು. ತನ್ನ ಸಮಾಜಸೇವೆಯನ್ನು ಪರಿಶುದ್ಧ ಅಂತಃಕರಣದಿಂದ ಅವಿಶ್ರಾಂತ ಪರಿಶ್ರಮದಿಂದ ಯಾರು ಮಾಡುತ್ತಾರೆಯೋ ಅಂತಹವರಲ್ಲಿ ನಿಜವಾದ ಯೋಗ್ಯತೆಯಿರುತ್ತದೆ. ಕಿಂಕರತೆಯೇ ಭೃತ್ಯಾಚಾರದ ಕುರುಹು. ದಾಸೋಹಂಭಾವದಿಂದ ಗುರುಲಿಂಗಜಂಗಮರುಗಳಿಗೆ ತನುಮನಧನವನ್ನು ಸಮರ್ಪಿಸುವುದು ಕಿಂಕರತೆಯು. ಭೃತ್ಯಭಾವವು ವಿನಯಾದಿ ಸದ್ಗುಣಗಳನ್ನು ಮೈಗೂಡಿಸುತ್ತದೆ: ಇತರ ಆಚಾರಗಳನ್ನು ಸಂಪುಷ್ಟಗೊಳಿಸುತ್ತದೆ."೧೩ ನಿಯಮಸಂಯುಕ್ತನಾಗಿ ಗುರುಲಿಂಗಜಂಗಮಕ್ಕೆ ದೇಹಾದಿಗಳನ್ನು ಅರ್ಪಿಸಿ ದಾಸ್ಯಭಾವದಿಂದಿರುರುವುದೇ ಭೃತ್ಯಾಚಾರ." "ಶಿವಶರಣರೇ ಹಿರಿಯರಾಗಿ ತಾನೇ ಕಿರಿಯನಾಗಿ ಭಯಭಕ್ತಿಯಿಂದ ಆಚರಿಸುವುದೇ ಭೃತ್ಯಾಚಾರ." "ವಿನಯದೊಡನೆ ವೀರತ್ವವೂ, ವೀರತ್ವದೊಡನೆ ವಿನಯವೂ ಇದ್ದರೆ ಮಾತ್ರ ಭೃತ್ಯಾಚಾರವು ಸಾರ್ಥಕವಾಗುತ್ತದೆ. ಭೃತ್ಯಾಚಾರವು ಚತುರ್ವಿಧವಿಭಾಗದಿಂದ ಆಗಿದೆ. ಶಿಷ್ಯನ ಭವವನ್ನು ಕಳೆದ ಗುರುವಿನಲ್ಲಿ ವಿನೀತ ಭಾವನೆಯು ಇರಬೇಕು. "ಹರನೆ ನಾ ನಿಮ್ಮಲ್ಲಿ ವರವ ಬೇಡುವೆನೊಂದು ಶರಣರಿಗೆ ಭೃತ್ಯನಾಗಿರಿಸೆನ್ನನು". ೧೪

---

೧೩. ವೀರಶೈವಾಚಾರ ಪ್ರದೀಪಿಕೆ ೧೪. ಮುಪ್ಪಿನಾರ್ಯರು.



# ಬರಿ ಬಿಸಿಲ್ಗುದುರೆ

ಪಂಚದಶವರ್ಷಗಳ ಹಿಂದಣಾ ನೆನಪೊಂದು
ಏಕೊ ಬಾಧಿಸುತಿಹುದು ಕಾರಣವ ನಾನರಿಯೆ;

o o o

"ನಂಬು ನಂಬೆಲೆ ಮನವೆ" ಎಂದನಾ ಸಪ್ಪಣ್ಣ,
ನಂಬಿಯೂ ಬಿದ್ದೆನಾ ಹಗಲಿನಲೆ ಕಮರಿಯೊಳು;

o o o o

ಇರ್ಪೈದು ಬರಿಸಗಳು ಮುನಿದಿದ್ದ ಮಾತುಲನು
ಬಂದೆನ್ನ ನೊಯ್ದಂದು ಮರೆತೆ ಹಿಂದಿನದೆಲ್ಲ;
ಮಧುರೇಂದ್ರನಳಿಯನನು ಕಾಳಿಗಕೆ ಕರೆಸಿದನು,
ಕರುಳ ಕಾಲಿಗೆ ಸುತ್ತಿ ಉರುಲು ಹಾಕಿದನಿವನು;
ಮದುವೆ ಕಳೆದಾಮೇಲೆ ಒಮ್ಮೆಯೂ ಕರೆಯಿಲ್ಲ,
ವಿಧಿಯೊಪ್ಪ ಬಟ್ಟೆಯಲೆ ಜನ ನಡೆಯಬೇಕಲ್ಲ!

o o o o

ಪ್ರಕೃತಿಚಕ್ರವು ತಿರುಗೆ ಒದವಿಬಂದತ್ತದುವೆ ದೀವಳಿಗೆ;
ಅತಿಶಯದ ಸಂಭ್ರಮವು ಊರೊಳಗೆ,
ಅತ್ತೆಮನೆಯುಪಚಾರವತಿಯೆಂದು ವರ್ಣಿಸಿದ,
ಮುಗ್ಧನೆಂಬುದನರಿತ ಗೆಳೆಯ ಬಲು ಕೆರಳಿಸಿದ;
ಮೊದಲಾಯ್ತು ಅಂಚೆಮನೆ ಹೊಸ್ತಿಲನು ತುಳಿಯುವುದು,
ಮನಸಿನಲೆ ಮಂಡಿಗೆಯ ಸವಿದುಂಡು ಬಳಲುವುದು;
ಇಡಿಯವಾರವೆ ತಿರುಗಿ ಉತ್ಸುಕತೆ ತಾ ಕರಗಿ
ನೀರಾಯ್ತೊ ಎಂಬಂತೆ ಅಶ್ರುಬಿಂದುಗಳುದುರೆ,
ಆ ಗೆಳೆಯ ಮುಂಬಂದು ಮನೆಗೆ ತಾ ಕರೆತಂದು
ಉಪಚರಿಸಿ ಸಾಂತ್ವನದ ನುಡಿಮಿಡಿದ : ಲೋಕದಲಿ
ಇಂತಪ್ಪ ಜನರಿಹರು; ವೊಲಕಿಂತ ಕರಕಷ್ಟ
ನರಬಾಳ್ವೆ–ಎಂದೆಂಬ ಬಸವರಸನಾವಾಣಿ
ಕೇಳಿಯೂ ಮರುಗುವರೆ? ಋತವೊಂದೆ ಗೆಲ್ವುದದು
– ಎಂದುನೀ ಧೈರ್ಯತಳೆ, ನಂಬಿಕೆಟ್ಟವರಿಲ್ಲ.
ಹುಲುಮಾನುಜ ಕೊಡಲೇನು? ನಿನ್ನಗುರು ಕೊಡಲುಂಟು;
ಒಂದಲ್ಲ – ಒಂದು ದಿನ ಮುಂಬರುವೆ ನೀನೆಂಬ
ದೃಢನಿಲುವು ಎನಗುಂಟು; ಬಾ ಗೆಳೆಯ ಚಿಂತೆಬಿಡು;
ಇಂತೆಂಬ ನೇಹನುಡಿ ತಂಪಮೂಡಿಸಿತೆನಗೆ.

o o o o

ಪಾಠವೊಂದನು ಕಲಿಸಿತದು – "ಬೇಡ ಭ್ರಮೆಮದಿರೆ;
ಬೆಂಬಿಡಿದು ಹೋಗದಿರು, ಅದು ಬರಿ ಬಿಸಿಲ್ಗುದುರೆ"

—"ಪುಲಿಕೇಶಿ"

# ಅಂತರ್ಮುಖ ಪರಿಶೀಲನೆ ದಿನನಿತ್ಯದ ಕೆಲಸ

ಮಾನವನ ಮುಖಗಳು ಒಂದಲ್ಲ ಎರಡು. ಬಾಹ್ಯದಲ್ಲಿ ಅವನು ಸೌಜನ್ಯನಂತೆ ವರ್ತಿಸುತ್ತಿರಬಹುದು. ಸಮಾಜದಲ್ಲಿ ಗಣ್ಯವ್ಯಕ್ತಿ ಎನ್ನಿಸಿಕೊಂಡಿರಬಹುದು. ಆದರೆ ತನ್ನ ಅಂತಮುಖದಲ್ಲಿ ಅವನು ಅತ್ಯಂತ ನೀಚನೇ ಇರಬಹುದು. ಮಾನವನ ಮನೋವ್ಯಾಪಾರಗಳನ್ನು ಜ್ಞಾನೇಂದ್ರಿಯಗಳಿಂದದರ್ಶಿಸುವಂತಿಲ್ಲ. ಮನಸ್ಸೇ ಆ ಕಾರ್ಯವನ್ನು ಮಾಡಬೇಕು.

ಮನಸ್ಸಿನ ನೆಲೆಯನ್ನು ಗುರುತಿಸುವುದು ಇಂದಿಗೂ ಸಾಧ್ಯವಿಲ್ಲ. ಆದರೆ ಮನಸ್ಸು ನಿರ್ವಹಿಸುವವ್ಯಾಪಾರಗಳನ್ನೂ ಅವುಗಳ ಸ್ವರೂಪವನ್ನೂ ಅನುಭವಿಸುತ್ತಿದ್ದೇವೆ ದಾರಿಯಲ್ಲಿ ಹಸಿವಿನಿಂದ ಕೊರಗುತ್ತಿರುವ ಒಬ್ಬ ಮುದುಕನನ್ನು ಕಂಡಾಗ ನಮಗೆ ಮನದಲ್ಲಿ ಮರುಕ ಉತ್ಪನ್ನವಾಗುವುದು, ಅದೇ ಮನಸ್ಸಿನ ರಸ ಭಾವ, ಈ ಮನೋ ವಿಜ್ಞಾನದ ಅಧ್ಯಯನ ಬಹು ಪ್ರಾಚೀನ ಕಾಲದಲ್ಲೇ ಪ್ರಾರಂಭವಾಗಿರಬೇಕು. ಗ್ರೀಸಿನ ಅರಿಸ್ಟಾಟಲ್ ಆ ಜ್ಞಾನವನ್ನು ಕುರಿತುಒಂದು ದೊಡ್ಡ ಗ್ರಂಥವನ್ನೇ ರಚಿಸಿರುವನು, ಭಾರತದಲ್ಲಿ ಋಷಿಮುನಿಗಳು ಅನೇಕ ಸಿದ್ಧಾಂತಗಳನ್ನು ರಚಿಸಿರುವರು, ಆದರೂ ನಮ್ಮ ಮನಸ್ಸಿನ ವ್ಯಾಪಾರಗಳನ್ನು ನಾವು ಅರಿಯಬಹುದು. ಆದರೆ ಇತರರ ಮನೋವ್ಯಾಪಾರ ಅರಿಯಲು ಸಾಧ್ಯವಿಲ್ಲ. ಮನುಷ್ಯನ ಬಾಹ್ಯ ವರ್ತನೆಗಳ ಮೂಲಕ ಮನಸ್ಸಿನ ವ್ಯಾಪಾರಗಳ ಸ್ವರೂಪವನ್ನು ಅಳೆಯುವ ಯತ್ನ ಮುಂದುವರಿದಿದೆ.

ಪ್ರತಿಯೊಂದು ಮನೋವ್ಯಾಪಾರಕ್ಕೂ ಒಂದೊಂದು ಪ್ರಚೋದನೆ ಅಗತ್ಯ. ಅದರ ಫಲವಾಗಿ ಒಂದು ನಿರ್ದಿಷ್ಟ ರೀತಿಯ ಬಾಹ್ಯವರ್ತನೆ ಕಾಣಿಸಿಕೊಳ್ಳುತ್ತದೆ. ಎಂಬ ನೂತನ ಸಿದ್ಧಾಂತವನ್ನುಜೆ. ಬಿ. ವಾಟ್ಸನ್ ರೂಪಿಸಿದನು.

ನಮ್ಮ ಮನಸ್ಸನ್ನು ದೇಹದಿಂದ ಪ್ರತ್ಯೇಕಿಸುವಂತಿಲ್ಲ. ವ್ಯಕ್ತಿಯನ್ನು "ಮನೋದೇಹ" ವೆಂಬ ಸಮಗ್ರ ವ್ಯವಸ್ಥೆಯಾಗಿ ಪರಿಗಣಿಸಬೇಕಾಗುತ್ತದೆ, ಅಂಥ ಮನವನ್ನು ಅಂಕೆಯಲ್ಲಿಟ್ಟುಕೊಳ್ಳುವುದು ಅತಿ ಕ್ಲಿಷ್ಟ, ಈ ಮನ ದೇಹಕ್ಕೆ ದಾಸನಾಗಬಾರದು ಮನಸ್ಸಿಗೆ ದೇಹ ದಾಸನಾಗಿ ನಡೆಯುವಂತಾಗಬೇಕು. ದೇಹ ನಾನಾ ವಿಧದ ಸುಖ ಬಯಸಬಹುದು. ದುರ್ಮಾರ್ಗಕ್ಕೆಳೆಯಬಹುದು. ಆಗ ಮನಸ್ಸೆಂಬ ಮಹಾರಾಜ ಈ ಸಾಮಂತರನ್ನು ತನ್ನ ಅಂಕೆಯಲ್ಲಿಟ್ಟುಕೊಂಡು ನಡೆಸಬೇಕು, ನಮ್ಮ ಎಲ್ಲ ಮನೋಭಾವಗಳನ್ನು ಸೂಕ್ತ ರೀತಿಯಲ್ಲಿ ನಿಯಂತ್ರಣಗೊಳಿಸಿ ಸಮನ್ವಯಗೊಳಿಸಿ ನಡಸಿಕೊಂಡು ಹೋಗುವ ಅಧಿಪತಿ ಮನಸ್ಸು ಇದನ್ನೇ ನಮ್ಮ ಪೂರ್ವಿಕರು "ಆತ್ಮ" ಎಂದರು, ವ್ಯಕ್ತಿಯ ಮನೋಭಾವ ದುರ್ಬಲವಾದರೆ ಬೇರೆ ಬೇರೆ ಮನೋಭಾವಗಳು ತಮ್ಮಲ್ಲಿ ಸಹಕಾರವಿಲ್ಲದೆ ಬಿಡಿ ಬಿಡಿಯಾಗಿ ವಿರುದ್ಧ ಮಾರ್ಗಗಳಲ್ಲಿ ಅತಿರೇಕಗಳಿಗೆ ಮುಟ್ಟಿ ವ್ಯಕ್ತಿಯ ಗುಣಶೀಲಗಳಿಗೆ ಕಳಂಕ ತರುತ್ತವೆ. ಆದ್ದರಿಂದಲೇ ಆತ್ಮ ಶಕ್ತಿ, ಅಂತರ್ಮುಖ ಪರಿಶೀಲನೆ, ಆತ್ಮ ಸಂಕಲ್ಪ ಆತ್ಮ ಜ್ಞಾನ, ಆತ್ಮ ವಿಮರ್ಶೆ ದಿನನಿತ್ಯ ಅತ್ಯಗತ್ಯ. ನಾವೆಸಗುವ ಕಾರ್ಯಗಳು ಒಳಿತೇ, ಕೆಡಕೇ ಎಂಬುದನ್ನು ಸಾವಧಾನ ಚಿತ್ತದಿಂದ ಮಿವರ್ಶಿಸಿ ನಿಷ್ಕರ್ಷಿಸಿ ಮುಂದಡಿ ಇಡಬೇಕು,

ದೇಹಕ್ಕೂ ಮನಸ್ಸಿಗೂ ನಿಕಟ ಸಂಬಂಧವುಂಟು. ಮನುಷ್ಯನ ಮನಸ್ಸಿನಲ್ಲಿ ಒಳ್ಳೆ ಅಭಿಪ್ರಾಯಗಳು ಆಯು ವೃದ್ಧಿಗೆ ಕಾರಣವೆನಿಸಿವೆ. ಮನಸ್ಸಿಗೆ ತೋರುವಒಂದೊಂದು ಭಾವನೆಯೂ ಮಿದುಳಿನ ಸೂಕ್ಷ್ಮಭಾಗಗಳಲ್ಲಿ ಆಗಾಗ ಬಹಳ ಬದಲಾವಣೆಗಳನ್ನುಂಟುಮಾಡುತ್ತಿರುವುವು. ಆದ್ದರಿಂದ ಪ್ರತಿಯೊಬ್ಬರೂ ದಿನಕ್ಕೆ ಅರ್ಧ ಗಂಟೆಯ ಕಾಲವಾದರೂ ಮನಸ್ಸಿಗೆ ಒಳ್ಳೆ ಭಾವನೆಗಳನ್ನು ತಂದುಕೊಂಡು ತಮ್ಮ ತಪ್ಪುಗಳನ್ನು ತಿದ್ದಿಕೊಂಡು ಮಿದುಳಿಗೆ ಉತ್ಸಾಹವನ್ನು ಹುಟ್ಟಿಸಬೇಕಾದುದು ಅತ್ಯಾವಶ್ಯಕ. ಹಾಗೆಯೇ ಉದಾರ ಗುಣ. ಉತ್ಸಾಹ, ಆತ್ಮತೃಪ್ತಿ, ಪ್ರೀತಿ ಮುಂತಾದುವು ಮನಸ್ಸಿನ ಆರೋಗ್ಯವನ್ನೂ ಶಕ್ತಿಯನ್ನೂ ವೃದ್ಧಿಗೊಳಿಸುವುದಕ್ಕೆ ಸಹಕಾರಿಗಳು. ಮನುಷ್ಯನು ತನ್ನ ವಿಧವಿಧವಾದ ಮನೋಭಾವನೆಗಳೆಂಬ ಮಹಾಸಮುದ್ರದ ಅಲೆಗಳಲ್ಲಿ ಅಲೆದಾಡುತ್ತಿರುವನು. ಆಗ ಕಾಮಕ್ರೋಧಾದಿ ದೋಷಗಳನ್ನು ನಿವಾರಿಸಲು ಪ್ರಯತ್ನಿಸಬೇಕು. ಒಳ್ಳೆಯ ಭಾವನೆಯಿದ್ದಲ್ಲಿ ದುರ್ಭಾವನೆಗಳೆಂದೂ ತಲೆ ಎತ್ತಲಾರವು. ಪ್ರೀತಿ, ಧೈರ್ಯ, ನಂಬಿಕೆ ಮುಂತಾದ ಗುಣಗಳನ್ನು ಹೃದಯದಲ್ಲಿ ದೂಡಿ ಕ್ರೋಧ, ಭೀತಿ, ಅವಿಶ್ವಾಸ ಮುಂತಾದವುಗಳನ್ನು ಹೊರಕ್ಕೋಡಿಸಬೇಕಾದರೆ, ಪ್ರತಿನಿತ್ಯ, ಪ್ರತಿಮಾನವನು ತನ್ನ ಅಂತರ್ಮುಖ ಪರಿಶೀಲನೆ ಮಾಡಿಕೊಳ್ಳುವುದು ಅತ್ಯಗತ್ಯವಲ್ಲವೇ?

**ಜೆ. ಶಾರದಾರಾಜಶೇಖರ್**

# ಕವಿ ಮತ್ತು ಕಾವ್ಯ

ಲೇಖಕರು :
ಹರತಿ ವೀರೇಶ

“ಈ ಸೃಷ್ಟಿಯನ್ನು ಕುರಿತು ಅನುಭಾವಿಗಳು ಹೇಳಿರುವ ಮಾತೊಂದುಂಟು. ಭಗವಂತ ತನ್ನ ಆನಂದವನ್ನು ತಾನೇ ಸವಿಯಲು ತನ್ನನ್ನೇ ತಾನು ನೂರು ರೂಪುಗಳಲ್ಲಿ ಅಭಿವ್ಯಕ್ತಗೊಳಿಸಿಕೊಂಡಿದ್ದಾನೆ ಎಂದು. ಕವಿಯಾದವನು ತನ್ನನ್ನು ತಾನೇ ನೂರಾರು ಭಾವದ ಪಾತ್ರಗಳಲ್ಲಿರಿಸಿಕೊಂಡು ಆ ಚೆಲುವನ್ನು ಆಸ್ವಾದಿಸುತ್ತಾನೆ ಎಂದು ಕವಿ ಕರ್ಮವನ್ನು ಕುರಿತು ಅದೇ ಮಾತನ್ನು ಹೇಳಿದರೆ ಮೇಲಿನ ಅನುಭಾವಿಗಳ ಮಾತಿಗೆ ಅಪಚಾರವಾಗಲಾರದು” ಅಂಬಿಕಾತನಯದತ್ತರ ಮಾತಿನಲ್ಲಿ ಕವಿಯನ್ನು ಪರಿಚಯ ಮಾಡಿಕೊಡಬಹುದಾದರೆ ಹೀಗೆನ್ನಬಹುದು—

ಕವಿಯು ಮಾನಸಪುತ್ರ
ಅವನು ಆಗಸ ದೇಹಿ
ಮಾತಿನಲಿ ಮೂಡುವನು ಭಾವಜೀವಿ ||

ಎನ್ನುತ್ತಾರೆ ಬೇಂದ್ರೆ. ಕವಿ ಕರ್ಮವನ್ನು ಕುರಿತು ಅವರು ನುಡಿಯುತ್ತಾರೆ—

ಮೈಯಾಚೆ ಉಸಿರಾಚೆ
ಬಗೆಯ ಬಣ್ಣಗಳಾಚೆ
ಅವನ ಹೂವರಳುವದು ಭಾವದೇವಿ ||

ಲೋಕ ಸೌಂದರ್ಯ ಕವಿಯ ಆನಂದಾನುಭವಕ್ಕೆ ಕಾರಣವಾದರೆ ಕಾವ್ಯಸೌಂದರ್ಯ ಸಹೃದಯಾನುಭವಕ್ಕೆ ಕಾರಣವಾಗುತ್ತದೆ. ಕವಿಯು ಅನುಭವಿಸಿದ ಆನಂದಾನುಭವದ ಮೂರ್ತರೂಪವೇ ಕೃತಿ. ಈ ಕೃತಿ ಮೂಡುವುದು ಕವಿಯ ಪ್ರತಿಭೆ: ಮತ್ತು ಬುದ್ಧಿಗಳ ವಿದ್ಯುದಾಲಿಂಗನದಿಂದ. ಕವಿಯ “ವೈಯಕ್ತಿಕವೂ, ವಿವಿಧ ಗುಣಾತ್ಮಕವೂ ಆದ ಪ್ರತಿಭೆ ಎಂಬ, ಸ್ಫೂರ್ತಿಯೆಂಬ, ಅಂತಶ್ಚೈತನ್ಯದ ಬಹಿರವತಾರವೇ ಕಾವ್ಯ. ಅದೇ ಕವಿ ಕರ್ಮದಲ್ಲಿನ ರಹಸ್ಯಾಂಶ. ನದೀ ಮೂಲಗಳು ಹೇಗೋ ಹಾಗೆ ಸಿಕ್ಕತಕ್ಕವಲ್ಲ”. ದಿನ ದಿನದ ಬದುಕಿನಲ್ಲಿ ಕವಿಯಾದವನು ಅನಂತ ಅನುಭವಗಳನ್ನು ಪಡೆಯುತ್ತಾನೆ. ಹಾಗೆ ಪಡೆದ ಅನುಭವಗಳನ್ನು ಬಿಡುಗಡೆ ಮಾಡಿಕೊಳ್ಳ ಬಯಸುತ್ತಾನೆ. ವ್ಯಕ್ತಿಯ ಹೃದಯ ಸುಖದುಃಖಗಳಿಂದ ಭಾರವಾಗಿದ್ದಾಗ ಅದನ್ನು ಹಗುರ ಮಾಡಿಕೊಳ್ಳುವ ಸಲುವಾಗಿ ಪ್ರಕಟಿಸಲಿಚ್ಛಿಸುತ್ತದೆ. ಹಾಗೆಯೇ ಕವಿಯಾದವನೂ ಕೂಡ ತನ್ನ ಅನುಭವಗಳನ್ನು ಅಭಿವ್ಯಕ್ತ ಮಾಡಿಕೊಳ್ಳದ ಹೊರತು ಆ ಜೀವಿಗೆ ಶಾಂತಿಯಿಲ್ಲ, ಸಮಾಧಾನವಿಲ್ಲ; ಬಾನ ಬಟ್ಟೆಯ ಮೋಡ ಇಳೆಗೆ ಮಳೆಗರೆವಂತೆ, ಕವಿಯಾದವನು ತನ್ನ ಅನುಭವದ ರಸದುಣಿಸನ್ನು ಲೋಕಕ್ಕೆ ಕೊಡಲಿಚ್ಛಿಸುತ್ತಾನೆ. ಅಲ್ಲದೆ ಅವನು ಕೊಡುವುದಾದರೂ ಏನು ? ಬೇಂದ್ರೆಯವರ ಮಾತಿನಲ್ಲಿ ನೋಡಿ—“ಎನ್ನ ಪಾಡೆನಗಿರಲಿ ಅದರ ಹಾಡನ್ನಷ್ಟೆ ನಿನಗೆ ನೀಡುವೆನು ರಸಿಕ”—ಎನ್ನುತ್ತಾರೆ.

ಕವಿಯ ಗುರಿ ಕಾವ್ಯ, ಕಾವ್ಯದ ಗುರಿ ಸಹೃದಯಾನಂದ. ಭಾರತೀಯ ಕಾವ್ಯಮೀಮಾಂಸೆಯಲ್ಲಿ ಕವಿಯ ಸ್ಥಾನ ಉತ್ತಮವಾಗಿದೆ; ಅವನನ್ನು ಉತ್ತಮ ಮಟ್ಟಕ್ಕೇರಿಸಿದ್ದಾರೆ ನಮ್ಮ ಆಲಂಕಾರಿಕರು.

"Kavi" Literally means one who shows, and he who shows must necessarily have himself seen, we may in this sense understand our "Kavi" as the equivalent of 'Seer'." ಕವಿಯಾದವನು ಋಷಿಯೂ ಆಗಿರಬೇಕಾಗುತ್ತದೆ ಎನ್ನುವ ದಿವ್ಯಭಾವನೆ ಭಾರತೀಯ ಆಲಂಕಾರಿಕರದಾಗಿದೆ —"ನಾನೃಷಿಃ ಕವಿಃ" ಎನ್ನುವ ಮಾತೂ ಅವರಲ್ಲುಂಟು. ತಾನು ಕಂಡುದನ್ನು ತನ್ನ ಸಾಮರ್ಥ್ಯಕ್ಕೊಗ್ಗಿದಂತೆ ತೋರಿಸಬಲ್ಲಾತನೇ ಕವಿ ಎಂದೂ, ಆತನು ಋಷಿಸದೃಶನೆಂದೂ ಭಾರತೀಯ ಸಿದ್ಧಾಂತ. ಕವಿಯಾದವನು ವ್ಯವಹಾರ ಜಗತ್ತಿನಿಂದ ಭಿನ್ನನಾದವನೇ ಎನ್ನುವರುಂಟು. ಆದರದು ಅಲ್ಲವೆಂದು ಕಾಣುತ್ತದೆ. ಕವಿಯೆಂಬುದೊಂದು ಮನಸ್ಥಿತಿ It is a state of mind, ಅಷ್ಟೆ ಜೀವನದಲ್ಲಿ ವ್ಯವಹಾರ ಜಗತ್ತಿನಲ್ಲಿದ್ದುಕೊಂಡೇ ಭಾವಪ್ರಪಂಚದ ಪ್ರಜೆಯೂ ಆಗಿರುತ್ತಾನೆ ಕವಿ. ಹಾಗೆಂದರೆ ನಮಗೂ ಅವನಿಗೂ ಅಂತರ ಎಲ್ಲಿ? ಎಂಬುದೊಂದು ಪ್ರಶ್ನೆ ತಲೆ ಎತ್ತಬಹುದು. ಅದಕ್ಕೆ ಉತ್ತರವನ್ನು ಹೀಗೆ ಹುಡುಕುವುದು ಸೂಕ್ತವೆಂದು ಕಂಡುಬರುತ್ತದೆ. ಕವಿ ತಾನು ಕಂಡುದನ್ನು ಪ್ರಕಟ ಮಾಡಿಕೊಳ್ಳುವ ಶಕ್ತಿಯನ್ನು ಹೊಂದಿರುತ್ತಾನೆ. ಸಾಮಾನ್ಯರಾದ ನಮಗೆ ಆ ಶಕ್ತಿ ಇರುವುದಿಲ್ಲ. ಇಲ್ಲಿಯೇ ನಮಗೂ ಕವಿಗೂ ಇರುವ ಅಂತರ-ಆಗಬೇಕಾಗುತ್ತದೆ ನಮಗೆ ಕವಿಯಾದವನ ಸಹಾಯ. ಕೃತಿಯ ಮೂಲಕ ಅದು ಸಾಧ್ಯವೂ ಆಗುತ್ತದೆ. ಕವಿಯಾದವನಿಗೆ ಆಗುವಂಥ ಅನುಭವವೇ ನಮಗೂ ಆದರೂ ಆ ಅಭಿವ್ಯಕ್ತಿ [expression of the experience] ನಮಗಿಲ್ಲವಾದುದರಿಂದ ಆತನ ಸ್ನೇಹಬಾಹು ನಮಗೆ ಅತ್ಯಗತ್ಯವಾಗುತ್ತದೆ. "Poetic feeling without poetic expression, that is why we donot by ourselves reach the poetic level, that is where we stand in need of poet's assistance." ಕವಿ ಕೃತಿಯನ್ನು ರಚಿಸುವುದು ಯಾರಿಗಾಗಿ? ಎನ್ನುವ ವಾದ ವಿವಾದಗಳಿವೆ. ಕವಿ ಕೃತಿಯನ್ನು ರಚಿಸುವುದು ತನ್ನ ಆತ್ಮಸಂತೋಷಕ್ಕಾಗಿ ಎನ್ನುವ ಮಾತುಂಟು, ಅದರಲ್ಲಿ ಸತ್ಯವಿಲ್ಲದಿಲ್ಲ. ಆದರೆ ಅವನು ಕೇವಲ ಆತ್ಮಸಂತೋಷಕ್ಕಾಗಿಯೇ ಬರೆಯುತ್ತಾನೆ ಎನ್ನುವ ಮಾತು ಸಾಹಸದ ಮಾತಾದೀತು! "ಕಟ್ಟೆಯುಂ ಮೋನೋ ಪೊಸಪೂಮಾಲೆಯುಂ ಮುಡಿವ ಭೋಗಿಗಳಿಲ್ಲದೆ" ಎನ್ನಲಿಲ್ಲವೇ ಜನ್ನ. ಕವಿಯ ಬಯಕೆ ತನ್ನ ಕೃತಿ ಹಲವರಿಗಾದರೂ ರುಚಿಸುವಂತಿರಬೇಕು ಎಂಬುದೂ ಆಗಿರುತ್ತದೆ. ಕೃತಿ ಸಹೃದಯಾನಂದವಾದಾಗಲೇ ಆದರ ಸಾರ್ಥಕತೆ. ಕೃತಿಯಿಂದ ಕವಿಯೂ ಧನ್ಯನಾಗುತ್ತಾನೆ. ಕವಿಯ ಹೃದಯ ಯಾವಾಗಲೂ ಲೋಕಾನುಭವಕ್ಕೆ ಪಡಿಮಿಡಿಯುವಂಥ ರಸರಂಗವಾಗಿರುತ್ತದೆ. 'ಕವಿಯ ಹೃದಯ ಒಂದು ವೀಣೆ, ಲೋಕವದನು ಮಿಡಿವುದು' ಎಂದ ಕವಿ ಮಾತು ಸತ್ಯ. ತನ್ನ ಅನುಭವಕ್ಕೆ ಕಾಣುವ ವೈಯಕ್ತಿಕ ವಿಶಿಷ್ಟಾನುಭವವನ್ನೇ ಸಾಧಾರಣೀಕರಣ ಮಾಡಿ ಲೋಕಕ್ಕೆ ಅದನ್ನು ನಿವೇದಿಸುತ್ತೇನೆ. ಕವಿಯ ಅನುಭವ ಅಭಿವ್ಯಕ್ತಿಯ ಮಾಧ್ಯಮದ ಮೂಲಕ ಪ್ರವಹಿಸಿ ಮತ್ತೊಮ್ಮೆ ಸಹೃದಯನ ಅನುಭವವಾದಾಗಲೇ ಅವನ ಕೃತಾರ್ಥತೆ; ಕೃತಿಯ ಸಾಕಲ್ಯತೆ!

ಕವಿಯಾದವ ಕೃತಿಯನ್ನು ರಚಿಸುವಾಗ ಇಂತಹ ವರ್ಗದವರಿಗೇನೇ ಎಂದಿಟ್ಟುಕೊಂಡೇನೂ ಬರೆಯುತ್ತಿರುವುದಿಲ್ಲ. ತನ್ನ ಪ್ರತಿಭೆಯ ಕುಂಚ ತನ್ನ ಬುದ್ಧಿಯೊಡನೆ ಮೇಳವಿಸಿ ಬರೆದಂತೆ ಬರೆಯುತ್ತಾ ಹೋಗುತ್ತಾನೆ. ಆತನಿಗೇ ತಾನು ಕೃತಿ ರಚನೆ ಮಾಡುವ ಕಾಲದಲ್ಲಿ ಆಕೃತಿ ತಾಳುವ ರೂಪರೇಷೆಗಳ ಪೂರ್ವ ಸೂಚನೆಗಳು ಇರುವುದಿಲ್ಲ. ಕೃತಿ ಎಂಬುದು ಹೊಳೆಯಿದ್ದಂತೆ. ಹೊಳೆ ಹರಿಯುತ್ತಾ, ಹರಿಯುತ್ತಾ ತನ್ನ ಪಾತ್ರ ನಿರ್ಮಾಣ ಮಾಡಿಕೊಳ್ಳುವಂತೆ, ಕೃತಿಯೂ ಬೆಳೆಯುತ್ತಾ, ಬೆಳೆಯುತ್ತಾ ತನ್ನನ್ನೂ ನಿರ್ಮಿಸಿಕೊಂಡು, ಕವಿಯನ್ನೂ ನಿರ್ಮಿಸಿಬಿಡುತ್ತದೆ. ಕವಿ ಕರ್ಮ ಅಂತಹುದೊಂದು ರಸಪವಾಡ ಕ್ಷೇತ್ರ. ಕವಿಯದು ಯಾವಾಗಲೂ ಇಂದ್ರಿಯಾನುಭವದಿಂದ ದೂರವಿದ್ದು ಭಾವಾನುಭವವನ್ನು ಕಾಣುವಂಥ ರಸಸ್ಥಿತಿ ಲೋಕದಲ್ಲಿ ಕಾಣುವ ಅನಂತರೂಪಗಳೆಲ್ಲದರಲ್ಲಿಯೂ ಆ ಕಣ್ಣು ಅರಸುವುದು ಭಗವಂತನ ಸೌಂದರ್ಯವನ್ನು. "ಬಾಹ್ಯಜೀವನದ ಅನುಭವವು ಕಾವ್ಯಸಾಮಗ್ರಿಯಾಗುತ್ತದೆ. ಆದರೆ ಬಾಹ್ಯಜೀವನದಿಂದ ಗ್ರಹಿಸಿದುದನ್ನು ಕವಿಯು ತನ್ನ ಕಲ್ಪನೆಯೆಂಬ ಜಾದೂಗಾರನ ಕೋಲಿನಿಂದ ಪರಿವರ್ತಿತ

ಗೊಳಿಸುತ್ತಾನೆ". ಹೃದಯ ಹೃದಯುಗಳನ್ನು ಬೆಸೆಯುವ ಕುಶಲಕರ್ಮಿ ಕವಿ. ಭೂ ಮಿ ಯ ಲ್ಲಿ ದ್ದೂ ವ್ಯೋಮದ ಕ ಡೆ ಗೆ ಕೈ ಚಾ ಚು ವ ಂ ಥ ವ ನು ಕ ವಿ . ಜೀ ವ ನ ದ ಹೋ ರಾ ಟ ದ ಲ್ಲಿ ದಲ್ಲಿ ನಾವು ಅನುಭವಿಸುತ್ತಿರುವುದು ಪ್ರಾಣಾನುಭವ; ಸೌಂದರ್ಯದರ್ಶನ, ರಸಾನುಭೂತಿಗಳಿಂದ ನಾವು ಕಂಡುಕೊಳ್ಳುವುದು ಭಾವಾನುಭವ. ಕವಿಯ ಗಮ್ಯವು ಹೃದಯ ವಿಕಾಸ ; ಭಾವಸಂಸ್ಕಾರ. ಅದರಲ್ಲಿ ಅಹಂಕಾರ ತುಷ್ಟಿಯೂ ಅಡಗಿದೆ. ಜೀವನದಲ್ಲಿಯ ಪೃಥಕ್ ಪೃಥಕ್ ರಸಗಳ ಆವಿಷ್ಕಾರ ಕವಿಯ ಗುರಿ. ಚಿತ್ತವೃತ್ತಿಯ ಸಂಚಲನ ರಸಪ್ರವಾಹದ ಗುಟ್ಟು. ಕವಿಯ ಹೃದಯದಲ್ಲಾಗುವ ರಸಶರಧಿಯ ಅಲ್ಲೋಲ ಕಲ್ಲೋಲಗಳ ಪರಿಪಕ್ವರೂಪ ಅಭಿವ್ಯಕ್ತಿಯಾಗಿ ಮೂಡಿ ಸಹೃದಯದಲ್ಲಿ ಸಂಚಯವಾದಾಗಲೇ ಕೃತಿಯ ಧನ್ಯತೆ !

ಸೌಂದರ್ಯದರ್ಶನ, ರಸಾನುಭವವೆಂದೆ ಕಾವ್ಯ ಜೀವಿಯುದು ; ಕವಿಯುದು. ಅದು ಲೌಕಿಕದಿಂದ ಒದಗುವಂಥ ಅನುಭವವೇ ಆದರೂ ಲೋಕಾತೀತವಾದುದು. ಲೋಕದಿಂದ ಸಂಪೂರ್ಣ ಭಿನ್ನವಲ್ಲದಿದ್ದರೂ, ಲೋಕದಿಂದ ಅಪೂರ್ವವಾದುದು ; ಅಷ್ಟೇ ಏಕೆ ಲೋಕಾತಿಕ್ರಾಂತವೂ ಕೂಡ ಆ ಅನುಭವ. ನಾವು ಜೀವನದಲ್ಲಿ ಮುಖ್ಯವಾಗಿ ಎರಡು ವಿಧವಾದ ಸಂತೋಷಗಳನ್ನು ಕಾ ಣು ತ್ತೇ ವೆ . ಒಂದು ಸುಖವೆನ್ನಿಸಿಕೊಂಡರೆ, ಮತ್ತೊಂದು ಸಂತೋಷವೆನ್ನಿಸಿಕೊಂಡಿದೆ. ಸುಖವೆನ್ನುವುದು ಲೌಕಿಕವಸ್ತುಗಳಿಂದ ವ್ಯವಹಾರ ಪ್ರಪಂಚದಲ್ಲಿ ಲಭ್ಯವಾಗುವ ವಸ್ತು. ಹಸಿವಾದ ವ್ಯಕ್ತಿಗೆ ಅನ್ನ ದೊರೆತರೆ ಸುಖ ದೊರೆಯುತ್ತದೆ–ಆದರದು ವೈಯಕ್ತಿಕ. ಆದರೆ ಸಂತೋಷ ಹಾಗಲ್ಲ. ಅದು ವೈಯಕ್ತಿಕತೆಯ ತೆರೆ ಸರಿದು ಸಾರ್ವತ್ರಿಕವಾದುದು. ರ ಸಾ ನು ಭ ವ ಲೌಕಿಕ ಪ್ರಯೋಜನದಿಂದ ದೂರವಾದದ್ದು. ಅದರ ರೀ ತಿ ಯೇ ಬೇರೆ. "ಸೌಂದರ್ಯಾನುಭವವೆಂದರೆ ಲೋಕದ ವಸ್ತುವಿನ ರೂಪ ರುಚಿ ರಸಜೀವಿಯ ಮನಸ್ಸನ್ನು ಸೋಜಿಗದ ಮೂಲಕ ಸೆರೆಗೈದು, ಲೌಕಿಕೋದ್ದೇಶ ಸಂಗ ದೂರವಾದ ಪರಿಭಾವನೆಯಿಂದ ಅವನ ಅಂತರಂಗದಲ್ಲಿ ಒಂದು ಬಗೆಯ ಸಾಮರಸ್ಯವನ್ನು ಪಡೆದು ಪ್ರತಿಭಾಶಕ್ತಿಯಿಂದ ರೂಪುಗೊಳ್ಳುವ ಒಂದು ಲೌಕಿಕಾನುಭವ. ಈ ಅನುಭವದ ಮುಖ್ಯಸ್ವರೂಪ ಆನಂದ, ಈ ಸೌಂದರ್ಯಾನುಭವದ ಆನಂದವೇ ಕಲೆಗಾರನ ಸೃಷ್ಟಿಗೆ ಪ್ರೇರಣೆ. ಸೌಂದರ್ಯಾನುಭವವೆಂದರೆ ಬಹಿರಂಗ ಸೌಂದರ್ಯದ ಬಗೆಗೆ ನಾವು ತಾಳುವ ಎಚ್ಚರ ಮಾತ್ರವಲ್ಲವೆ ನಮ್ಮ ಅಂತರಂಗದ ಸೌಂದರ್ಯಾನುಭವ ಶಕ್ತಿಯ ಬಗೆಗೆ ಎಚ್ಚರಗೊಂಡು ವಿಸ್ಮಯಗೊಳ್ಳುವ ರೀತಿಯೂ ಹೌದು." ಇಂತಹ ಅನುಭವ ಕವಿಗೆ ಮೊದಲು ತಾಗಿ, ಅನಂತರ ಸಹೃದಯ ಪ್ರತಿಭೆಗೆ ಅದು ಮುಟ್ಟುತ್ತದೆ. ಕವಿ ತನಗಾದ ಅನುಭವವನ್ನು ಹೇಳಿಕೊಂಡಾಗಲೇ ತುಷ್ಟ. ಈ ಅನುಭವವಾದರೂ ಎಂತಹುದು ! ಹೇಳಿದರೆ ಹಾಳಾಗುವಂಥ ಹೇಳದಿರೆ ತಾಳಲಾಗದಂಥ ಒಂದು ವೇದನೆ. ಅಂತಹ ಸ್ಥಿತಿ ಕವಿಯದು. ಭಾವಕ್ಕೆ ಅಭಿವ್ಯಕ್ತಿ ನೀಡುವುದರಿಂದ ಕವಿಯ ಕೆಲಸ ಮುಕ್ತಸ್ಥಿತಿಗೆ ಬಂದಂತೆ. ಕವಿಯ ದೃಷ್ಟಿಯಂತೆ ಸೃಷ್ಟಿಯೂ ಇರುತ್ತದೆ. ಇಡೀ ಭೂಗೋಳದ ಒತ್ತಡದಿಂದ ಒಂದು ದ್ವೀಪ ಮೇಲೇಳುವಂತೆ ಕವಿ ಮನದ ಒತ್ತಡದಿಂದ ಕೃತಿಯೊಂದು ಮೇಲೇಳುತ್ತದೆ. ಕೃತಿಯನ್ನುವುದು ಕವಿಯ ಅನುಭವಕ್ಕೆ ನಿಂತ ಸಾಕ್ಷಿಯೂ ಹೌದು ; ಆತನ ಮೂಲಾನುಭವಕ್ಕೆ ತೆರೆದ ರಸ ಗವಾಕ್ಷವೂ ಹೌದು. ಕವಿ ಪ್ರತಿಭೆ ಗುರುತಿಸುವುದು ಬರೀ ಲೋಕ ಕೃತಿಯ ವಾಸ್ತವ ಚಿತ್ರದ ಪ್ರತಿ ನಕಲು ಅಲ್ಲ. ಅಲ್ಲದೆ ಕವಿಯ ಅನುಭವ ಗುರುತಿಸುವುದು ಕೇವಲ ಮೇಲೇರುವ ಮಾನವ ಹೆಜ್ಜೆಗಳನ್ನು ಮಾತ್ರವಲ್ಲ ; ಅವತರಿಸುವ ಮಿಂಚಿನ ಹೆಜ್ಜೆಗಳನ್ನೂ ಸಹ". ಕವಿಯದು 'ಕಾರಯತ್ರೀ' ಪ್ರತಿಭೆಯೆಂದು ರಾಜಶೇಖರನ ಹೇಳಿಕೆ. ಆ ಕಾರಯತ್ರೀ ಪ್ರತಿಭೆಯ ಹೊಳಹಿಗೆ ಒಳಗಾದ ಲೋಕ ವ್ಯಾಪಾರ, ಲೋಕವ್ಯಾಪಾರವೇ ಆಗಿ ಉಳಿಯದಂತೆ ಬೇರೊಂದು ಕಲಾ ವ್ಯಾಪಾರವಾಗಿ ಬೇರೊಂದು ರಸ

ಪ್ರಪಂಚವನ್ನೇ ತೆರೆದು ತೋರಿಸುತ್ತದೆ. ಅದಕ್ಕೆ ಆ ಪ್ರತಿಭಾಕಣ್ಣನ್ನು ಶಿವನ ಮೂರನೇ ಕಣ್ಣಿಗೆ ಹೋಲಿಸಿದ್ದು ಕಾವ್ಯ ಮೀಮಾಂಸಕರು ಮತ್ತು ಕವಿಯಾದವ ಲೋಕದಲ್ಲಿ ಕೇವಲ ಆಕರ್ಷಕ ವಸ್ತುಗಳಿಂದಲೇ ತನ್ನ ಕಲಾಪ್ರಪಂಚದ ಪಾತ್ರಗಳನ್ನು ನಿರ್ಮಾಣ ಮಾಡಿಕೊಳ್ಳುತ್ತಾನೆಂದೂ ಅಲ್ಲ. ಲೋಕದ ಕಣ್ಣಿನಲ್ಲಿ ವಿಕೃತವಾಗಿದ್ದು ಕಲೆಯಲ್ಲಿ, ಕವಿ ಕೃತಿಯಲ್ಲಿ ಆಕರ್ಷ ರಮಣೀಯವಾಗಬಹುದು. ಕವಿಯು ಪ್ರಕೃತಿಯಲ್ಲಿ ರುದ್ರಮಯ ಸನ್ನಿವೇಶ ಕಂಡೂ, ಅದನ್ನೇ ಲೋಕಕ್ಕೆ ಹ್ಲಾದೈಕಮಯ ಚಿತ್ರವನ್ನಾಗಿ ನೀಡಬಹುದು. "ಲೋಕಾನುಭವ ರುದ್ರರಭಸದಿಂದ ಹರಿಯುವ ಗಂಗೆಯಂತೆ, ಅದು ಶಿವಜಡೆಯ ದಮನದಿಂದ ಪಾವನವಾಯಿತು; ಸುಂದರವಾಯಿತು. ತನ್ನ ವೇಗದ ಶಮನವನ್ನು ಪಡೆಯಿತು. ಗಂಗೆ ಶಿವಾಂಶದಿಂದ ತಾರಕವಾಯಿತು. ಹಾಗಲ್ಲದಿದ್ದರೆ ಅದು ತಾರಕ ಪ್ರಧಾನವಾಗುತ್ತಿತ್ತು. ಅಂತೆಯೇ ಕವಿಯ ಜಡೆ ಲೋಕಾನುಭವದ ರಭಸವನ್ನು ತಡೆದು ಶಿವಾಂಶವನ್ನು ನೀಡುತ್ತದೆ. ಇಲ್ಲದಿದ್ದರೆ ಅದು ಆವೇಗ ಪ್ರಧಾನವಾಗುತ್ತನೆ. ಹಾಗಾದಾಗ ಅದು ಮನುಷ್ಯ ಗಂಧರ್ವಾನಂದಕ್ಕೇರುವುದಿಲ್ಲ". ಕವಿಯಲ್ಲಿರುವ ಸಂಸ್ಕಾರ ಅಂತಹುದು. ಅಲ್ಲಿಯ ಅಗ್ನಿಕುಂಡದಲ್ಲಿ ಬಿದ್ದು ಹೊರಬಂದ ಯಾವ ಅನುಭವವಾದರೂ ಬಂಗಾರದನುಭವ, ಕಾವ್ಯಾನುಭವವಾಗುತ್ತದೆ. ಅದಕ್ಕೇನೇ ಕವಿಯನ್ನು ಪರಬ್ರಹ್ಮನೆಂದುದು ನಮ್ಮವರು. ಬ್ರಹ್ಮ ಸೃಷ್ಟಿಕರ್ತನಿದ್ದಂತೆ, ಕವಿಬ್ರಹ್ಮ ಅನುಸೃಷ್ಟಿಕರ್ತ. ಅವನ ಸೃಷ್ಟಿಯಲ್ಲಿ ಅವನದೇ ಆಧಿಪತ್ಯ. ಅಲ್ಲಿ ಇನ್ನಾರಿಗೂ ಆ ಪಟ್ಟ ಸಲ್ಲದು. "ಇದು ಸತ್ಯಂ ಕವೀಶಾಧಿಪತ್ಯಂ" ಎಂದೂ ಬಿಡುತ್ತಾನೆ. ಇದನ್ನು ಕಂಡುಕೊಂಡೇ ಅಂದುದು 'ನಮಿಸುವೆನು ಮೂಲೋಕವನು ನಿರ್ಮಿಸಿದ ಕವಿ ಶಂಕರನಿಗೆ"—ಎಂದು. ಭಾರತೀಯ ಕಾವ್ಯ ಮೀಮಾಂಸೆ ಕವಿಯ ಗದ್ದುಗೆಯನ್ನು ಎಲ್ಲರಿಗೂ ಕಾಣುವಂತೆ ಎತ್ತರದಲ್ಲಿ ಒಯ್ದಿಟ್ಟಿದೆ.



# ಅಷ್ಟಾಂಗಯೋಗದಿಂದ ಶಿವಯೋಗಕ್ಕೆ

**- ಭೂಮಿಕೆ -**

[ಪಂ-ಚನ್ನಪ್ಪ ಎರೇಸೀಮೆ]

ಕಲ್ಯಾಣದಲ್ಲಿ ಶಿವಾನುಭವ ಮಂಟಪ ಸ್ಥಾಪಿಸಿದು ದರ ಉದ್ದೇಶ ಆಳವಾಗಿ ಆಲೋಚನೆ ಮಾಡಬೇಕಾದುದು. ವಿಚಾರವಾದವು ಧಾರ್ಮಿಕ ವಿಷಯದಲ್ಲಿ ಕ್ರಮಕ್ರಮೇಣ ಹೆಚ್ಚುಗೊಂಡು ಬರಹತ್ತಿತು. ಹಳೆಯ ಸಂಪ್ರದಾಯಗಳು ಕೇವಲ ಸಂಪ್ರದಾಯಗಳಾಗಿ ಜನಾಂಗ ಹೃದಯದ ಕಡೆಗೆ ಇಣಿಕಿನೋಡುವ ಮನೋಭಾವ ಕಡಿಮೆಯಾಗಹತ್ತಿತ್ತು. ಸೂಕ್ಷ್ಮವಾದ ವ್ಯವಹಾರಗಳ ಅರ್ಥವೇ ಆಗದೆ ಕೇವಲ ನಿಯಮ ಮಾತ್ರವೆಂಬರ್ಥದಲ್ಲಿ ಹಲವಾರು ವ್ಯವಹಾರ ಪ್ರಯೋಗ ಸಮಾಜದಲ್ಲಿ ನಡೆಯಿತು. ಸಮಾಜ ಜೀವನ ಬರಡು ಬರಡಾಗಿ ಹೋಗಹತ್ತಿತು. ವಿಚಾರವಾದಿಗಳಾದ ಮಹಾತ್ಮರುಗಳು ಜೊಳ್ಳು ಹೊಳ್ಳುಗಳನ್ನು ಹೊರಗಚ್ಚು ಮಾಡಿ ಗಟ್ಟಿಯನ್ನೇ ಬೇರ್ಪಡಿಸಬೇಕಾಯಿತು. 12ನೆಯ ಶತಮಾನದಲ್ಲಿ ವಿಚಾರವಾದಿಯೂ, ವಿಜ್ಞಾನವಾದಿಯೂ, ಸತ್ಯತತ್ವಾರಾಧಕನೂ ಆದ ಬಸವಣ್ಣನವರ ಪರಿಶ್ರಮದ ಫಲವಾದ ಶಿವಾನುಭವ ಮಂಟಪವು ಅನೇಕ ಸಮಸ್ಯಾ ಪರಿಹಾರ ಕಾರ್ಯ ಕೈಗೊಂಡಿತು. ಚರ್ಚೆಗಳು ಉನ್ನತ ಮಟ್ಟದಲ್ಲಿ ನಡೆದು ಅತಿವ್ಯಾಪ್ತಿ ಅವ್ಯಾಪ್ತಿ ದೋಷಾ ಪರಿಹಾರಕಗಳಾದ ಶುದ್ಧ ತತ್ವಗಳ ಬೆಳಕಿಗೆ ದಿವ್ಯ ಪುರುಷರಾದ ಅನೇಕ ಶಿವಶರಣರ ಸ್ವಾನುಭಾವ ಸಂಪತ್ತಿಯು ಹೊರಬರಬೇಕಾಯಿತು. ಇದರಂತೆಯೇ ಹಿಂದೆ ಎಂದೂ ಭರತ ಖಂಡದಲ್ಲಿ ನಡೆಯದಯಿಲ್ಲ. ಆದರೆ ಅವು ಈ ಮಾದರಿಯವಲ್ಲ. ಬಹು ಪ್ರಾಚೀನ ಕಾಲದಿಂದಲೂ ಋಷ್ಯಾಶ್ರಮಗಳಲ್ಲಿ ಈತರಹದ ತರ್ಕ ವಿತರ್ಕಗಳು ನಡೆದು ಭರತ ಖಂಡದ ಧರ್ಮ ತತ್ವ ಸ್ವರೂಪ ನಿರ್ಧಾರ ಕಾರಣಗಳಾಗಿವೆ. ಒಂದೊಂದು ಋಷ್ಯಾಶ್ರಮವೂ ಒಂದೊಂದು ಕೇಂದ್ರಗಳು. ಒಬ್ಬೊಬ್ಬ ಋಷಿಯೂ ತನ್ನ ಪ್ರೌಢಶಿಷ್ಯರುಗಳೊಡನೆ ತರ್ಕ ವಿತರ್ಕಮಾಡಿ ಧರ್ಮಾರ್ಣವ ಮಥನಮಾಡಿ ತತ್ವನವನೀತದ ಉಂಡೆಗಳನ್ನು ಕಟ್ಟಿದನು. ಅವೇ ಇಂದಿನ ಉಪನಿಷತ್ತುಗಳು. ಉಪನಿಷತ್ತುಗಳ ಆವಿರ್ಭಾವಕ್ಕೆ ಜ್ಞಾನವಾದಿಗಳಾದ ಋಷಿಗಳೇ ಕಾರಣರು. ವೇದಕಾಲದಿಂದಲೂ ಜನತೆಯಲ್ಲಿ ಬಂದ ಕರ್ಮದ ಕೋಟಲೆಗಳನ್ನೂ ಪರಂಪರೆಗಳನ್ನೂ ಕಡಿಮೆ ಮಾಡ ಹೊರಟ ಫಲವೇ ಉಪನಿಷತ್ತುಗಳು.

ಒಮ್ಮೆ ಒಬ್ಬ ಋಷಿಯ ಹತ್ತಿರ ಅವನ ಶಿಷ್ಯ ಒಂದು ಪ್ರಶ್ನೆ ಕೇಳುತ್ತಾನೆ. ಗಹನ ವಿಚಾರದ ಪ್ರಶ್ನೆ. ಉತ್ತರವೂ ಗಹನವಾದುದು. ಶಿಷ್ಯನು ಗುರುವನ್ನು ಕುರಿತು ''ಪರಮ ತತ್ವದಲ್ಲಿ ಜೀವಾತ್ಮನು ಪ್ರವೇಶ ಮಾಡಿ ಅದ್ವೈತ ಭಾವವು ಬರಬೇಕಾದರೆ ಹೇಗೆ ಧರ್ಮ ತತ್ವಾಚರಣೆ ಮಾಡಬೇಕು. ಆ ಸ್ಥಿತಿ ಲಭ್ಯವಾಗುವುದು ಹೇಗೆ" ಋಷಿ ಶಿಷ್ಯನ ಪ್ರಶ್ನೆಗೆ ಸಂತೋಷಗೊಂಡನು. ಹೇಳುತ್ತಾನೆ.

''ನಾಯಮಾತ್ಮಾ ಬಲಹೀನೇನ ಲಭ್ಯಃ ।
ನಚಪ್ರಮಾದಾತ್ ತಪಸೋವಾಪ್ಯ ಲಿಂಗಾತ್.
ಏತೈರುಪಾಯೈರ್ಯ ತತೇಯಸ್ತು
ವಿದ್ವಾಂಸ್ತಸ್ಯೈಷ ಆತ್ಮಾವಿಶತೇ ಬ್ರಹ್ಮಧಾಮ"

[ಮುಂ ೩ ಖಂ ೨ ಮಂ ೪]

ಜಗತ್ತಿನಲ್ಲಿ ಯಾರಿಗೆ ಮನೋಬಲವಿಲ್ಲವೋ ಆತ್ಮ ಬಲವಿಲ್ಲವೋ ಆತನಿಗೆ ಅದ್ವೈತ ಭಾವವಳವಡುವುದಿಲ್ಲವು.

ಪ್ರಮಾದ ವಶದಿಂದಲೂ ಅದು ಲಭ್ಯವಾಗುವ ಸ್ಥಿತಿಯಲ್ಲ. ಲಕ್ಷ್ಯರಹಿತ ತಪಸ್ಸಿನಿಂದಲೂ ಸಾಧ್ಯವಿಲ್ಲ. ಮನೋಬಲದಿಂದ ಬೆಟ್ಟವನ್ನು ದಾರಿಬಿಡಿಸಬಹುದು. ಆದರೆ ಅದರಲ್ಲಿ ಸಾಮಾನ್ಯ ಜನತೆಗೆ ವಿಶ್ವಾಸವಿಲ್ಲ. ಮನೋಬಲಬೇಕು. ಅದಕ್ಕೆ ಲಿಂಗ ತಪಸ್ಸು ಪ್ರಾರಂಭವಾಗಬೇಕು. ಲಕ್ಷ್ಯರಹಿತ ತಪಸ್ಸಿನಿಂದ ಆ ಗುರಿಯನ್ನು ಸಾಧಿಸಲಿಕ್ಕೆ ಆಗುವುದಿಲ್ಲ—ಇತ್ಯಾದಿಯಾಗಿ ಗುರು ಶಿಷ್ಯನಿಗೆ ಉತ್ತರಕೊಟ್ಟ.

(ಮುಂದುವರಿಯುವುದು)

# The Taluk Agricultural Produce Marketing Co. Op. Society, Limited.,

HIGH SCHOOL ROAD :: DODDABALLAPUR

Dealers in Foodgrains, Sugar, Chemical Fertilizers, Iron, Cement, Insectisides, Coffee Seeds, Seed Ragi, Paddy & Maize, Agricultural Implements, Electrical Materials Electric Pumpsets, Sprayers, Dusters, etc., Lorries, Diesel Oil Pumpsets and Sprayers are available for hire at a resonable rates.

G. RAME GOWDA, M.L.A.
President.

D. GANGAIAH
Secretary.

---

*Telegram* : PAPERMILL

*Trunk Telephone* : 31 & 62

ALWAYS USE

## BISON BRAND PAPERS

Famous for quality. texture, feel and strength.

*SPECIALITIES*

AZURE LAIDS — BONDS (White and Coloured)
CREAMLAIDS - CREAMWOVE, PRINTINGS (White and Coloured)

Also proudly present their latest introductions like

M. G. COVERS
M. G. PULP BOARDS
M. G. POSTERS
M. G. PLAIN & RIBBED KRAFT

Enquiries are solicited

*Manufacturers :*

THE MYSORE PAPER MILLS LIMITED
Factory : Bhadravathi - Paper Town Post.
Regd. Office : Arun Mansions, Sree Jayachamarajendra Road, Bangalore-2.

# ಅಷ್ಟಾವರಣಗಳು



ಪ್ರಥಮಾವರಣ : — ಗುರು

ಗುರುವು ತಾನೊರ್ವನೆಯೆ ಲೋಕದಿ
ನರರ ಕರ್ಮಕೆ ಫಲವ ಗಳೆನಿಸಿಹ
ವರಗಳನು ವರಭೋಗ ಮೋಕ್ಷಗಳನ್ನು ಕರುಣಿಪನು ॥
ಗುರುವು ಲೋಕದಿ ಶಿವನ ರೂಪನು
ಗುರುವಿಗಿನ್ನಿಗಿಲಿರದು ಇಳೆಯೊಳು
ಪರಮನವ ಶಮೆದಮೆಗೆ ಮೇಣ್ ಶಾಂತಾದಿ ಗುಣಗಳಿಗೆ ॥ ೧ ॥

ದ್ವಿತೀಯಾವರಣ :— ಲಿಂಗ

ಲಿಂಗವನು ಗುರು ಶಾಸ್ತ್ರವಿಧಿಯಿಂ
ದಂಗದೊಳು ಸಂಘಟಿಸಿ ಮುದದೊಳು
ಲಿಂಗದೇಹಿಯ ಮಾಡಿ ಅರಿಪನು ಸ್ಥೂಲ ಸೂಕ್ಷ್ಮಗಳ ॥
ಲಿಂಗವದು ಪರತತ್ವವದು ಸಲೆ
ಜಂಗಮದ ನೆಲೆಗಾಣಿಪುದು ಚಿ-
ಲ್ಲಿಂಗಧಾರಣ ಪರಮಶೈವದ ನೆಲೆಗೆ ಆವರಣ ॥ ೨ ॥

ತೃತೀಯಾವರಣ :— ಜಂಗಮ

ಜಂಗಮರು ಅನವರತ ಜಗದೊಳು
ತುಂಗ ಮಹಿಮೆಯ ಮೆರೆದಪರು ಜನ
ಜಂಗುಳಿಗೆ ಸಿಲುಕರು ಮಲತ್ರಯ ರಹಿತರಮಲಗುಣರ್ ॥
ಲಿಂಗನಿಷ್ಠಾ ಜ್ಞಾನಕ್ರಿಯೆಗಳ
ಲಿಂಗಯೋಗವ ನಳವಡಿಸಿ ಮಿಗೆ
ಜಂಗಮರು ಬಹುತರನು ಪೊರೆಯುತಲಿಳೆಯೊಳಗೆ ಚರಿಪರ್ ॥ ೩ ॥

ಚತುರ್ಥಾವರಣ :— ವಿಭೂತಿ

ಭಸಿತಮದು ಭಾಸಿಪುದು ವಿಲಸಿತ
ಶಿಶಿಯವೊಲ್ ಧರಿಸುವನ ಭಾಳದಿ
ವಸುಮತಿಯೊಳವ ಕಳೆವ ತನುಮನ ಭವದ ದೋಷಗಳ ॥
ಭಸಿತಧಾರಿಯು ಪಾಪದೂರನು
ವಸುಧೆಯೊಳು ಶಾಶ್ವತನು ಶಾಂತನು
ಭಸಿತವಣಿಮಾದಿಗಳ ದೊರಕಿಪ ಶೈವದಾವರಣ ॥ ೪ ॥

ಪಂಚಮಾವರಣ :—ರುದ್ರಾಕ್ಷಿ

ಅಂಗಜಾರಿಯ ಕಣ್ಣ ಹನಿಗಳು
ಸಂಗಲಿತು ಸಂಗಳಿತ ಫಲ ಬೀ–
ಜಂಗಳವು ರುದ್ರಾಕ್ಷಿಗಳು ದಿಟ ಶೈವಲಾಂಛನಗಳ್ ||
ಲಿಂಗಧಾರಿಯು ಅಕ್ಷಮಾಲೆಯ
ನಂಗದಲಿ ಧರಿಸುತಲಿ ಮುದದೊಳು
ಲಿಂಗಪೂಜೆಯನಿರದೆ ಮಾಳ್ಪುದು ನಿಷ್ಠೆಯೊಳು ಸತತಂ || ೫ ||

ಷಷ್ಠಾವರಣ :—ಮಂತ್ರ

ಪರಮಪಾವನ ಶೈವಮಂತ್ರವ
ನಿರದೆ ಜಪಿಸುವ ಪರಮಶೈವರು
ಗುರುವನುಗ್ರಹವಿಡಿದುಪಾಸಿಸೆ ತ್ರೈಮಲಾಪಹರು ||
ಪರಮಹಾಶಿವ ತತ್ವ ಮಂತ್ರವು
ನಿರುತ ಶ್ರುತಿಗಳ ಶಿರದೊಳಾಂತುದು
ಅರಿಯಲದು ತಾ ಮುಕ್ತಿಬೀಜವು ವರ ಷಡಕ್ಷರವು || ೬ ||

ಸಪ್ತಮಾವರಣ :—ಪಾದೋದಕ

ಪಾದಶಬ್ದವು ಪರಮಪೂಜ್ಯವು
ಪಾದದುದಕವು ಜ್ಞಾನದವು ನಿ
ರ್ಭೇದ ತತ್ತ್ವದ ದೀಕ್ಷೆ ಶಿಕ್ಷಾಜ್ಞಾನ ಸಮರಸವು ||
ಸಾಧಕನು ಗುರುಲಿಂಗ ಜಂಗಮ
ಪಾದದುದಕವ ನೋಜೆಯಿಂದಲಿ
ಸಾಧಿಸುತಲಾಸ್ವಾದಿಸುತ ತ್ರೈಮಲವ ವರ್ಜಿಪನು || ೭ ||

ಅಷ್ಟಮಾವರಣ :—ಪ್ರಸಾದ

ಪರಮಗುರು ತನ್ನಿಷ್ಟಲಿಂಗಕೆ
ಇರದೆ ಮಾಡುವ ಅರ್ಪಣವೆ ತಾ
ಪರಕು ಇಹುಕದು ಸತ್ಪ್ರಸಾದವು ಶ್ರೇಷ್ಠಸಾಧನವು ||
ಪರಮಗುರುಗಳು ಒಕ್ಕುಮಿಕ್ಕುದ–
ನರಿದು ಸೇವಿಸೆ ಜನುಮ ಪಾವನ
ಪರಮಪಾವನ ಮನದ ಭಾವನ ವಿನತರಾಗಿಹರ || ೮ ||

ಫಲಶ್ರುತಿ :—

ತನುಮನವ ನಾವರಣವೆಂಟರ
ಅನುವನರಿದನುಭಾವಿಗಳು ತವೆ
ಘನತೆಯಲಿ ಶೈವೋಕ್ತ ರೀತಿಯೊಳಳವಡಿಸಿಕೊಳುವರ್ ||
ಅನವರತವೀ ಆವರಣವಿದು
ಜನಕೆ ರಕ್ಷಾಕವಚವೆನಿಪುದು
ಚಿನುಮಯಾತ್ಮಕ ಶಿವನು ಜನತೆಗೆ ಬೋಧಿಸಿದ ಕ್ರಮವು

—ವಿದ್ವಾನ್ ಎಲ್. ಸಿದ್ಧಗಂಗದೇವರು, ತುಮಕೂರು

# ಎರಡನೇ ಪ್ರಕರಣ ಕ್ರಿಯಾಪದಗಳ ವಿಭಾಗ

## ಅನದ್ಯತನ ಭೂತ ಕಾಲ "ಲಙ್" mperfect

ಪರ ¸ೈ ಪದ ಪ್ರತ್ಯಯಗಳು

| | ಏ | ದ್ವಿ | ಬ |
|---|---|---|---|
| ಪ್ರ. ಪು | ತ್ | ತಾಮ್ | ಅನ್ |
| ಮ ಪು | ಸ್ | ತಮ್ | ತ |
| ಉ. ಪು | ಅಮ್ | ವ | ಮ |

ಕೆಲವು ರೂಪಗಳು. ( ವಚನ ಪುರುಷಗಳನ್ನು ಕ್ರಮವಾಗಿ ಬರೆಯಬೇಕು.) ಪಠ್ = ಅಪಠತ್ = ಓದಿದನು.

| | | |
|---|---|---|
| ಅಪಠತ್ | ಅಪಠತಾಂ | ಅಪಠನ್ |
| ಅಪಠ: | ಅಪಠತಂ | ಅಪಠತ |
| ಅಪಠಂ | ಅಪಠಾವ | ಅಪಠಾಮ |

### ವಾಕ್ಯದಲ್ಲಿ ಪ್ರಯೋಗ

ಪ್ರ.ಪು

ಬಾಲ: ಅಪಠತ್ = ಹುಡುಗ ಓದಿದನು
ಬಾಲೌ ಅಪಠತಾಂ = ಇಬ್ಬರು ಹುಡುಗರು ಓದಿದರು.
ಬಾಲಾ: ಅಪಠನ್ = ಹುಡುಗರು ಓದಿದರು.

ಮ.ಪು

ತ್ವಂ ಅಪಠ: = ನೀನು ಓದಿದೆ
ಯುವಾಂ ಅಪಠತಂ = ನೀವಿಬ್ಬರು ಓದಿದಿರಿ
ಯೂಯಂ ಅಪಠತ = ನೀವು ಓದಿದಿರಿ

ಉ ಪು

ಅಹಂ ಅಪಠಂ = ನಾನು ಓದಿದೆ | ವಯಂ ಅಪಠಾಮ = ನಾವು ಓದಿದೆವು.
ಆವಾಂ ಅಪಠಾವ = ನಾವಿಬ್ಬರೂ ಓದಿದೆವು

ಪಿಬ್. ಅಪಿಬತ್—ಕುಡಿದನು.

| | | |
|---|---|---|
| ಅಪಿಬತ್ | ಅಪಿಬತಾಂ | ಅಪಿಬನ್ |
| ಅಪಿಬ: | ಅಪಿಬತಂ | ಅಪಿಬತ |
| ಅಪಿಬಂ | ಅಪಿಬಾವ | ಅಪಿಬಾಮ |

ಗಮ್ = ಗಚ್ಛ್ ಆದೇಶ = ಅಗಚ್ಛತ್ = ಹೋದನು.

| | | |
|---|---|---|
| ಅಗಚ್ಛತ್ | ಅಗಚ್ಛತಾಂ | ಅಗಚ್ಛನ್ |
| ಅಗಚ್ಛ: | ಅಗಚ್ಛತಂ | ಅಗಚ್ಛತ |
| ಅಗಚ್ಛಂ | ಅಗಚ್ಛಾವ | ಅಗಚ್ಛಾಮ |

ದೃಶ್ = ಪಶ್ಯಾದೇಶ, ಅಪಶ್ಯತ್ = ನೋಡಿದನು

| | | |
|---|---|---|
| ಅಪಶ್ಯತ್ | ಅಪಶ್ಯತಾಂ | ಅಪಶ್ಯನ್ |
| ಅಪಶ್ಯ: | ಅಪಶ್ಯತಂ | ಅಪಶ್ಯತ |
| ಅಪಶ್ಯಂ | ಅಪಶ್ಯಾವ | ಅಪಶ್ಯಾಮ. |

ಸ್ಥಾ, ತಿಷ್ಠ ಆದೇಶ, ಅತಿಷ್ಠತ್ = ನಿಂತನು

| | | |
|---|---|---|
| ಅತಿಷ್ಠತ್ | ಅತಿಷ್ಠತಾಂ | ಅತಿಷ್ಠನ್ |
| ಅತಿಷ್ಠ: | ಅತಿಷ್ಠತಂ | ಅತಿಷ್ಠತ |
| ಅತಿಷ್ಠಂ | ಅತಿಷ್ಠಾವ | ಅತಿಷ್ಠಾಮ. |

ಅನದ್ಯತನ ಭೂತಕಾಲ ಆತ್ಮನೇ ಪದದ ಪ್ರತ್ಯಯಗಳು.

| ಏ | ದ್ವಿ | ಬ |
|---|---|---|
| ತ | ಇತಾಮ್ | ಅಂತ |
| ಥಾಸ್ | ಇಥಾಮ್ | ಧ್ವಮ್ |
| ಇ | ವಹಿ | ಮಹಿ |

ಕೆಲವು ಉದಾಹರಣ ರೂಪಗಳು. ವದಿ-ಅಭಿವಾದನೆ. ನಮಸ್ಕರಿಸು.

| | | |
|---|---|---|
| ಅವಂದತ | ಅವಂದೇತಾಂ | ಅವಂದಂತ |
| ಅವಂದಥಾ: | ಅವಂದೇಥಾಂ | ಅವಂದಧ್ವಂ, |
| ಅವಂದೇ | ಅವಂದಾವಹಿ | ಅವಂದಾಮಹಿ. |

ಕಪಿ= ಚಲನೆ= ಅಲ್ಲಾಡು

| | | |
|---|---|---|
| ಅಕಂಪತ | ಅಕಂಪೇತಾಮ್ | ಅಕಂಪಂತ |
| ಅಕಂಪಥಾ : | ಅಕಂಪೇಥಾಮ್ | ಅಕಂಪಧ್ವಂ |
| ಅಕಂಪೇ | ಅತಂಪಾವಹಿ | ಅಕಂಪಾಮಹಿ |

## ಎರಡನೇ ಪ್ರಕರಣ ಶಬ್ದವಿಭಾಗ

ಅಜಂತ ಉಕಾರಾಂತ ಮತ್ತು ಋಕಾರಾಂತ ಶಬ್ದಗಳು.

ಉಕಾರಾಂತ : ಪುಲಿಂಗೊ ಭಾನು ಶಬ್ದ := ಸೂರ್ಯನು

| | | |
|---|---|---|
| ಭಾನು : | ಭಾನೂ | ಭಾನವ : |
| ಭಾನೋ | ಹೇ ಭಾನೂ | ಹೇ ಭಾನವ : |
| ಭಾನುಂ | ಭಾನೂ | ಭಾನೂನ್ |
| ಭಾನುನಾ | ಭಾನುಭ್ಯಾಂ | ಭಾನುಭಿ : |
| ಭಾನವೇ | ಭಾನುಭ್ಯಾಂ | ಭಾನುಭ್ಯ: |
| ಭಾನೋ : | ಭಾನುಭ್ಯಾಂ | ಭಾನುಭ್ಯ: |
| ಭಾನೋ : | ಭಾನ್ವೋ : | ಭಾನೂನಾಂ |
| ಭಾನೌ | ಭಾನ್ವೋ : | ಭಾನುಷು. |

ಇದರಂತೆ-''ವಾಯು :-ಗಾಳಿ ಗುರು :-ಉಪದೇಶಕ. ಶಂಭು:= ಈಶ್ವರ. ವಿಷ್ಣು:= ವಿಷ್ಣುವು" ನಡೆಸಬೇಕು.

ಋಕಾರಾಂತ: ಪುಲ್ಲಿಂಗೋ ಧಾತೃ-ಶಬ್ದ:= ಬ್ರಹ್ಮನು

| | | |
|---|---|---|
| ಧಾತಾ | ಧಾತಾರೌ | ಧಾತಾರ : |
| ಹೇ ಧಾತ : | ಹೇ ಧಾತಾರೌ | ಹೇ ಧಾತಾರ : |
| ಧಾತಾರಂ | ಧಾತಾರೌ | ಧಾತ್ರೂನ್ |
| ಧಾತ್ರಾ | ಧಾತೃಭ್ಯಾಂ | ಧಾತೃಭಿ : |
| ಧಾತ್ರೆ | ಧಾತೃಭ್ಯಾಂ | ಧಾತೃಭ್ಯ: |
| ಧಾತು : | ಧಾತೃಭ್ಯಾಂ | ಧಾತೃಭ್ಯ: |
| ಧಾತು : | ಧಾತ್ರೋ : | ಧಾತ್ರೂಣಾಂ |
| ಧಾತರಿ | ಧಾತ್ರೋ : | ಧಾತೃಷು |

ಇದರಂತೆ ಇರತಕ್ಕ ಅಲ್ಪ ಸ್ವಲ್ಪ ವ್ಯತ್ಯಾಸವುಳ್ಳ ಋಕಾರಾಂತ ಶಬ್ದಗಳು.

ಪಿತೃ= ತಂದೆ.

| | | |
|---|---|---|
| ಪಿತಾ | ಪಿತರೌ | ಪಿತರ : |
| ಹೇ ಪಿತ : | ಹೇ ಪಿತರೌ | ಹೇ ಪಿತರ : |
| ಪಿತರಂ | ಪಿತರೌ | ಪಿತ್ರೂನ್ |

ಇನ್ನುಳಿದ ವಿಭಕ್ತಿಗಳು ಧಾತೃ ಶಬ್ದದಂತೆ ನಡೆಯುತ್ತವೆ

ಜಾಮಾತೃ= ಅಳಿಯ. ಭ್ರಾತೃ= ಸಹೋದರ ಇವು ಪಿತೃ ಶಬ್ದದಂತೆ. ಮಾತೃ= ತಾಯಿ. ಋಕಾರಾಂತವಾದ ಸ್ತ್ರೀಲಿಂಗ ಶಬ್ದದ ದ್ವಿತೀಯಾ ವಿಭಕ್ತಿಯ ಬಹು ವಚನದಲ್ಲಿ ಮಾತ್ರ, ''ಮಾತರಂ ಮಾತರೌ ಮಾತ್ರೂ:" ಎಂದು ವಿಸರ್ಗಾಂತವಾಗಿರುವುದು. ಉಳಿದ ವಿಭಕ್ತಿಗಳು ಧಾತೃ ಶಬ್ದದಂತೆ. ಕರ್ತೃ= ಕೆಲಸ ಮಾಡತಕ್ಕವನು, ಭರ್ತೃ= ಒಡೆಯ. ಇವೆರಡು ಶಬ್ದಗಳು ಯಾವ ಬದಲಾವಣೆಯನ್ನೂ ಹೊಂದದೆ ಧಾತೃ ಶಬ್ದದಂತೆ ನಡೆಯುತ್ತವೆ.

## ಎರಡನೇ ಪಾಠ

### ವರ್ತಮಾನ ಮತ್ತು ಸಾಮಾನ್ಯ ಭೂತಕಾಲ ಪ್ರಯೋಗ.

### ಶ್ರೀರಾಮಃ

ಗ್ರಾಮೇ ದೇವಾಲಯ: ವರ್ತತೆ, ದೇವಾಲಯೆ ಶ್ರೀರಾಮಸ್ಯ ಪ್ರತಿಮಾ ಅಸ್ತಿ। ಪ್ರತಿಮಾ ರಮಣೀಯಾ ಇತಿ ವದಂತಿ, ತಸ್ಯ ಮಸ್ತಕೇ ಮುಕುಟಃ, ಹಸ್ತೇ ಚಾಪಃ, ಕಂಠೇ ಹಾರಃ ಚ ವಿರಾಜಂತೆ.

ದಶರಥ: ಶ್ರೀರಾಮಸ್ಯ ಜನಕಃ। ತಸ್ಯ ಮಾತಾ ಕೌಸಲ್ಯಾ। ತಸ್ಯ ಭಾರ್ಯಾ ಸೀತಾ। ಲಕ್ಷ್ಮಣಃ ಭರತಃ ಶತೃಘ್ನಃ ಇತಿ ತಸ್ಯತ್ರಯಃ ಭ್ರಾತರಃ ಸಂತಿ। ವಿಶ್ವಾಮಿತ್ರ: ತಸ್ಯ ಧನುರ್ವಿದ್ಯಾಗುರುಃ।

ಸಃ ಪಿತ್ರಾಜ್ಞಯಾ ವನಂ ಅಗಚ್ಛತ್। ತೇನ ಸಹ ಸೀತಾ ಲಕ್ಷ್ಮಣೌ ಚ ಅಗಚ್ಛತಾಂ। ಮಾರ್ಗೆ ಗುಹೊ ನಾಮ ನಿಷಾದಂ ಅಪಶ್ಯನ್। ಗುಹೋಪಿ ತೇಭ್ಯಃ ಫಲಾನಿ ಪುಷ್ಪಾಣಿ ಚ ಅಯಚ್ಛತ್। ತೇನ ತುಷ್ಟ : ರಾಮ : ಫಲಂ ಅಖಾದತ್ ಜಲಂ ಅಪಿ-ಬತ್ ಚ। ಅನಂತರಂ ತೆ ಗಂಗಾಂ ಅಪಶ್ಯನ್। ಭಕ್ತ್ಯಾ ತಾಂ ಅನಮನ್। ರಾಮ : ನದ್ಯಾಂ ನ್ಯಮ-ಜ್ಜತ್ ಸ್ತೋತ್ರಂ ಅಪಠತ್। ರಾಮಂ ಅವತಾರ ಪುರುಷ : ಇತಿ ವದಂತಿ। ಅತ : ವಾಲ್ಮೀಕಿ : ಏವಂ ವರ್ಣಯತಿ.

1) ''ಸಮುದ್ರ ಇವ ಗಾಂಭೀರ್ಯ: ಧೈರ್ಯೇಣ ಹಿಮವಾನಿವ ।
ವಿಷ್ಣುನಾ ಸದೃಶೊ ವೀರ್ಯ: ಸೋಮವತ್ ಪ್ರಿಯದರ್ಶನ: ।

2) ಕಾಲಾಗ್ನಿ ಸದೃಶ: ಕ್ರೋಧೇ ಕ್ಷಮಯಾ ಪೃಥಿವೀ ಸಮ:
ಧನದೇನ ಸಮ ತ್ಯಾಗೆ ಸತ್ಯೆ ಧರ್ಮ ಇವಾ ಪರ:॥

ಕಠಿಣ ಪದಗಳ ಅರ್ಥಗಳು

ಪ್ರತಿಮಾ= ವಿಗ್ರಹ.
ಅಯಚ್ಛತ್= ಕೊಟ್ಟನು.
ಮಸ್ತಕೆ= ತಲೆಯ ಮೇಲೆ.
ಮುಕುಟ := ಕಿರೀಟ.
ಚಾಪ := ಬಿಲ್ಲು.
ಜನಕ := ತಂದೆ
ಭಾರ್ಯಾ= ಹೆಂಡತಿ.
ನಿಷಾದ := ಬೇಡ
ಅನಮನ್ =ನಮಸ್ಕರಿಸಿದರು.
ನ್ಯಮಜ್ಜತ್= ಸ್ನಾನ ಮಾಡಿದನು.
ವೀರ್ಯ:= ಪರಾಕ್ರಮ
ಸೋಮವತ್= ಚಂದ್ರನಂತೆ.
ಧನದ= ಕುಬೇರ.



# ಫರ್ಡಿನೆಂಡ್ ಡಿ ಸಸ್ಸೂರ್

## ೧೮೫೭ - ೧೯೧೩

## Ferdinand de Saussur

---

Few other figures in the history of the science of language have commanded such lasting respect and inspired such varied accomplishments as Ferdinand de Saussur . — (He) was among the first to see that language is a self-contained system whose interdependent parts function and acquire value through their relationship to the whole.

—*W. Baskin*

---

ಭಾಷಾವಿಜ್ಞಾನ ಕ್ಷೇತ್ರದಲ್ಲಿ ಫರ್ಡಿನೆಂಡ್ ಡಿ ಸಸ್ಸೂರನಿಗೆ ಇಂದು ಇರುವ ಸ್ಥಾನವನ್ನು ಕೆಲವರು ನಾಟಕಕ್ಷೇತ್ರದಲ್ಲಿ ಇಬ್ಸನ್ನನಿಗೆ ಇರುವ ಸ್ಥಾನದೊಡನೆ ಹೋಲಿಸುವುದುಂಟು. ಏಕೆಂದರೆ ಅವರ ಹೆಸರುಗಳನ್ನು ಮತ್ತೆ ಮತ್ತೆ ಉದಾಹರಿಸಿ ಹೇಳದೆ ಆಗೊಮ್ಮೆ ಈಗೊಮ್ಮೆ ಮಾತ್ರ ಉದಾಹರಿಸುವರು. ಇದರಿಂದಾಗಿ ಸಸ್ಸೂರನ ಹೆಸರು ಹೇಳಿ ಅದರೊಡನೆ "ಇದು ಸಸ್ಸೂರನು ಕೊಟ್ಟ ವಿವರಣೆ" ಎಂದು ವಿದ್ವಾಂಸರು ನಿರೂಪಿಸುವುದರಿಂದ ಅದು ಬಿಟ್ಟು ಉಳಿದುವೆಲ್ಲ ಫರ್ಡಿನೆಂಡ್ ಸಸ್ಸೂರ್ ಹೇಳಿದುದಲ್ಲವೆಂಬ ಭಾವನೆ ಬರಲು ಅವಕಾಶ ಇದೆ. ಆದರೆ ವಾಸ್ತವವಾಗಿ ಸಸ್ಸೂರನ ವಿಚಾರ ಪ್ರತಿಪಾದನೆ ಹಾಗೂ ವಿವರಣೆ ವಿಶಾಲವಾದುದು. ಅದು ಈ ಬಗೆಯ ಪ್ರಾಸಂಗಿಕ ಉದಾಹರಣೆ ಅಥವಾ ಉಲ್ಲೇಖಗಳ ಎಲ್ಲೆಗಷ್ಟೇ ಸೀಮಿತವಾದುದೇನೂ ಅಲ್ಲ. ಇಂದಿನ ಭಾಷಾ ವಿಜ್ಞಾನದ ವಿವಿಧ ಮೌಲ್ಯಗಳ, ಬಗೆಬಗೆಯ ವಿಭಾಗಗಳ ವಿಚಾರಸರಣಿಯು ಬಹುಭಾಗ ಅವನ ಬರಹದ ವ್ಯಾಪ್ತಿಯಲ್ಲಿ ಒಳಗೊಂಡಿದೆ. ಇಲ್ಲೋ ಕೇವಲ ಕೆಲವು ಹೊಸ ವಿಚಾರಗಳು ಅವನ ನಿರೂಪಣೆಯಲ್ಲಿ ಅಡಕವಾಗಿ ಇರಬಹುದು.

ಫರ್ಡಿನೆಂಡ್ ಸಸ್ಸೂರನ ವಿಶಿಷ್ಟ ಕಾಣಿಕೆ ಭಾಷಾವಿಜ್ಞಾನ ಕ್ಷೇತ್ರದಲ್ಲಿ Langue ಮತ್ತು Parole ಎಂಬ ಭಾಗದ ವಿವರಣೆಯಲ್ಲಿ ಅಡಗಿದೆಯೆನ್ನಬಹುದು. ಎರಡನೆಯದಾಗಿ ಭಾಷೆಯ ರಚನೆಯಲ್ಲಿ ವೈದೃಶ್ಯಗಳನ್ನು (Contrasts) ಒಡ್ಡುವ ವಿಚಾರವಂತೂ ಬಹುವಾಗಿ ಅವನ ನವೀನ ದೃಷ್ಟಿಯ ಫಲ. ಪದಗಳ ರಚನೆ ನೋಡಬೇಕಾದರೆ ಯಾದೃಚ್ಛಿಕ ವೈದೃಶ್ಯಗಳಿಗೆ ಪ್ರಾಧಾನ್ಯ, ಅದರ ವಿವಿಧ ಭಾಗಗಳಿಗೆ ಅನಂತರದ ಎರಡನೆಯ ಸ್ಥಾನ. ಸಸ್ಸೂರನ ಈ ನಿರೂಪಣೆಯಿಂದ ಮುಂದುವರಿದು ಇತ್ತೀಚೆಗೆ ಹೊಸ ಸಂಶೋಧನೆ ಸಾಗಿದೆಯಾದರೂ, ಈ ಎಲ್ಲ ಸಂಶೋಧನೆಯತ್ತ ದಿಗ್ದರ್ಶನ ಮಾಡಿದ ನಿರ್ದೇಶಕಾಂಶಗಳು ಅವನ ವಿಚಾರ ಪ್ರತಿಪಾದನೆಯಲ್ಲಿ ಅಂತರ್ಗತವಾಗಿದ್ದುವು.

ಸಸ್ಸೂರ್ ಪ್ರತಿಭಾಶಾಲಿ. ಕೇವಲ ತನ್ನ ಇಪ್ಪತ್ತನೆಯ ವಯಸ್ಸಿನಲ್ಲಿ, ಇಂದಿಗೂ ಒಂದು ಬೃಹತ್ ಕೃತಿಯೆಂದು ಪರಿಗಣಿಸಲಾಗಿರುವ 'ಪೂರ್ವ ಇಂಡೋ-ಯುರೋಪಿಯನ್ ಸ್ವರಾತ್ಮಕ ವ್ಯವಸ್ಥೆ"—Vocalic system of Proto Indo-European—

ಎಂಬ ವಿಸ್ತಾರವಾದ ವಿಷಯದ ಮೇಲೆ ಪ್ರೌಢ ನಿಬಂಧವೊಂದನ್ನು ಸಿದ್ಧಪಡಿಸಿದ್ದನು; ಇದರಿಂದಲೇ ಅವನ ಅಸಾಧಾರಣ ಬುದ್ಧಿ ಸಾಮರ್ಥ್ಯವನ್ನು ಊಹಿಸಬಹುದು. ಫರ್ಡಿನೆಂಡ್ ಸಸ್ಸೂರ್ ನವ ವೈಯಾಕರಣರ (Jung grammarians) ಪಂಥದ ಪ್ರಭಾವಕ್ಕೆ ಒಳಗಾದವನು. ನವವೈಯಾಕರಣರ ಗುಂಪಿನಲ್ಲಿ ಪ್ರಮುಖರಾದ ಒಸ್ತಾಫ್ ಮತ್ತು ಲೆಸ್ಕಿ (Osthoff and Leskien)ರ ಕೈಕೆಳಗೆ ತಯಾರಾದ ಭಾಷಾ ವಿಜ್ಞಾನಿ ಈತ. ಆದರೆ ಪೂರ್ಣವಾಗಿ ತನ್ನ ಭಿನ್ನಾಭಿಪ್ರಾಯಗಳನ್ನು ದಾಕ್ಷಿಣ್ಯಕ್ಕೆ ಕಟ್ಟುಬಿದ್ದು ಆತ ಎಂದೂ ಬಲಿಗೊಡಲಿಲ್ಲ. ಆದುರಿಂದ ತನ್ನ ವೈಯಕ್ತಿಕ ಅಭಿಪ್ರಾಯಗಳು ಈ ನವವೈಯಾಕರಣ ಪಂಥಕ್ಕೆ ವಿರೋಧವಾಗಿದ್ದಲ್ಲಿ ಅವನ್ನು ಧೈರ್ಯವಾಗಿ ಎತ್ತಿಹಿಡಿದನಲ್ಲದೆ ನಿರ್ಭಯವಾಗಿ ಪ್ರತಿಪಾದಿಸಿದನು.

ಜಗತ್ತಿನಲ್ಲಿ ಇಂದು ಹಿರಿಯ ಭಾಷಾ ವಿಜ್ಞಾನಿಗಳೆಂದು ಯಾರು ಯಾರು ಪರಿಗಣಿತರಾಗಿರುವರೊ ಅವರಲ್ಲಿ ಬಹುಮಟ್ಟಿಗೆ ಎಲ್ಲರೂ ಶಾಲಾ ಕಾಲೇಜುಗಳಲ್ಲಿ, ವಿವಿಧ ವಿಶ್ವವಿದ್ಯಾಲಯಗಳಲ್ಲಿ ಬೋಧಕರಾಗಿದ್ದರು. ಹೀಗಾಗಿ ಅವರೆಲ್ಲ ತಮ್ಮ ಹಿಂದೆ ಒಂದು ಪ್ರಭಾವಿತ ಶಿಷ್ಯವರ್ಗವನ್ನು ಕಟ್ಟಿಬಿಟ್ಟು ಹೋಗಿರುವರು. ಎಡ್ವರ್ಡ್ ಪ್ರೊಕೊಸ್ಟ್, ಲಿಯೊನಾರ್ಡ್ ಬ್ಲೂಮ್‌ಫೀಲ್ಡ್, ಎಡ್ವರ್ಡ್ ಸಪೀರ್ ಮುಂತಾದವರಿಗೆಲ್ಲ ಈ ಹೇಳಿಕೆ ಅನ್ವಯಿಸುತ್ತದೆ. ಸಸ್ಸೂರ್ ಕೂಡ ಈ ಮಾತಿಗೊಂದು ಶ್ರೇಷ್ಠ ನಿದರ್ಶನವಾಗಿ ನಿಂತಿದ್ದಾನೆ, ಅಷ್ಟೇ ಅಲ್ಲ ಅವನ ಶಿಷ್ಯರ ಅದ್ಭುತ ಪ್ರಯತ್ನದಿಂದಾಗಿ ಸಸ್ಸೂರ್ ಪಟ್ಟ ಶ್ರಮ ಸಾರ್ಥಕವಾಗಿದೆ. 1881ರಿಂದ 1891ರ ವರೆಗೆ ಸಸ್ಸೂರ್ ಹತ್ತು ವರುಷಕಾಲ ಪ್ಯಾರಿಸ್ಸಿನಲ್ಲಿ ಸಂಸ್ಕೃತ ಪಾಠ ಹೇಳಿದನು. ಮತ್ತು ಈ ಅವಧಿಯಲ್ಲಿ ಆತ ಒಳ್ಳೆಯ ಶಿಷ್ಯವರ್ಗವನ್ನೂ ಕಟ್ಟಿದನು. ಇದಲ್ಲದೆ ಸಸ್ಸೂರ್ ಈ ಕಾಲದಲ್ಲಿ ಕೆಲವು ಉತ್ಕೃಷ್ಟ ಲೇಖನಗಳನ್ನೂ ಬರೆದನು. ಆದರೂ ಅವನು ಬದುಕಿರುವಾಗ ಅವನ ಒಟ್ಟು ಬರವಣಿಗೆಯ ಸುಮಾರು ಆರುನೂರು ಪುಟಗಳಷ್ಟು ಮಾತ್ರ ಬೆಳಕು ಕಂಡಿತು. ಫ್ರಿಜಿಯನ್ ಭಾಷೆಯ ಶಾಸನ ಹಾಗೂ ಲಿಥೂನಿಯನ್ ಉಪಭಾಷೆಗಳನ್ನು ಕುರಿತು ಸುದೀರ್ಘ ಸಂಶೋಧನೆ ನಡೆಸಿದನು. ಪ್ಯಾರಿಸ್ಸಿನಲ್ಲಿ ಸಂಸ್ಕೃತ ಬೋಧಿಸಿದ ಮೇಲೆ ಅಲ್ಲಿಂದ ಆತ ಜಿನೀವ (Geneva) ವಿಶ್ವವಿದ್ಯಾಲಯದಲ್ಲಿ ಜೋಸೆಫ್ ವರ್ಥೈಮರ್ (Joseph Wertheimer) ಎಂಬ ವಿದ್ವಾಂಸನ ಸ್ಥಾನಕ್ಕೆ ಪ್ರಾಧ್ಯಾಪಕನಾಗಿ ನೇಮಕಗೊಂಡನು. ಜಿನೀವಾ ವಿಶ್ವವಿದ್ಯಾಲಯದಲ್ಲಿ ಒಟ್ಟು 1906ರಿಂದ 1911ರ ವರೆಗೆ ಐದು ವರುಷ ಬೋಧಿಸಿದನು. ಇಲ್ಲಿ ಆತನನ್ನ ಎಲ್ಲ ಹೊಸ ವಿಚಾರಗಳನ್ನು ವಿದ್ಯಾರ್ಥಿವೃಂದಕ್ಕೆ ಹಂಚಿ ಆನಂದಿಸಿದನು. ಅವನ ಅತ್ಯಂತ ಆಕರ್ಷಕವಾದ ಮತ್ತು ಅಷ್ಟೇ ಪ್ರೌಢವಾದ ಬೋಧನಾಕ್ರಮ ಹೊಸ ಪೀಳಿಗೆಗೊಂದು ಪ್ರಬಲ ಪ್ರಚೋದನೆ ನೀಡಿತಲ್ಲದೆ ಹೊಸ ದಿಗಂತಗಳನ್ನು ಕಾಣಲು ಸಹಕಾರಿಯಾಯಿತು.

ಫರ್ಡಿನೆಂಡ್ ಡಿ ಸಸ್ಸೂರ್ ಬರೆದ ಪುಸ್ತಕವೆಂದು ಇಂದು ಪ್ರಸಿದ್ಧಿಪಡೆದಿರುವ Course in General Linguistics ಎಂಬ ಗ್ರಂಥ ವಾಸ್ತವವಾಗಿ ಆತ ಕೂತು ಬರೆದುದಲ್ಲ. ಆ ಕೃತಿಗೆ ಹಿನ್ನೆಲೆಯಾಗಿ ಸ್ವಾರಸ್ಯವಾದ ಒಂದು ಕಥೆಯೇ ಇದೆ. ಸಸ್ಸೂರ್ ತನ್ನ ಜೀವಿತಕಾಲದಲ್ಲಿ ಬಿಡಿಬಿಡಿ ಲೇಖನಗಳ ಹೊರತು ಪ್ರತ್ಯೇಕ ಪುಸ್ತಕವಾವುದನ್ನೂ ರಚಿಸಲಿಲ್ಲ. ಆದರೆ ಭಾಷಾ ವಿಜ್ಞಾನವನ್ನು ಕುರಿತು ಆಳವಾಗಿ ಅಭ್ಯಾಸ ಮಾಡಿ ಅತ್ಯಂತ ಕ್ರಮಬದ್ಧವಾದ ಪಾಠ ಹೇಳಿದನು. ಅಷ್ಟು ವರುಷ ಪಾಠ ಹೇಳಿದರೂ ಆತ ಪುಸ್ತಕ ಸಿದ್ಧಪಡಿಸಲೇ ಇಲ್ಲ. ಹೀಗಿರುವಾಗ ಇದ್ದಕ್ಕಿದ್ದಹಾಗೆ 1913ರಲ್ಲಿ ತನ್ನ ಐವತ್ತಾರನೆಯ ವಯಸ್ಸಿನಲ್ಲಿ ನಿಧನನಾದನು. ಆಗ ಅವನದೆಂದು ಹೇಳುವ ಗ್ರಂಥವೇ ಇರಲಿಲ್ಲ. ಇದರ ಅಗತ್ಯವನ್ನು ಮನಗಂಡ ಆತನ ಕೆಲವು ಶಿಷ್ಯರು ಒಟ್ಟಿಗೆ ಕಲೆತು ಯೋಜನೆಯೊಂದನ್ನು ಹಾಕಿಕೊಂಡರು. ಅದುವರೆಗೂ ಸಸ್ಸೂರನ ಭಾಷಾ ವಿಜ್ಞಾನ ಬೋಧನೆಯ ತರಗತಿಗಳನ್ನು ತಪ್ಪದೆ ಹಾಜರಾಗಿದ್ದು ಗುರುತು ಹಾಕಿಕೊಂಡುದನ್ನು ಒಂದೆಡೆ ಶೇಖರಿಸಿದರು ಅನಂತರ ಅವುಗಳಲ್ಲಿ ಒಂದೇ ವಿಧವಾಗಿದ್ದ ಬರವಣಿಗೆಯ ಮಾತುಗಳನ್ನೆಲ್ಲ ಸಂಗ್ರಹಿಸಿದರು. ಹೀಗೆ ಕ್ರಮಕ್ರಮವಾಗಿ ವಿವೇಚಿಸಿ ವಿಂಗಡಿಸಿ ಸಸ್ಸೂರನ ಮೂಲಬೋಧನೆಯ ವಾಕ್ಯಗಳನ್ನು ಪತ್ತೆಹಚ್ಚಿ ಅವನ ಹೆಸರಿನಲ್ಲಿಯೇ ಪುಸ್ತಕ ರೂಪದಲ್ಲಿಯೇ ಪ್ರಕಟಿಸಿದರು ಈ ಶ್ರಮಸಾಧ್ಯ ಪವಿತ್ರ ಕಾರ್ಯದಲ್ಲಿ Charles Bally, Albert Sechehaye Albert Reidlinger ಎಂಬ

ಪ್ರತಿಭಾವಂತ ವಿದ್ಯಾರ್ಥಿಗಳು ಬಹಳ ಪ್ರಮುಖ ಪಾತ್ರ ವಹಿಸಿದ್ದರು. ಅವರ ಶ್ರದ್ಧಾನ್ವಿತ ಶ್ಲಾಘನೀಯ ಪ್ರಯತ್ನದ ಫಲವಾಗಿ ಹೊರಬಂದ ಗ್ರಂಥ ಫ್ರೆಂಚ್ ಭಾಷೆಯಲ್ಲಿತ್ತು. ಫ್ರೆಂಚ್ ಭಾಷೆ ಬಾರದ ಜನರಿಗೆ ಇದರ ಪ್ರಯೋಜನವಾಗಲೆಂದು ವೇಡ್‌ಬಸ್ಕಿನ್ ಎಂಬ ಇಂಗ್ಲಿಷ್ ವಿದ್ವಾಂಸ ಈ ಕೃತಿಯನ್ನು 1959ರಲ್ಲಿ ಇಂಗ್ಲೀಷಿಗೆ ಅನುವಾದ ಮಾಡಿದನು. ಇದಲ್ಲದೆ ಜರ್ಮನ್ ಮತ್ತು ಸ್ಪ್ಯಾನಿಷ್ ಭಾಷೆಗಳಿಗೂ ಈ ಗ್ರಂಥ ಭಾಷಾಂತರವಾಗಿದೆ. ಕೇವಲ 232 ಪುಟಗಳ ಈ ಪುಸ್ತಕ ಪ್ರಪಂಚದ ಹಲವು ಜನ ಪ್ರಾಜ್ಞರಿಗೆ ನೆರವು ನೀಡಿ ಸ್ಫೂರ್ತಿ ಕೊಟ್ಟಿದೆ; ಭಾಷಾ ವಿಜ್ಞಾನವನ್ನು ಕುರಿತು ಬರೆದ ಕೃತಿಗಳಲ್ಲಿ ಮೇಲ್ಮಟ್ಟದ ಗ್ರಂಥಗಳೆಂದು ಪರಿಗಣಿಸಿರುವ ಪುಸ್ತಕಗಳ ಸಾಲಿನಲ್ಲಿ ಉನ್ನತವಾಗಿ ನಿಂತಿದೆ.

1897ರಲ್ಲಿ ಫರ್ಡಿನೆಂಡ್ ಸಸ್ಸೂರ್ ಕೊಟ್ಟ ಮೂರು ಉಪನ್ಯಾಸಗಳಲ್ಲದೆ 1906-1907, 1908-1909 ಮತ್ತು 1910-1911ರಲ್ಲಿ ಮೂರು ಬಾರಿ ಭಾಷಾ ವಿಜ್ಞಾನವನ್ನು ಕುರಿತು ಕೆಲವು ಗಮನಾರ್ಹ ಉಪನ್ಯಾಸಗಳನ್ನು ನೀಡಿದ್ದನು. ಆಗ ಆ ತರಗತಿಗಳಿಗೆ ಬಂದಿದ್ದ ಅವನ ವಿದ್ಯಾರ್ಥಿಗಳು ಬರೆದುಕೊಂಡ ಪಾಠ ಪ್ರವಚನದ ಪ್ರತಿರೂಪ ಆಗಲೇ ಹೆಸರಿಸಿರುವ ಅವನ ಪುಸ್ತಕದಲ್ಲಿ ಸಮಾವೇಶವಾಗಿದೆ ಈ ಗ್ರಂಥದಲ್ಲಿ ವಿದ್ಯಾರ್ಥಿಗಳ ಪಾತ್ರ ಪ್ರಮುಖವಾದರೂ ಪೂರ್ಣವಾಗಿ ಅವರ ಸ್ವಂತ ಇಲ್ಲವೇ ಸ್ವತಂತ್ರ ಸೃಷ್ಟಿಯಲ್ಲ. ಅವರದು ಬಹುವಾಗಿ ಲಿಪಿಕಾರನ ಕೆಲಸ ಮೂಲ ಗ್ರಂಥವನ್ನು ಸಿದ್ಧಪಡಿಸಿದ ಮೇಲೆ ಆದರಲ್ಲಿ ಅಲ್ಲಲ್ಲಿ ಅರ್ಥವಾಗದ ಭಾಗಗಳಿಗೂ, ಹೆಚ್ಚು ವಿವರವನ್ನು ಸಂಪಾದಕರು ನೀಡ ಬಯಸುವ ಭಾಗಗಳನ್ನೂ ಅಡಿ ಟಿಪ್ಪಣಿಯಲ್ಲಿ ಗುರುತಿಸಿ ತೋರಿಸಿದ್ದಾರೆ. ಕೆಲವಕ್ಕೆ ಟೀಕೆ ಟಿಪ್ಪಣಿಯೂ ಇದೆ.

ಸಸ್ಸೂರನ ಈ ಕೃತಿಯನ್ನು ಅವನಷ್ಟೇ ಹಿರಿಯನಾದ ಲಿಯೊನಾರ್ಡ್ ಬ್ಲೂಮ್‌ಫೀಲ್ಡ್ ಹೀಗೆ ನುಡಿದಿದ್ದಾನೆ. "......a theoretic foundation to the newer trend of linguistic study". ಇದಲ್ಲದೆ ಭಾಷಾ ವಿಜ್ಞಾನದ ಬೆಳವಣಿಗೆಯಲ್ಲಿ ಸಸ್ಸೂರನ ಮಹತ್ತರ ಪಾತ್ರವನ್ನು ಕುರಿತು ರುಲಾನ್ ಎಸ್ ವೆಲ್ಸ್ ಎಂಬುವರು (Rulan S. Wells) 'De Saussure's System of Linguistics' ಎಂಬ ಲೇಖನದಲ್ಲಿ ಉದಾಹರಣೆಗಳೊಡನೆ ವಿವರಿಸಿದ್ದಾರೆ. ಈ ಲೇಖನ ಮಾರ್ಟಿನ್ ಜೂಸ್ ಎಂಬ ವಿದ್ವಾಂಸ ಸಂಪಾದಕನಾಗಿ ಸಂಗ್ರಹಿಸಿದ ಲೇಖನಗಳ ಸಂಕಲನ ಗ್ರಂಥವಾದ Readings in Linguistics (1957) ಎಂಬ ಕೃತಿಯಲ್ಲಿದೆ.

ಫರ್ಡಿನೆಂಡ್ ಡಿ ಸಸ್ಸೂರ್ ಧ್ವನಿಯನ್ನು ದೈಹಿಕ ಹಾಗೂ ಮಾನಸಿಕ ದೃಷ್ಟಿಯಿಂದಲೂ ಮತ್ತು ಧ್ವನಿಗಳು ಪಡೆಯುವ ವ್ಯತ್ಯಾಸದ ದೃಷ್ಟಿಯಿಂದಲೂ— ಮೂರು ಬಗೆಯಲ್ಲಿ ಅಭ್ಯಾಸ ಮಾಡಬಹುದೆಂದು ಐವತ್ತು ವರುಷಗಳ ಹಿಂದೆಯೇ ಹೇಳಿದ್ದನು. ಇದನ್ನೇ ಮುಂದೆ ಧ್ವನಿ ವಿಜ್ಞಾನ, ಧ್ವನಿಮಾ ವಿಜ್ಞಾನ ಮತ್ತು ಐತಿಹಾಸಿಕ ಧ್ವನಿ ವಿಜ್ಞಾನ ಎಂಬ ತ್ರಿವಿಧ ಶಾಸ್ತ್ರಗಳಾಗಿ ಅಭ್ಯಾಸಮಾಡತೊಡಗಿರುವುದು ಸ್ಪಷ್ಟವಾಗಿ ಕಾಣುತ್ತದೆ.

ಫ್ರೆಂಚ್ ಭಾಷಾ ವಿಜ್ಞಾನಿಗಳಲ್ಲಿ ಮಾತ್ರವಲ್ಲದೆ ಜಗತ್ತಿನ ಎಲ್ಲ ಹಿರಿಯ ಭಾಷಾ ವಿಜ್ಞಾನಿಗಳ ಅಗ್ರಪಂಕ್ತಿಯಲ್ಲಿ ನಿಲ್ಲುವ ಫರ್ಡಿನೆಂಡ್ ಸಸ್ಸೂರ್ ಆಧುನಿಕ ಬರೆಹಗಾರರ ಮೇಲೆ ವಿಶೇಷ ಪ್ರಭಾವ ಬೀರಿದ್ದಾನೆ.

# ಸಾಹಿತ್ಯ ಸಮೀಕ್ಷೆ

## 1. ಶಿವಯೋಗಿ ಸಿದ್ಧರಾಮ

ಲೇಖಕರು : ವಿದ್ಯಾವಿಭೂಷಣ, ಸಾಹಿತ್ಯರತ್ನ ಓ. ಎನ್. ಲಿಂಗಣ್ಣಯ್ಯ, ಬಿ.ಎ., (ಆನರ್ಸ್)

ಪ್ರಕಾಶನ : ಶ್ರೀ ಶೈಲಕುಮಾರೀ ಗ್ರಂಥಮಾಲೆ-14ನೆಯ ಕುಸುಮ "ನಾಗಾನಂದ" ಪ್ರಕಾಶಕರು, ಕೃಷ್ಣರಾಜಪುರಂ-ಬೆಂಗಳೂರು.

ಬೆಲೆ : ಎರಡು ರೂಪಾಯಿ; ಪ್ರಥಮ ಮುದ್ರಣ 1965. ಪುಟಗಳು : 143.

ವೀರಶೈವ ಗುರುಸ್ಥಲ ಕುಟುಂಬವೊಂದರ ಜನಿಸಿ, ಮೈಸೂರು ವಿಶ್ವವಿದ್ಯಾನಿಲಯದ ಪದವೀಧರರೂ ಸರ್ಕಾರದ ರೆವಿನ್ಯೂ ಇಲಾಖೆಯಲ್ಲಿ ಜವಾಬ್ದಾರಿಯುತವಾದ ಅಧಿಕಾರಿಗಳಾಗಿ ದುಡಿದು ಇದೀಗ ನಿವೃತ್ತರಾಗಿರುವರೂ ಆದ ಶ್ರೀಮಾನ್ ಓ. ಯನ್. ಲಿಂಗಣ್ಣಯ್ಯನವರು ಸಿದ್ಧರಾಮನೆಂಬ ಐತಿಹಾಸಿಕ ವ್ಯಕ್ತಿಯ ಮೇಲೆ ಈ ಗ್ರಂಥವನ್ನು ಬರೆದಿರುತ್ತಾರೆ. ಸಾಹಿತ್ಯ ಕ್ಷೇತ್ರದಲ್ಲಿ ದುಡಿಯುವ ಹವ್ಯಾಸ ಇವರಿಗೆ ವಂಶಪಾರಂಪರ್ಯವಾಗಿ ಬಂದಿದೆ. ಸಿದ್ಧರಾಮನ ಜೀವನ ಪರಿಚಯದ ಜತೆಗೆ, ಅವರೇ ತಮ್ಮ ಮನೋರಥದಲ್ಲಿ ಹೇಳಿರುವಂತೆ, ಅನಾದಿ ವೀರಶೈವವನ್ನು ಬಳಸಿಕೊಂಡು ಭಂಡಾರಿ ಬಸವಣ್ಣ ಸಂಸ್ಥಾಪಿಸಿದ ಶರಣಧರ್ಮದ ಬಗೆಗೂ ಬೆಳಕು ಚೆಲ್ಲಿದ್ದಾರೆ. ಜಂಗಮ, ಆರಾಧ್ಯ ಇತ್ಯಾದಿ ವೀರಶೈವ ಪರಿಭಾಷೆಗಳ ಅರ್ಥವಿವರಿಸಲು ಪ್ರಯತ್ನಿಸಿದ್ದಾರೆ

ಅನಾದಿ ವೀರಶೈವ ಶೈವಧರ್ಮದ ಒಂದು ಪ್ರಭೇದ. ಶಿವನೇ ಅದರ ಪ್ರಮಥಾ (ಪ್ರಥಮಾ?) ಚಾರ್ಯ. ಪರಶಿವನ ಅಂಶಸಂಭೂತರಾದ ಪಂಚಾಚಾರ್ಯರುಗಳು ರೇಣುಕ, ದಾರುಕ, ಗಜಕರ್ಣ, ಘಂಟಾಕರ್ಣ, ವಿಶ್ವಕರ್ಣ ಎಂಬುವರು. ಯುಗಯುಗಗಳಲ್ಲಿ ಇವರು ಅವತರಿಸಿ ವೀರಶೈವ ಧರ್ಮ ಪ್ರಚಾರ ಮಾಡುತ್ತಾರೆ.

ಸಿದ್ಧರಾಮನೂ ಅಂತಹ ಅಂಶಪುರುಷರಲ್ಲೊಬ್ಬ. ಆತ ಶಿವಕುಮಾರನೇ ಆಗಿದ್ದನು. ಜಗನ್ಮಾತೆ ಆತನಿಗೆ ಹೆಸರಿಟ್ಟವಳು. ಶಿವಯೋಗಿ ರೇವಣಸಿದ್ಧ ಈತನ ಬರವನ್ನು ಮೊದಲೇ ಸಾರಿ ಹೇಳಿ ಭವಿಯಾದ ಸುಗ್ಗಲೆಯ ಉದರವನ್ನು ಸವರಿ, ವಿಭೂತಿಯಿಟ್ಟು ಶಿವತೇಜಸ್ಸು ನೆಲಸಲು ಸ್ಥಲಶುದ್ಧಿ ಮಾಡಿ ಹರಸಿದವನು. ಮುಂದೆ ಶ್ರೀಶೈಲದ ಮಲ್ಲಿನಾಥಸ್ವಾಮಿ ಭಾವದೀಕ್ಷೆ ಕೊಟ್ಟು, ತನ್ನ ದರ್ಶನವಿತ್ತು, ತಾನೇ ಸ್ಥಾವರಲಿಂಗವಾಗಿ ಸಿದ್ಧರಾಮನಿಂದ ಪೂಜೆ ಕೈಗೊಳ್ಳುತ್ತಾನೆ. ವಿರಕ್ತಯೋಗಿ ಅಲ್ಲಮ ಪ್ರಭು ಕರ್ಮಯೋಗಿಯಾಗಿದ್ದ ಸಿದ್ಧರಾಮನ ಅಹಂಕಾರವನ್ನು ಮುರಿದು ಜ್ಞಾನದೀಕ್ಷೆ ಕೊಡುತ್ತಾನೆ. ಅದೂ ಸಾಲದೆಂಬಂತೆ ಬಸವಣ್ಣನ ಮನೆಯಲ್ಲಿ ಸಿದ್ಧರಾಮನಿಗೆ ಚೆನ್ನಬಸವಣ್ಣ ಆಚಾರ್ಯನಾಗಿ ವೇಧಾದೀಕ್ಷೆ, ಮಂತ್ರದೀಕ್ಷೆ, ಕ್ರಿಯಾದೀಕ್ಷೆಗಳಿಂದ ಕೂಡಿದ ಶಿವದೀಕ್ಷೆ ಕೊಡಲ್ಪಟ್ಟು ಇಷ್ಟಲಿಂಗಧಾರಣ ಮತ್ತು ಪೂಜಾವಿಧಾನಗಳು ಬೋಧಿಸಲ್ಪಟ್ಟವು. ಅಲ್ಲಿಗೆ ಆತನ ಭವಿಸ್ಥಿತಿ ನಿರ್ಮೂಲವಾಯಿತು.

ಶಿವಯೋಗಿಯಾಗಿ ಕೈಲಾಸವನ್ನಡರಿದ ಸಿದ್ಧರಾಮನ ಜೀವನವನ್ನು ಚಿತ್ರಿಸ ಹೊರಟು ಲಿಂಗಣ್ಣಯ್ಯನವರು ವೀರಶೈವಧರ್ಮದ ಅಂದು, ಹಿಂದು, ಇಂದುಗಳ ಮಾರ್ಮಿಕ ದರ್ಶನವನ್ನೂ ಕೊಟ್ಟಿದ್ದಾರೆ. ಅವರ ವಿವರಣೆಯಂತೆ ವೀರಶೈವರಿಗೆ ಇಷ್ಟಲಿಂಗಧಾರಣ, ಅರ್ಚನೆಯೇ ಜೀವನ್ಮುಕ್ತಿಗೆ ಹೇಳಿರುವ ಮಾರ್ಗ. ಸ್ಥಾವರಲಿಂಗ, ವಿಗ್ರಹ, ಗುಡಿ ಗೋಪುರ, ಕೆರೆ, ತೋಟ ಇವುಗಳ ನಿರ್ಮಾಣ, ಸ್ಥಾಪನೆಗಳು ಅನಾವಶ್ಯಕ. ಆದರೆ ಮಹಾತ್ಮರೊಂದು ಬೋಧಿಸಿದರೆ ಸಮಾಜವೊಂದನ್ನು ನಡೆಸುತ್ತದೆ. ಹೀಗಾಗಿ ವೀರಶೈವ ಇಂದು ಆಚಾರ್ಯರ ಮಾರ್ಗದಲ್ಲಿಯೂ ಇಲ್ಲ. ಶರಣ ಪದ್ಧತಿಯಲ್ಲಿಯೂ ಇಲ್ಲ. ಎಲ್ಲ ಕಲಸು ಮೇಲೋಗರವಾಗಿದೆ. "ಎರಡೆತ್ತಿದ್ದರೆ ಮಲ್ಲೇಗೌಡ. ಒಂದು ಸತ್ತರೆ ಮಲ್ಲಸೆಟ್ಟಿ ಅದೂ ಸತ್ತರೆ ಮಲ್ಲೀದೇವರು" ಎಂಬಷ್ಟು ಸುಲಭವಾಗಿ ಈ ಧರ್ಮದ ಪರಿಸ್ಥಿತಿಯಾಗಿದೆ ನ್ಯಾಯವಾಗಿ ಹಿಂದೆ

ವೀರಶೈವರಾದವರಲ್ಲಿ ಯಾವ ಜಾತಿಗೆ ಸೇರಿದವನಿದ್ದರೂ ಗುರುಪೀಠಕ್ಕೆ ಬರಲು ಅರ್ಹನಾಗಿದ್ದನು. ಎಂಬುದು ಸಿದ್ಧರಾಮನೆಂಬ ಕುಡು ಒಕ್ಕಲಿಗನು ವಿರಕ್ತ ಪೀಠದಲ್ಲಿ ಗುರುವಾಗಿ ಮುಂಡಿಸಿದ ಉದಾಹರಣೆಯಿಂದ ತಿಳಿಯ ಬರುತ್ತದೆ. ಇಂದೂ ಮಠಾಧಿಪತಿಗಳು ಸಿಕ್ಕಿದ ಹೀನ ಜಾತಿಯವರಿಗೆಲ್ಲಾ, ಅವರಿಂದ ಸಾಧನೆಯಿಲ್ಲದೆ, ಶಿವದೀಕ್ಷೆ ಕೊಡುವುದು ತಪ್ಪೆಂಬ ಅಭಿಪ್ರಾಯ ಲೇಖಕರಿಗಿದೆ.

ಗ್ರಂಥದಲ್ಲಿ ಅಚ್ಚಿನ ದೋಷಗಳು ಅಲ್ಲಲ್ಲಿ ಉಳಿದು ಬಿಟ್ಟಿವೆ. ಮುಂದಿನ ಮುದ್ರಣದಲ್ಲಿ ಸರಿಪಡಿಸಿಕೊಳ್ಳ ಬಹುದು. ವೀರಶೈವರಿಗೆ ತಮ್ಮ ಧರ್ಮದಲ್ಲಿ ಉತ್ತಮ ತಿಳಿವಳಿಕೆ ಉಂಟಾಗಲು ''ಶಿವಯೋಗಿ ಸಿದ್ಧರಾಮ" ತುಂಬಾ ಉಪಯುಕ್ತವಾಗುವುದರಲ್ಲಿ ಸಂಶಯವಿಲ್ಲ.

## 2. ಕವನ ಮಂಜರಿ (ಕವನ ಸಂಕಲನ)

ಲೇಖಕರು : ''ಕವಿತಾ ಕೃಷ್ಣ" ಕ್ಯಾತ್ಸಂದ್ರ. ತುಮಕೂರು ಜಿಲ್ಲಾ.

ಬೆಲೆ : 20 ಪೈಸೆ ಪುಟಗಳು : 16

ತರುಣ ಲೇಖಕರಾದ ಕವಿತಾಕೃಷ್ಣರು ತಮ್ಮ ಕೆಲವು ಕವನ ಸಂಕಲನಗಳನ್ನು ಈಗಾಗಲೇ ಹೊರತಂದಿದ್ದಾರೆ. ಉತ್ಸಾಹಿಗಳೂ ಶ್ರದ್ಧಾಳುಗಳೂ ಆಗಿರುತ್ತಾರೆ. ಪ್ರಕೃತ ಕಿರುಹೊತ್ತಿಗೆಯಲ್ಲಿ ಪುಟಕ್ಕೊಂದರಂತೆ ಹದಿನಾರು ಕಿರುಕವಿತೆಗಳಿವೆ. ನಾನಾ ವಿಷಯಗಳಿಗೆ ವಿಾಸಲಾದ ಕವನಗಳಿವೆ. "ಸಮರದ ಕರೆ" ''ಗಾಂಧಿ ಗೀತಾ" ''ಜನ್ಮದಾತೆಗೆ" ಕವನಗಳು ಸುಂದರವಾಗಿದೆ.

ಪದಗಳ ಪ್ರಯೋಗದಲ್ಲಿ ಕೆಲವು ದೋಷಗಳು ಕಂಡುಬರುತ್ತವೆ. ಭರತಮಾತಾ ಎಂಬುದು ಭಾರತ ಮಾತಾ ಎಂದಿರಬೇಕು. ಹಾಗೆಯೇ ಹಿರಿ ಸಮಾನಳು, ಸೌಹಾರ್ದ, ಸುಂದಾರ, ಕಾಪೀನ, ಮಮ್ಮ, ಸಮೂಹ, ಬೇಡ್ವೆ. ನರಕದಹಾರ, ಅಂದಾಗ್ವಮ ಇತ್ಯಾದಿ ಶಬ್ದಗಳು ತಪ್ಪು ಪ್ರಯೋಗಗಳಾಗುತ್ತವೆ.

''ಅಡಿ ಮುಂದಿಡೆ ನಾಕ ಅಡಿ ಹಿಂದಿಡೆ ನರಕ" ಎಂದಿರಬೇಕು. (ಸಮರದ ಕರೆ). ಹೆಚ್ಚು ಅಧ್ಯಯನ ಮಾಡಿ ಕೃತಿರಚನೆಗೆ ತೊಡಗುವುದು ಉಚಿತ.

''ರಾಜೀವಾ"

## 3. ಕನ್ನಡ ಕವಿ-ಕಾವ್ಯ ದರ್ಶನ

(100 ಮಂದಿ ಕವಿಗಳ ಹಾಗು ಅವರ ಕವಿತೆಗಳ ಪರಿಚಯ ಗ್ರಂಥ)

ಸಂಪಾದಕರು : ''ಇಂದಿರೇಶ", ''ಪುಲಿಕೇಶಿ" ಮತ್ತು ''ನಾ. ಮ. ಗಂ.

ಪ್ರಕಾಶಕರು : ವಾಗ್ವಿಲಾಸ ಪ್ರಕಾಶನ, 2317ಎ ರಾಜಾಜಿ ನಗರ II ಸ್ಟೇಜ್, ಬೆಂಗಳೂರು-10.

ಬೆಲೆ : ಉತ್ತಮ ಪ್ರತಿ ಐದು ರೂಪಾಯಿ
ಸಾದಾ ಪ್ರತಿ....ಮೂರು ರೂಪಾಯಿ

ಪುಟಗಳು : 74+57+xvi

ಕನ್ನಡ ಕವಿ-ಕಾವ್ಯ ದರ್ಶನ ಒಂದು ಹೊಸ ಕೃತಿ. ಇದರ ಸಂಪಾದಕರಾದ ಸರ್ವಶ್ರೀ ಸಗರ ಕೃಷ್ಣಾಚಾರ್ಯ, ಪಂll ಕೆ. ಪಿ. ಶಿವಲಿಂಗಯ್ಯ, ಎಂ. ಜಿ. ನಾಗರಾಜ ರಾವ್ ಇವರು ದಿಟ್ಟ ಹೆಜ್ಜೆಯನ್ನು ಇಟ್ಟಿದ್ದಾರೆ. ಹಿಂದೆಂದೂ ನಾವು ಕಾಣದಂತಹ ಕೃತಿಯೊಂದನ್ನು ಬೆಳಕಿಗೆ ತಂದಿದ್ದಾರೆ. ಕನ್ನಡ ಸಾರಸ್ವತ ಪ್ರಪಂಚದಲ್ಲಿ ಇಂತಹ ಕೃತಿಯೊಂದರ ಅವಶ್ಯಕತೆ ಜನತೆಗಿತ್ತು.

ಈ ಉತ್ತಮ ಕೃತಿ, ಜನತೆಗೆ ಹಿರಿಯ ಕಿರಿಯ ಕವಿಗಳ ಹಾಗೂ ಕವಿತೆಗಳ ಪರಿಚಯವನ್ನು ಮಾಡಿಕೊಟ್ಟಿದೆ ಕವಿಗಳ ಜೀವನದ ಪರಿಚಯವನ್ನು ಕೆಲವು ಮಾತುಗಳಲ್ಲೇ ಮಾಡಿ ಕೊಡಲಾಗಿದೆ. ಅವರ ಅರ್ಹತೆಯು ಸಾಕಷ್ಟು ಪರಿಚಯ ಓದುಗರಿಗುಂಟಾಗುವಂತೆ ಅಭಿವ್ಯಕ್ತವಾಗಿದೆ.

ಕವಿಗಳ ಪರಿಚಯವನ್ನು ಮೊದಲು ಮಾಡಿಕೊಂಡು ಅನಂತರ ಕಾವ್ಯಗಳ ಪರಿಚಯವನ್ನು ಸುಲಭವಾಗಿ ಮಾಡಿಕೊಳ್ಳುವಂತಹ ಒಂದು ಸದವಕಾಶವನ್ನು ಈ ಕೃತಿ ಜನತೆಗೆ ಕಲ್ಪಿಸಿಕೊಟ್ಟಿದೆ.

ಇಂದು ಜನತೆ ಸಾಹಿತ್ಯದ ಬಗ್ಗೆ ಸಾಹಿತಿಯ ಬಗ್ಗೆ ಹೆಚ್ಚು ಹೆಚ್ಚು ವಿಚಾರಗಳನ್ನು ಅರಿತುಕೊಳ್ಳ ಬೇಕಾಗಿದೆ. ಹಾಗೆ ಅರಿತುಕೊಳ್ಳಬೇಕಾದರೆ ಪ್ರತಿಯೊಬ್ಬ ಕವಿಯ ಪ್ರತಿಯೊಂದು ಕಾವ್ಯವನ್ನೂ ಓದಲೇ ಬೇಕಾಗುತ್ತದೆ ಆದರೆ ಅಷ್ಟೊಂದು ಸಾಹಿತ್ಯದ ಅಭ್ಯಾಸ ಮಾಡಲು ಸಮಯಾನುಕೂಲವೂ ಬೇಕು. ಆದರೆ ಅದರ ಅಭಾವವುಂಟಾಗಿರುವಾಗ ಕಡೆಗೆ ಕೆಲವು ಕವಿಗಳ ಬಗ್ಗೆ ಕೆಲವು ಕವಿತೆಗಳನ್ನಾದರೂ ಅಭ್ಯಾಸ ಮಾಡಬೇಕು. ಇದು ಸಾಧ್ಯವಾಗುವಂತೆ ಮಾಡಿರುವ ನೂತನ ಕೃತಿ ಕನ್ನಡ ಕವಿ-ಕಾವ್ಯ ದರ್ಶನ. ಒಂದು ಪುಸ್ತಕವನ್ನು ಓದುವುದರಿಂದಲೇ ಅನೇಕ ಕವಿಗಳ ಹಾಗೂ ಅವರ ಕವನಗಳ ಪರಿಚಯ ಉಂಟಾಗುವಂತೆ ಮಾಡಿದೆ ಈ ಕೃತಿ.

ಹೆಸರಾಂತ ಕವಿಗಳಾದ ಮುದ್ದಣ, ಗೋವಿಂದಪೈ, ಡಿ. ವಿ. ಜಿ., ಕುವೆಂಪು, ದ. ರಾ. ಬೇಂದ್ರೆ ಮುಂತಾದವರ ವ್ಯಕ್ತಿತ್ವ ಹಾಗೂ ಅವರ ಕವಿತೆಗಳ ಪರಿಚಯ ಪ್ರತಿಯೊಬ್ಬ ಕನ್ನಡಿಗನಿಗೂ ಇರಲೇ ಬೇಕು.

ಈ ಕೃತಿಯು ಅಂತಹ ಕಾವ್ಯಗಳ ಪರಿಚಯವನ್ನೇ ಅಲ್ಲದೆ ಕವಿಗಳ ಪರಿಚಯವನ್ನೂ ಉಂಟುಮಾಡಿ ಕೊಟ್ಟಿದೆ. ಜೊತೆಯಲ್ಲೇ ಅವರ ಮುಖ ಪರಿಚಯವೂ ಆಗುವಂತೆ ಪ್ರತಿಯೊಬ್ಬರ ಭಾವ ಚಿತ್ರವನ್ನೂ ಕೊಡಲಾಗಿದೆ.

ಇನ್ನೂ ಕೆಲವು ಹೆಸರಾಂತ ಕವಿಗಳ ಬಗ್ಗೆ ಜನತೆಗೆ ಪರಿಚಯ ಉಂಟಾಗಬೇಕಾಗಿದೆ. ಬಹುಶಃ ಸ್ಥಳಾಭಾವ, ಕಾಲಾಭಾವದಿಂದ ಈ ಕೃತಿಯಲ್ಲಿ ಅದರ ಅನುಕೂಲ ಉಂಟಾಗಿಲ್ಲದಿರಬಹುದು. ಮುಂದಿನ ಕೃತಿಯಲ್ಲಿ ಅವರ ಬಗ್ಗೆ ಪರಿಚಯವನ್ನು ನಿರೀಕ್ಷಿಸುತ್ತೇವೆ.

ಒಟ್ಟಿನಲ್ಲಿ ಉತ್ತಮವಾಗಿ ಈ ಕೃತಿ ಹೊರ ಬಂದಿದೆ. ಇದರ ಸಂಪಾದಕ ಮಂಡಲಿಯವರಿಗೆ ಜನತೆ ಕೃತಜ್ಞತೆಯನ್ನು ಅರ್ಪಿಸಬೇಕಾದದ್ದು ಆದ್ಯಕರ್ತವ್ಯವಾಗಿದೆ.

ಎಸ್. ಪ್ರಮಿಳಾ
(ಅಡ್ವೊಕೇಟ್)



# ನಿಮ್ಮ ತಾರುಣ್ಯದ ಬಣ್ಣವನ್ನು ಕಾಯ್ದುಕೊಳ್ಳಿರಿ...

ನಿಮ್ಮ ತಾರುಣ್ಯದ ಬಣ್ಣಕ್ಕೆ

ಪ್ರತಿದಿನ ಮೈಸೂರು ಶ್ರೀಗಂಧದ
ಸಾಬೂನಿನ ಕವಚ ತೊಡಿಸಿರಿ

ಈ ಸುವಾಸಿತ ಸಾಬೂನಿನಲ್ಲಿರುವ ಗಂಧದ ಎಣ್ಣೆಯಿಂದ ನಿಮ್ಮ ಚರ್ಮದ ಆರೋಗ್ಯವನ್ನು ಕಾಪಾಡುವುದು ಮತ್ತು ಅದಕ್ಕೆ ಯೌವ್ವನದ ಕಳೆಯುನ್ನು ಕೊಡುವುದು.



ಬೇರೆ ಸಾಬೂನಿನೊಡನೆ ವ್ಯತ್ಯಾಸಮಾಡಲು
ಇದು ವಿಶೇಷ ಗುಣವುಳ್ಳ ಸುವಾಸಿತ ಸಾಬೂನು.

## ಮೈಸೂರು ಗಂಧದ ಸಾಬೂನು

ಸರಕಾರಿ ಸಾಬೂನು ಕಾರಖಾನೆ, ಬೆಂಗಳೂರು.

# ತುಮಕೂರು ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ಲಿಮಿಟೆಡ್

ತು ಮ ಕೂ ರು

ಫೋನ್ : 418

ಸ್ಥಾಪನೆ : 10-2-55

ಶಾಖೆಗಳು :

**ಮಧುಗಿರಿ, ಚಿಕ್ಕನಾಯ್ಕನಹಳ್ಳಿ, ತುರುವೆಕೆರೆ, ಕುಣಿಗಲ್, ಪಾವಗಡ, ಕೊರಟಗೆರೆ, ಗುಬ್ಬಿ, ತಿಪಟೂರು.**

ಜಿಲ್ಲೆಯ ಎಲ್ಲಾ ಸಹಕಾರ ಸಂಸ್ಥೆಗಳಿಗೆ ಹಣ ಪೂರೈಸಲು ಹೊತ್ತಿರುವ ಏಕೈಕ ಸಂಸ್ಥೆ.

ನಮ್ಮಲ್ಲಿ "ಲಕ್ಷ್ಮಿ ಚಿಕ್ಕ ನಿಧಿ" ಲೆಖ್ಖ ಆರಂಭಿಸಿ ಹಣ ಉಳಿತಾಯಮಾಡಿ.

| | | | |
|---|---|---|---|
| ಷೇರು ಬಂಡವಾಳ | .... | .... | 31 62 |
| ರಿಜರ್ವ್ ಫಂಡ್ | .... | .... | 1·90 |
| ಡಿಪಾಜಿಟ್ | .... | .... | 31·03 |
| ಪಡೆದಿರುವ ಸಾಲಗಳು | .... | .... | 49·49 |
| ಕೊಟ್ಟಿರುವ ಸಾಲಗಳು | .... | .... | 106·70 |

**ಬಡ್ಡಿ ದರ**

| | | | |
|---|---|---|---|
| ಕರಂಟ್ ಡಿಪಾಜಿಟ್ | .... | .... | ಶೇಕಡ 1 |
| ಸೆವಿಂಗ್ಸ್ ಬ್ಯಾಂಕ್ | .... | .... | ಶೇಕಡ 4 |
| ಕಾಲ್ ಡಿಪಾಜಿಟ್ | .... | .... | ಶೇಕಡ 5 |
| ಲಕ್ಷ್ಮಿ ಚಿಕ್ಕ ನಿಧಿ ಡಿಪಾಜಿಟ್ | .... | .... | ಶೇಕಡ 3 |

**ಫಿಕ್ಸೆಡ್ ಡಿಪಾಜಿಟ್**

| | | | |
|---|---|---|---|
| 3 ತಿಂಗಳಿನಿಂದ | 6 ತಿಂಗಳವರೆಗೆ | .... | ಶೇಕಡ 5 |
| 6 ,, | 1 ವರ್ಷದವರೆಗೆ | .... | ಶೇಕಡ 5·50 |
| 1 ವರ್ಷದಿಂದ | 2 ,, | .... | ಶೇಕಡ 6 |
| 2 ,, | 3 ,, | .... | ಶೇಕಡ 6·25 |
| 3 ,, | 5 ,, | .... | ಶೇಕಡ 6·50 |
| 5 ,, | 7 ,, | .... | ಶೇಕಡ 7 |
| 7 ,, | 9 ,, | .... | ಶೇಕಡ 7·25 |
| 9 ವರ್ಷದ ಮೇಲ್ಪಟ್ಟು | | .... | ಶೇಕಡ 7·50 |

ಎಲ್ಲಾ ವಿಧವಾದ ಬ್ಯಾಂಕಿಂಗ್ ವ್ಯವಹಾರವನ್ನು ಕೈಗೊಳ್ಳಲಾಗುವುದು.

**ಹೆಚ್. ಎಂ. ನಾಗರಾಜ್,**
ಬಿ.ಎಸ್‌ಸಿ., (ಆನರ್ಸ್), ಹೆಚ್.ಡಿ.ಸಿ.,
(ಸಹಕಾರ ಸಂಘಗಳ ಅಸಿಸ್ಟೆಂಟ್ ರಿಜಿಸ್ಟ್ರಾರ್)
ಕಾರ್ಯದರ್ಶಿ.

**ಎಂ. ಎನ್. ರಾಮಣ್ಣ**
ಅಧ್ಯಕ್ಷರು.

# “ನನಗೂ ಒಪ್ಪಿಗೆಯಾಗಲಿಲ್ಲ”

ಕತೆಗಾರ : **“ ನಾ.ಮ.ಗಂ ”**

ರಾಜಣ್ಣ ಮನೆಯ ಬಾಗಿಲನ್ನು ತಟ್ಟಿದ. ಎಂದಿನಂತೆ ರಾಣಿ ಬಾಗಿಲನ್ನು ತೆರೆಯಲಿಲ್ಲ. ಬಾಗಿಲನ್ನು ತೆಗೆಯಲು ನಾನು ಮುಂದು ತಾನು ಮುಂದು ಎಂದು ಓಡಿಬಂದವರು ಮೊದಲನೆಯ ಮಗ ಹನುಮ, ಮೂರನೆಯ ಮಗ ಭೀಮ, ಆದರೂ ಬಾಗಿಲನ್ನು ತೆಗೆದವಳು ಎರಡನೆಯವಳು, ಆರುವರ್ಷದ ಶಶಿ. ನಾನೇ ಗೆದ್ದೆನೆಂದು ಅವಳು ಚಪ್ಪಾಳೆ ತಟ್ಟುತ್ತಾ ನಿಂತಳು. ಒಳಗೆಲ್ಲೋ ಇದ್ದ ಗೀತಾ, ಎರಡು ವರ್ಷದ ಕೂಸು, “ಪೊಪ್ಪೆಂಟು” ಎಂದು ತೊದಲುತ್ತಾ ಮುಂದೆ ಬಂತು, ತಪ್ಪು ಹೆಜ್ಜೆಗಳನ್ನು ಹಾಕುತ್ತಾ. ರಾಜನ ಆನಂದದಿಂದ ಅರಳಿದ ಕಣ್ಣುಗಳು ಸುತ್ತ ಹುಡುಕಾಡಿದುವು. ರಾಣಿ ‘ರಜಾ’ ತೆಗೆದುಕೊಂಡಿರಬೇಕು! ಕೇಳಿದ– “ಅಮ್ಮ ಎಲ್ಲಿ”

ಎಲ್ಲ ಒಟ್ಟಾಗಿ ಹೇಳಿದರು – ‘ ಅಡಿಗೆ ಮನೆಯಲ್ಲಿ ’

ರಾಜಣ್ಣನ ಉತ್ಸಾಹ ಕುಸಿದು ಬಿತ್ತು. ಸಪ್ಪೆ ಮುಖ ಹಾಕಿಕೊಂಡು ಕೋಣೆಗೆ ನಡೆದ ಸ್ವಲ್ಪ ಹೊತ್ತಿನಲ್ಲಿ ತುಂಟು ನಗೆಯ ರಾಣಿ ಬಂದಳು, ಗಂಡನನ್ನು ಸಂತೈಸುತ್ತಾ ಕಾಫಿ ನೀಡಿದಳು.

“ನಾನೇ ಬರಲಿಲ್ಲ, ನಿಮ್ಮನ್ನು ಸ್ವಾಗತಿಸುವುದಕ್ಕೆ ಅಂತ, ಸಿಟ್ಟೇನು?”“ಇಲ್ಲ.”

ಮತ್ತೇಕೆ? ಈಗ ನಾನೇ ಬಂದಿದ್ದೇನಲ್ಲ ತಪ್ಪೊಪ್ಪಿಕೊಳ್ಳುವುದಕ್ಕೆ”

“ನೀನು ಈಗ ಬಂದೆಯೆಂದೇ ನನಗೆ ಸಿಟ್ಟು”

“ಅದೇನು ನಾನು ಮಾಡಿದ ಅಂಥಾ ಅಪರಾಧ? ನಾನೇ ಕಾಫಿ ಮಾಡಿಕೊಟ್ಟೆನಲ್ಲ.’

“ಹ್ರಾದು ಸಮಯ ಬಂದಾಗ ನಾನೂ, ಅಡಿಗೆ ಸಹ ಮಾಡಿ ಹಾಕಿಸ್ತೇನಲ್ಲ! ಒಂದೆರಡು ಮೂರು ದಿವಸ.”

‘ಏನು ಮಾಡುವುದು? ಹೆಣ್ಣಿನ ಬಾಳೇ ಅಷ್ಟು. ನಿಮಗೆ ತೊಂದರೆಯನ್ನು ಕೊಡಬಾರದು ಎಂದರೂ ವಿಧಿಯಿಲ್ಲ.”

“ಕಣ್ಣಿನಲ್ಲಿ ಪ್ರಶ್ನಾರ್ಥಕ ಚಿಹ್ನೆಯನ್ನು ಸೂಚಿಸುತ್ತಾ ಕೇಳಿದ. ರಾಜ – “ಗೊತ್ತಾಗಲಿಲ್ಲವೆ? ನೀನು ಆ ತೊಂದರೆ ಕೊಟ್ಟರೆ ಎಷ್ಟು ಚೆನ್ನ ಅಂತೀನಿ! ಅಲ್ಲ ರಾಣಿ ನೀನು ಆ ಶಿಕ್ಷೆಕೊಟ್ಟು ಎಷ್ಟು ದಿನ ಆಯಿತು, ನೆನಪಿದೆಯಾ”?

“ತಿಂಗಳ ಮೇಲೆ ಹತ್ತು ದಿವಸವಾಯಿತು.”

“ಅದಕ್ಕಾಗಿಯೇ ನನ್ನ ಚಿಂತೆ.”

ರಾಣಿ ನಗುತ್ತಾ ಕೇಳಿದಳು– “ನನಗಿಲ್ಲದ ಚಿಂತೆ ನಿಮಗೇನು?” ಅಡ್ಡಿ ಇಲ್ಲವೆ ಇನ್ನೂ ಆರು ತಿಂಗಳು ಅಡಿಗೆ ಮಾಡಿ ಹಾಕುತ್ತೇನೆ”

“ಮುಂದೆ ಬಡ್ಡಿ ಸಮೇತ ಈ ಸಾಲ ತೀರಿಸಬೇಕಲ್ಲ.”

ಅದನ್ನೆ ಮತ್ತೆ, ‘ ಹೆಂಡತಿಗೆ ಮೂರು ತಿಂಗಳ ಶಿಕ್ಷೆ, ಗಂಡನಿಗೆ ಮುನ್ನೂರು ರೂಪಾಯಿ ಜುಲ್ಮಾನೆ’ ಅಂತ ಹೇಳುವುದು.’

ಅಷ್ಟೇ ಆದರೆ ಹೇಗಾದರೂ ಹೊಂದಿಸಿಕೊಳ್ಳಬಹುದು. ಆದರೆ ಮುಂದೆ ಹೇಗೆ? ‘ಇನ್ನೂ ಸಮಯ ಇದೆ ಒಮ್ಮೊಮ್ಮೆ ನಿಧಾನವಾಗುತ್ತೆ ಕಾದು ನೋಡೋಣ” ಎಂದಳು, ರಾಣಿ

೨

ಒಂದು ವಾರ ಕಳೆಯಿತು

ರಾಜಣ್ಣ ಯೋಚಿಸುತ್ತಾ ಕುಳಿತಿದ್ದ, ಮುನಿಸಿಪಲ್ ತೋಟದ ಕಲ್ಲು ಬೆಂಚಿನ ಮೇಲೆ ಸ್ನೇಹಿತ ರಾಮು

ಸ್ವಾಮಿ ಜೊತೆಗೆ ಬಂದು ಕುಳಿತ; ಮಾತಿಗೆ ಪ್ರಾರಂಭಿಸಿದ.

''ಏನಪ್ಪಾ ರಾಜಣ್ಣ. ಬಹಳ ಯೋಚನೆ ಮಾಡ್ತಾ ಇರೋ ಹಾಗಿದೆ?"

''ಮನೆ-ಯೋಚನೆ"

''ಯಾರಿಗಾದರೂ ಮೈ ಚೆನ್ನಾಗಿಲ್ಲವೆ ?"

''ಎಲ್ಲಾ ಚೆನ್ನಾಗಿದ್ದಾರೆ"

''ಮತ್ತೆ, ಹಣದ ತಾಪತ್ರಯವೋ"

''ಅದೂ ಇಲ್ಲ ಈಗ ಸಧ್ಯಕ್ಕೆ, ಅವಕ್ಕೆಲ್ಲ ಹೆದರುವವನೂ ಅಲ್ಲ ನಾನು"

''ಶ್ರೀಮತಿಯವರೊಡನೆ ಮನಸ್ತಾಪವಿರಬೇಕು" ಎಂದವನೇ ಉಪದೇಶ ನೀಡಿದ. ''ಬಿಡು ರಾಜಣ್ಣ, ಆ ಕೋಪತಾಪ ಎಷ್ಟು ಹೊತ್ತಿರುತ್ತೆ. ಗಂಡ ಹೆಂಡಿರ ಜಗಳ ಹಾಸಿಗೆ ಹಾಸುವವರೆಗೆ ಅಂತ ಗಾದೆ ಕೇಳಿಲ್ಲವೆ"

ರಾಜಣ್ಣ ''ಅಲ್ಲ-ಅದೂ ಅಲ್ಲ" ಎಂಬಂತೆ ತಲೆ ಆಡಿಸಿ ಮೌನವಾಗಿದ್ದ.

''ಹಾಂ ಈಗ ಅರ್ಥವಾಯಿತು! ನಳ-ಭೀಮರಂತೆ ಪಾಕ-ಶಾಸ್ತ್ರ ಕಾರ್ಯಾಚರಣೆ, ಇರಬೇಕು. ಅದಕ್ಕೆ ಈ ಗೋಳುಮುಖ"

"ಆ ಯೋಗ ಬರಲಿಲ್ಲವೆಂತಲೇ ಈ ಅಳು"

''ಇನ್ನೂ ಒಳ್ಳೆಯದೇ ಆಯಿತು ಬಿಡು. ಒಬ್ಬ ಮಗನೋ ಮಗಳೋ ಹುಟ್ಟುತ್ತಾರೆ"

ವಾಕಿಂಗ್ ಹೋಗುತ್ತಿದ್ದವನ ಕೈಯಲ್ಲಿದ್ದ ಟ್ರಾನ್ಸಿಸ್ಟರ್ ಹಾಡುತ್ತಾ ನಡೆಯಿತು–

''ಬಂದರೆ ತಂಗಿ, ಕೇಳೋ ಕಮಂಗಿ,.. ದಿನ ಬೆಳಗಾದರೆ ಸಾವಿರ ನೋವು..."

"ನೋಡು ರಾಮುಸ್ವಾಮಿ, ನಾನು ಹೇಳಬೇಕಾದ್ದನ್ನು ಅದೇ ಹೇಳಿತು."

"ಮಳೆ ಬಂದರೆ ಕೆಟ್ಟದ್ದಲ್ಲ, ಮಕ್ಕಳಾದರೆ ಕೆಟ್ಟದಲ್ಲ ಅಂತ ಹಿರಿಯರು ಹೇಳಿದಮಾತು ಗಾದೆಯಮಾತು, ವೇದ ಸುಳ್ಳಾದರೂ ಗಾದೆ ಸುಳ್ಳಲ್ಲ.''

ಮಳೆ ಬಂದು, ಪ್ರವಾಹಗಳು ಹೆಚ್ಚಿ, ಬೆಳೆ–ಮನೆ–ಎಲ್ಲ ಕೊಚ್ಚಿಹೋಗುವುದೂ ಒಳ್ಳೆಯದೇನಪ್ಪ? ಮಕ್ಕಳ ಮೇಲೆ ಮಕ್ಕಳಾಗಿ ಸುದಾಮನ ಜೀವನ ನಡೆಸುವುದು ಯಾವ ಪುರುಷಾರ್ಥಕ್ಕಾಗಿ ?–ರಾಜಣ್ಣನ ಪ್ರಶ್ನೆ.

ರಾಮುಸ್ವಾಮಿಯ ಉತ್ತರ–ಪ್ರಕೃತಿಯ ನಿಯಮ ಕಣಪ್ಪ, ರಾಜಣ್ಣ, ಅದು. ಪ್ರವಾಹ ಬರುವುದೂ ಒಳ್ಳೆಯದಕ್ಕೆ! ಆ ಪುಟ್ಟ ಕ್ಷೇತ್ರದಲ್ಲಿ ಅದು ಹಾವಳಿಯನ್ನು ಮಾಡಬಹುದು. ಆದರೆ ವಿಶ್ವದ ವಿಶಾಲ ದೃಷ್ಟಿಯಲ್ಲಿ ಅದು ಆಗಲೇಬೇಕು. ದೇಶದ ಏಳಿಗೆಗಾಗಿ, ಕೇರಿಯನ್ನು ಬಲಿಗೊಡಬೇಕಾದ ಅವಶ್ಯಕತೆ ಕೇಳಿಲ್ಲವೇನೀನು? ಪ್ರಕೃತಿಯ ಪ್ರಕೋಪಗಳ ಉದ್ದೇಶ–ಒಳಮರ್ಮಗಳು ಮಹಾ ಮಹಾ ವಿಜ್ಞಾನಿಗಳಿಗೇ ಮಾಸಲು ಮಾಸಲಾಗಿ ತಿಳಿದಿದೆ ಎಂದಾಗ ನನಗೂ ನಿನಗೂ ಏನು ತಿಳಿದೀತು ?

''ಏನೇ ಆಗಲಿ ಮುಂದೆ ಒದಗಬಹುದಾದ ಅನಾಹುತಗಳ ಬಗ್ಗೆ ಈಗಿನಿಂದಲೇ ಎಚ್ಚರಿಕೆ ವಹಿಸಬೇಕು. ಒಂದು ದಿನ ಪ್ರಜಾ ಸಂಖ್ಯೆಯ ಪೆಡಂಭೂತ ಸಂಖ್ಯಾ ದೂರವಾಗಿ ಸಿಡಿದು ನಿಂತು ಅನ್ನ–ಆಹಾರಗಳಿಗೆ, ಹಾಗಿರಲಿ, ನೀರು–ಗಾಳಿಗೂಕೊರತೆಯುಂಟಾಗಬಹುದು. ಅದಕ್ಕಾಗಿ ಪ್ರಜಾ ಬೆಳವಣಿಗೆಯನ್ನು ಹಿಡಿತದಲ್ಲಿಡಬೇಕು'' –ರಾಜಣ್ಣ ನುಡಿದ.

ರಾಜಣ್ಣ, ಈಗೆಷ್ಟಪ್ಪ ಮಕ್ಕಳು, ನಿನಗೆ ?

ನಾಲ್ಕಾಗಿದೆ, ಎಂಟು ವರ್ಷಕ್ಕೆ; ಐದನೆಯದು ಪ್ರಾರಂಭದೆಶೆಯಲ್ಲಿದೆ.

ಮಿಂಚಿ ಹೋದುದಕ್ಕೆ ಚಿಂತಿಸಿ ಫಲವೇನು ?

ನನ್ನ ಯೋಗ್ಯತೆಗೆ ಮೂರಕ್ಕಿಂತ ಹೆಚ್ಚನ್ನು ಸಮರ್ಪಕವಾಗಿ ಸಾಕಲಾರೆ. ಆದ್ದರಿಂದ ಈಗ ಏನಾದರೂ ಮಾಡಲೇಬೇಕು.

ಮಕ್ಕಳಿಗಾಗಿ ತ್ಯಾಗ ಮಾಡಬೇಕಪ್ಪ, ಸ್ವಂತ ಸುಖ-ಭೋಗಗಳನ್ನು. ಮದುವೆ ತ್ಯಾಗದ ಮೊದಲ ಪಾಠವನ್ನು ಕಲಿಸಿದರೆ, ಮಕ್ಕಳು ಮುಂದಿನ ಪಾಠಗಳನ್ನು ಕಲಿಸುತ್ತವೆ.

ಅದು ತ್ಯಾಗವಲ್ಲ–ಒತ್ತಾಯದಿಂದ ಬಂದಾಗ ಅದೇ ಸುಲಿಗೆ–ಶಾಪ ಆಗುತ್ತೆ.

ಆ ವೇಳೆಗೆ ಅವರ ಇನ್ನೊಬ್ಬ ಸ್ನೇಹಿತ ಕುಮಾರ ಜೊತೆಗೆ ಬಂದು ಸೇರಿಕೊಂಡ, ಗಂಭೀರವಾಗಿ ಮಾತ ನಾಡುತ್ತಿದ್ದ ಅವರ ಮಾತುಗಳನ್ನು ಲಘು ಮಾಡಲು. ಕೈಯಲ್ಲಿ ಇದ್ದ ಕಡಲೆಪುರಿ ಪಟ್ಟಣವನ್ನು ಬಿಚ್ಚುತ್ತಾ- ''ಕಡಲೆಪುರಿ ತಿನ್ನಿರಯ್ಯ-ಚಿಂತೆಗಳ ಮರೆಯಿರಯ್ಯಾ" ಎಂದು ರಾಗತೆಗೆದ. ಸ್ವಲ್ಪಕಾಲ ಮಾತು-ಕತೆ ಇಲ್ಲ. ಪುರಿ ಮುಗಿಯಿತು. ಆ ಕಾಗದದಲ್ಲಿದ್ದ ''ಫ್ಯಾಮಿಲಿ ಪ್ಲಾನಿಂಗ್" ಜಾಹೀರಾತು ತೋರಿಸುತ್ತಾ ರಾಜಣ್ಣ ಪ್ರಾರಂಭಿಸಿದ.

ನೋಡಯ್ಯ, ರಾಮಸ್ವಾಮಿ, ನಾನೊಬ್ಬನೆ ದಡ್ಡನೊ? ದೇಶಕ್ಕೆ ದೇಶವೇ ಬೊಬ್ಬೆ ಇಡುತ್ತಾ ಇದೆ, ಪ್ರಜಾ ಸಂಖ್ಯೆಯನ್ನು ಕಡಮೆ ಮಾಡೆಂದು.

ರಾಮಸ್ವಾಮಿ ದಿಟ್ಟನಾಗಿ ಹೇಳಿದ- "ಪ್ರಪಂಚ ವೆಲ್ಲ ಬೊಬ್ಬೆ ಇಟ್ಟು ಕೂಗಿದ ಮಾತ್ರಕ್ಕೆ ಆ ಮಾತು ಸತ್ಯವೆಂದಾಗುವುದಿಲ್ಲ"

ಕುಮಾರ ತನ್ನ ಮಾತು ಸೇರಿಸಿದ-''ಇಲ್ಲ, ನೀನೊಬ್ಬ ಹೇಳಿದ ಮಾತ್ರಕ್ಕೆ ಸತ್ಯವಾಗಿಬಿಡುತ್ತದೆ. ಎಲ್ಲರೂ ಮಾಸ್ವಾಮಿ ರಾಮಸ್ವಾಮಿಗಳ ಮಾತನ್ನು ಕೇಳಿ ಪ್ರಜಾಸಂಖ್ಯೆಯನ್ನು ಹೆಚ್ಚುಮಾಡ್ತಾ ಹೋಗಲಿ''

ರಾಮಸ್ವಾಮಿ ಪ್ರತಿಭಟಿಸಿದ- ''ಅದೂ ಸಾಧ್ಯ ವಿಲ್ಲ. ಯಾವಯಾವಕಾಲಕ್ಕೆ ಎಷ್ಟೆಷ್ಟು ಆಗಬೇಕೋ ಅಷ್ಟಷ್ಟೆ ಆಗುತ್ತೆ. ಈ ಸಮಯಕ್ಕೆ ಪ್ರಜಾಭಿವೃದ್ಧಿಯೇ ಭಗವಂತನ ಸಂಕಲ್ಪವಾಗಿರಬೇಕು.

ಮಾತು ಸಾಗಿತು.

ಕುಮಾರ-ರಾಮು ನೀನು ಹೇಳುವುದು ನಿಜ ಇರ ಬಹುದಾದರೂ ಎಲ್ಲಕ್ಕೂ ಭಗವಂತನ ಕಡೆ ಕೈಮಾಡಿ ತೋರಿಸುವುದು ಸರಿಯಲ್ಲ. 6/7 ಪ್ರಯತ್ನ + 1 7 _ ಸಿದ್ಧಿ ಅಂತ ನಮ್ಮ ಗಣಿತದ ಮೇಷ್ಟ್ರು ಹೇಳ್ತಾ ಇದ್ದದ್ದನ್ನು ಮರೆತುಬಿಟ್ಟೆಯೇನಯ್ಯ? ಎಲ್ಲಕ್ಕೂ ಯೋಚನೆ. ಯೋಜನೆ ಬೇಕು. ಯೋಜನ ದೂರ ಯೋಚಿಸಿ ಪ್ರಯೋಜನ ಪಡೆಯಬೇಕು.

ರಾಮು-ಯೋಜನೆ ಮಾಡಿಕೋ ಬೇಡ ಎಂದವ ರಾರು ?

ರಾಜಣ್ಣ-ಹಾಗೆ ಬಾ ದಾರಿಗೆ. ಮೂರು ಅಥವಾ ನಾಲ್ಕು ಅಂತ ಒಂದು ಮಿತಿ ಇರಲಿ.

ಕುಮಾರ-ಐದು ಯಾಕಾಗ ಬಾರದು ? ಆರ್ಥಿಕ ಪರಿಸ್ಥಿತಿ ಚೆನ್ನಾಗಿದ್ದರೆ ?

ರಾಜಣ್ಣ-ಐದೇ ಆಗಲಿ ಅದಕ್ಕೇನಂತೆ.

ರಾಮು-ನನಗೆ ಅರ್ಧಡಜನ್ ಇರಲಿ ಅಂದರೆ.

ರಾಜಣ್ಣ-ಯಾವುದೋ ಅಂತೂ ಒಂದು ಮಿತಿ, ಅವರವರ ಆರ್ಥಿಕ ಪರಿಸ್ಥಿತಿಗೆ ಅನುಸಾರವಾಗಿ

ಕುಮಾರ ನೂರರ ಮಿತಿ ಅಂತ ಇಟ್ಟುಕೊಂಡರೆ ಏನು ಪ್ರಯೋಜನ. ನೋಡು ಈ ಆರ್ಥಿಕ ಪರಿಸ್ಥಿತಿ ಅನ್ನುವ ತಳ-ಮಟ್ಟವೇ ಸರಿಯಾಗಿಲ್ಲ. ಅದು ಬದಲಾ ವಣೆಗೆ ಒಳಗಾಗುತ್ತೆ.

ರಾಮು-ಒಬ್ಬನಿಗೆ ಅರವತ್ತನೆಯ ವಯಸ್ಸಿನಲ್ಲಿ, ಇನ್ಶೂರೆನ್ಸ್ ಬಂದಾಗ, ಆರ್ಥಿಕ ಪರಿಸ್ಥಿತಿ ಸುಧಾರಿಸುತ್ತೆ ಅಂದುಕೋ. ಆಗ ಮಕ್ಕಳನ್ನು ಪಡೆಯುವುದು ಹೇಗೆ?

ಕುಮಾರ-ಯಾರನ್ನಾದರೂ ವ್ಯಾಸರಂಥಾವರನ್ನು ಕರೆತಂದು...

ರಾಜಣ್ಣ-ಸಾಕುಮಾಡು ನಿನ್ನ ತಲೆ ಹರಟೆ.

ರಾಮು-ಒಬ್ಬನ ಆದಾಯ ಗಂಡ-ಹೆಂಡಿ ರಿಬ್ಬರ ಜೀವನಕ್ಕೆ ಮಾತ್ರ ಸಾಕು. ಆಗ ? ಇನ್ನೊಂದು ಜೀವ ಬಂದರೆ ಗತಿ?

ಕುಮಾರ-ಒಬ್ಬೊಬ್ಬರಿಗೂ 2/3 ಭಾಗ ಸುಖ. ಟೂ ಬೈ ತ್ರೀ !

ರಾಜಣ್ಣ-ಅಂಥವರಿಗೆ ಮಕ್ಕಳೇ ಬೇಡ.

ಕುಮಾರ-''ಮಕ್ಕಳಿಲ್ಲದ ಬಾಲಿದ್ಯಾತರ ಜನ್ಮ- ಬಾಳಿಲೆ ಹಾಸ್ಯಂಡು ಬೀಸಿ ಒಗೆದಾಂಗ"

ರಾಜಣ್ಣ-ಹೋಗಲಿ ಬಿಡು ಒಂದು ಆದಂಗಾಗಲಿ; ಹೇಗೋ ಬೆಳೆದುಕೊಳ್ಳಲಿ.

ರಾಮು-ಒಂದೇ ಮಗುವಾದರೂ ಆರ್ಥಿಕ ಪರಿ ಸ್ಥಿತಿ ಏರುಪೇರಾಗುವುದಾದರೆ. ನಿನ್ನ ಈ ಅಸಹ್ಯದ ವರ್ತನೆಗೆ ಅದು ಯೋಗ್ಯಕಾರಣ ಆಗಲಾರದು.

ಕುಮಾರ-ರಾಷ್ಟ್ರೀಯ ದೃಷ್ಟಿ ಇರಲಿ

ರಾಮು–ರಾಷ್ಟ್ರೀಯ-ಸಾಮಾಜಿಕ – ಮಾನವೀಯ ದೃಷ್ಟಿ ಇರಲೇಬೇಕು ಆದರೆ ಈ "ಬರ್ತ್ ಕಂಟ್ರೋಲ್"ನ ಪರಿಕರಗಳನ್ನು ನಾನು ಒಪ್ಪುವುದಿಲ್ಲ. ಗಾಂಧೀಜಿಯವರು ಹೇಳುತ್ತಿದ್ದಂತೆ "ಸೆಲ್ಫ್ ಕಂಟ್ರೋಲ್" ಮಾತು ಹೇಳಿದರೆ ನಾನು ಒಪ್ಪಿಕೊಳ್ಳುತ್ತೇನೆ.

ಕುಮಾರ–ಮಾತ್ರೆಗಳ–ಚೀಲಗಳ ಉಪಯೋಗ; ಸುರಕ್ಷಿತ ಸಮಯಾಂತರ, ಆಪರೇಷನ್, ಲೂಪ್, ಅದೂ ಇದು–ಇವುಗಳನ್ನು ಉಪಯೋಗಿಸುವುದು ತಪ್ಪೆ, ಹಾಗಾದರೆ.

ರಾಮು–ಆರೋಗ್ಯದ ದೃಷ್ಟಿಯಿಂದ ಹಾಗೂ ಸಮಾಜದ ನೀತಿ–ಮಟ್ಟದ ದೃಷ್ಟಿಯಿಂದ ಅವು ಅಪಾಯಕರ. ಅನೇಕವೇಳೆ ಅವುಗಳನ್ನು ಉಪಯೋಗಿಸಿಯೂ ಆ ಬಲೆಯಿಂದ ಒಂದೊಂದು ಜೀವ ತಪ್ಪಿಸಿಕೊಂಡು ಬರುತ್ತವೆ. ಆಗ? ಉದ್ದೇಶ?

ಕುಮಾರ–ಏನಂತೆ, ತಲೆ ಹೋಗುವುದು. ಹುಟ್ಟಿ ಹುಟ್ಟುತ್ತಲೆ ಅವನ್ನು ನೀರಿಗೆ ಎಸೆಯುವುದು. ಅಥವಾ ಕಂಸನಂತೆ ತಲೆಯನ್ನು ಬಂಡೆಗೆ ಅಪ್ಪಳಿಸುವುದು. ಇದಕ್ಕೆ ರಾಮಾಯಣ-ಮಹಾಭಾರತಗಳ ಸಾಕ್ಷ್ಯಾಧಾರಗಳೇ ಇವೆಯಲ್ಲ!

ರಾಮು–ಕರುಣೆಯಿಲ್ಲದ ಈ ಕೆಲಸಕ್ಕೆ ಯಾರೂ ಒಪ್ಪುವುದಿಲ್ಲ.

ಕುಮಾರ–ಹುಟ್ಟುವುದಕ್ಕೆ ಮೊದಲೇ ಗರ್ಭಪಾತ ಮಾಡಿಸಿಬಿಟ್ಟರಾಯಿತು.

ರಾಮು–ಭ್ರೂಣಹತ್ಯೆ ಶಿಶುಹತ್ಯೆಗಿಂತ ಕ್ರೂರವಾದದ್ದು. ಒಂದು ಜೀವ ಭೂಲೋಕದಲ್ಲಿ ಅವತರಿಸುವುದಕ್ಕೆ ಇರುವ ಅವಕಾಶವನ್ನು–ಸ್ವಾತಂತ್ರ್ಯವನ್ನು ಯಾರೂ ಕಸಿದುಕೊಳ್ಳಬಾರದು.

ಕುಮಾರ–ಸ್ವಾತಂತ್ರ್ಯ ಆಜನ್ಮ ಸಿದ್ಧಹಕ್ಕು – ಹುಟ್ಟಿದ ಮೇಲೆ ಬರುತ್ತದೆ. ಅದಕ್ಕೆ ಮೊದಲೆ?

ರಾಮು–ಅದು ಅನ್ಯಾಯ. ಅದನ್ನು ನಾನೂ ಮೆಚ್ಚುವುದಿಲ್ಲ–ದೇವರೂ ಮೆಚ್ಚುವುದಿಲ್ಲ.

ರಾಜಣ್ಣ–ನೀವೇನೇ ಹೇಳಿ, ನನ್ನ ಮನಸ್ಸು ಒಪ್ಪಿದೆ. ಐದನೆಯದಕ್ಕೆ ಏನಾದರೂ ಮಾಡುವುದು ನಿಶ್ಚಯ.

ಕುಮಾರ–ಅದು ಕಾನೂನು ವಿರುದ್ಧ.

ರಾಜಣ್ಣ–ನೋಡುತ್ತಿರು ಇಷ್ಟರಲ್ಲೇ ಅದನ್ನೂ ಕಾನೂನು ಬದ್ಧ ಮಾಡಿಸುತ್ತೇನೆ.

ಇಷ್ಟು ಹೇಳಿ ರಾಜಣ್ಣ ಕೋಪದಿಂದ ಮೇಲೆದ್ದು ಹೊರಟೇಬಿಟ್ಟ.

ಬೇಗ ಬೇಗ ಹೆಜ್ಜೆ ಹಾಕಿದ. ಹೆಜ್ಜೆ ಹೆಜ್ಜೆಗೂ ಸಂಶಯ. ಒಂದೊಂದು ಸಮಾಧಾನ. ಮತ್ತೆ ಸಂಶಯ. ಮನಸ್ಸಿನಲ್ಲಿ ಕಳವಳ. ರಾಮುಸ್ವಾಮಿಯ ಕಾವಿನಿಂದ ಕೂಡಿದ ಮಾತು, ಹಾಗೂ ಕುಮಾರನ ಹಾಸ್ಯ–ವ್ಯಂಗ್ಯಗಳು ರಾಜಣ್ಣನಮನಸಿನ ಮೇಲೆ ಸಾಕಷ್ಟು ಪರಿಣಾಮವನ್ನು ಬೀರಿದ್ದುವು. ಯೋಚಿಸುತ್ತಾ ಮುಂದೆ ನಡೆದ—

ಹೌದು. ಮುಂದೆ ಬರಲಿರುವ ಆಹಾರ ಸಮಸ್ಯೆಗೆ ಪ್ರಜಾಮಿತಿಯೇ ಸದುತ್ತರ. ಪ್ರಜಾ ಸಂಖ್ಯೆ ಹೆಚ್ಚಾದರೆ ಅದಕ್ಕೆ ಹೊಣೆ ಯಾರು? ಪ್ರಕೃತಿಯೇ ಆದರೆ ಆಹಾರ ಒದಗಿಸುವ ಹೊಣೆಯೂ ಅದರವೆ ಅಲ್ಲವೆ? ಒಂದು ಜೀವ ಮಹಾವಿಜ್ಞಾನಿಯೋ, ಕಲಾವಿದನೋ ದಾರ್ಶನಿಕನೋ ಆಗಿ ಲೋಕೋದ್ಧಾರವನ್ನೇ ಮಾಡಬಹುದು-ಅದನ್ನು ತಡೆಗಟ್ಟಲು ನಾನಾರು? ನೂರು ವರ್ಷಗಳಲ್ಲಿ ಆಹಾರ ಸಮಸ್ಯೆಗೆ ಅದಾವ ವೈಜ್ಞಾನಿಕ ಪರಿಹಾರ–ಉತ್ತರ ದೊರೆಯುವುದೊ? ಬೀಡುಭೂಮಿ–ಬಂಗಾರದ ಬೆಳೆ ಬೆಳೆಯಬಹುದು. ಹೌದು. ನಮ್ಮ ಆಹಾರದ ಅಭಾವಕ್ಕೆ ಪ್ರಜಾಸಂಖ್ಯೆಯಲ್ಲ–ಸಾಕಷ್ಟು ದುಡಿಮೆಯಿಲ್ಲದಿರುವುದು. ಸೋಮಾರಿತನ–ಅಷ್ಟೆ. ಸಹಜವಾದ ಪ್ರಜಾಭಿವೃದ್ಧಿಯನ್ನು ಕೃತಕವಾಗಿ ತಡೆಗಟ್ಟುವುದು ಸಮಾಜ–ಘಾತುಕವೇ ಸರಿ–ಹೌದೆ?

ರಾಜಣ್ಣ ಮನೆಸೇರಿದಾಗ ರಾತ್ರಿ ಎಂಟಾಗಿತ್ತು. ರಾಣಿ ಸಮಾಧಾನ ಪಡಿಸಿದಳು. –"ಏಕೆ ತಲೆ ಕೆಡಿಸಿಕೊಳ್ಳುತ್ತೀರಿ? –ಇನ್ನೂ ಕಾದು ನೋಡೋಣ."

೩

ಒಂದುವಾರ ಕಳೆಯಿತು. ರಾಜಣ್ಣನಿಗೆ ಉತ್ತರ ಸಿಕ್ಕಲಿಲ್ಲ–ರಾತ್ರಿ ಮಕ್ಕಳೆಲ್ಲ ಮಲಗಿದ ಮೇಲೆ ರಾಣಿಯನ್ನು ಕೇಳಿದ–''ಹೋಗಿದ್ದೆಯಾ, ಡಾಕ್ಟರ್ ಹತ್ತಿರ?"

''ಹೋಗಿದ್ದೆ. ಎರಡು ತಿಂಗಳಾಗಿದೆಯಂತೆ"

''ಅದುಸರಿ, ನಾನು ಹೇಳಿದ ಆ ವಿಚಾರ, ಕೇಳಿದೆಯಾ ?

''ಇಲ್ಲ. ನನ್ನ ಮನಸಿಗೇ ಒಪ್ಪಿಗೆಯಾಗಲಿಲ್ಲ."

''ನನ್ನ ಮಾತು ಎಂದರೆ ನಿನಗೆ ಅಲಕ್ಷ್ಯ" ರಾಜಣ್ಣ, ಕೋಪದಿಂದ ಗುಡುಗಿದ. ಅಷ್ಟೇ ಸಮಾಧಾನದಿಂದ ರಾಣಿ ನುಡಿದಳು-" ಹಾಗಲ್ಲ ಅಂದ್ರೆ. ನಾವು ದೈವೇಚ್ಛೆಗೆ ಎದುರೆ? ಆವ ತಾಯಿತಾನೆ, ಒಪ್ಪಿಯಾಳು, ಇದಕ್ಕೆ ನೀವೇ ಇನ್ನೊಮ್ಮೆ ಯೋಚಿಸಿ ನೋಡಿ, ಅಲ್ಲಿಗೂ ಆದೇ ಆಗಬೇಕು ಅಂತ ಹೇಳಿದರೆ, ''ಪತಿಯಾಜ್ಞೆ" ಅಂತ ನಾನು ಸಿದ್ಧಳಾಗುತ್ತೇನೆ." ಇಷ್ಟು ಹೇಳಿ ಎದೆಯ ಮೇಲೆ ತಲೆಯಿಟ್ಟು ಕಣ್ಣೀರು ಸುರಿಸಿದಳು. ರಾಜಣ್ಣನ ಅಂತಃಕರಣ ಮಿಡಿಯಿತು. ಹೋಗಲಿ ಬಿಡು ಅಳಬೇಡ" ಎಂದು ಬಾಚಿತಬ್ಬಿಕೊಂಡ, ಸಂತಯಿಸಿದ. ಅದೇ ಗುಂಗಿನಲ್ಲಿ ರಾಜಣ್ಣನಿಗೆ ನಿದ್ರೆ ಬಂತು.

ಪಕ್ಕದ ಮನೆಯ ರೇಡಿಯೋ ಹಾಡುತ್ತಿತ್ತು.... ''ತರುವುಕು ಕಾಯಿ ಭಾರಮಾ..." ರಾಣಿ ಹಾಡನ್ನೇ ಆಲಿಸುತ್ತಾ, ಕುಳಿತಳು. ರಾಜಣ್ಣ ನಿದ್ರಿಸುತ್ತಿದ್ದ.

o o o

ಕನಸು-ಪ್ರವಾಹಗಳ ಮೇಲೆ ಪ್ರವಾಹಗಳು. ಸಹಸ್ರ ಸಹಸ್ರಗಳ ಸಾವು.

ಭೀಕರರೋಗ; ಸಾಂಕ್ರಾಮಿಕ ರೋಗ. ಲಕ್ಷಗಟ್ಟಲೆ ಸಾವು.

ಬಿರುಗಾಳಿ-ಜ್ವಾಲಾಮುಖಿಗಳ ಸಿಡಿತ-ಕೋಟಿ ಕೋಟಿಗಳ ಸಾವು.

ಭೂಕಂಪ ಅಣು-ರಶ್ಮಿಪಾತ- ಊ ರೂ ರು ಗ ಳ ಸಮಾಧಿ-ಅಬ್ಬಾ! ವಿಜ್ಞಾನದ ಮಹಾಪ್ರಗತಿ-ಸಹಸ್ರಾರು ಯಂತ್ರಗಳು-ಭೋಗ ವಸ್ತುಗಳು ! ರಾಜಕಾರಣಿಯ ಭಾಷಣಃ

ನಮ್ಮ ಹಿಂದಿನವರು ಸಾಧಿಸಿದ ಅಭಿವೃದ್ಧಿಗಾಗಿ, ಮಾಡಿದ ಮಾರ್ಗದರ್ಶನಕ್ಕಾಗಿ ನಾವು ಚಿರ ಋಣಿಗಳು. ಆದರೆ ಅವರು ಮಾಡಿದ ಒಂದು ಅನ್ಯಾಯ, ತುಳಿದ ತಪ್ಪು ಹೆಜ್ಜೆ ನಮ್ಮ ಮಾನವ ಕುಲಕ್ಕೇ ಘಾತುಕವಾಗಿದೆ. ಆದಕ್ಕಾಗಿ ಅವರನ್ನು ದೂಷಿಸದೆ ವಿಧಿಯಿಲ್ಲ. ದೈಹಿಕ ಸುಖ ಮಾತ್ರ ಸುಖವೆಂದು ಭ್ರಮಿಸಿ, ಮತಿಗೆಟ್ಟು ನೈತಿಕ ಮೌಲ್ಯಗಳನ್ನೇ ಬಲಿಗೊಟ್ಟರು. ಅಷ್ಟೇ ಅಲ್ಲ ನಮ್ಮ ಪ್ರಾಕೃತಿಕ-ನೈಸರ್ಗಿಕ ಬಲವೇ ಕುಂದುವಂತೆ ಮಾಡಿದ್ದಾರೆ. ಸುಮಾರು ಸಾವಿರ ವರ್ಷಗಳ ಹಿಂದೆ ಅಜ್ಞಾನದ ಅಲೆಯೇರಿ ಬಂದು, ನಮ್ಮ ಪೂರ್ವಜರು. ಚಪ್ಪಲಿ ಚಿಕ್ಕದೆಂದು ಕಾಲನ್ನು ಕತ್ತರಿಸುವ ಮೂರ್ಖರಂತೆ, ಪ್ರಜಾ ಸಂಖ್ಯೆಯನ್ನು ಮಿತಿಗೊಳಿಸುವ ಚಾಂಚಲ್ಯಕ್ಕೆ ಒಳಗಾದರು. ಹೆಚ್ಚು ದುಡಿತ-ಹೆಚ್ಚು ಉತ್ಪಾದನೆಯ ಮಂತ್ರವನ್ನು ಕಾರ್ಯದಲ್ಲಿ ಮರೆತರು. ಆ ಮಕ್ಕಳ ದ್ವೇಷದ ಭಾವನೆ ಬೆಳೆದು, ಅದರ ಫಲವಾಗಿ ಈಗ ಸಹಜವಾದ ಸಂತಾನಾಕಾಂಕ್ಷೆಯೇ ಇಲ್ಲದಾಗಿದೆ. ಈಗ ಅದಕ್ಕೆ ಪ್ರಚೋದನೆ ಯಾಗಬೇಕಾಗಿದೆ-ಕಾನೂನು ಬದ್ಧವಾಗಿರುವ ವಿಧವಾ ವಿವಾಹದ ಒತ್ತಾಯವಾಗಬೇಕು. ಒಂದು ಹೆಣ್ಣಿಗೆ ಒಂದು ಗಂಡೆಂಬ ನಿಯಮ ದೂರಾಗಿ ಹೆಚ್ಚು ಮಕ್ಕಳನ್ನು ಪಡೆದವರಿಗೆ ಬಹುಮಾನ ಪ್ರಶಸ್ತಿಗಳನ್ನು ಕೊಡಬೇಕು. ಸಂತಾನೋತ್ಪಾದನೆ ರಾಷ್ಟ್ರಸೇವೆ ಎಂಬ ಭಾವನೆ ಬೆಳೆಯಬೇಕು...

ಥಟ್ಟನೆ ಎಚ್ಚತ್ತ ರಾಜಣ್ಣ, ರಾಣಿಯನ್ನು ಸಮಾಧಾನ ಪಡಿಸುತ್ತಾ ನುಡಿದ-''ರಾಣಿ, ನಿನ್ನಮಾತು ಸರಿ-ಅದು ನನ್ನ ಮನಸಿಗೂ ಒಪ್ಪಿಗೆಯಾಗಲಿಲ್ಲ." ರಾಣಿ ನಕ್ಕಳು.



# ಫಿಲಿಮನ್ ಅಂಡ್ ಸನ್ಸ್

ಇಂಡಸ್ಟ್ರಿಯಲ್ ಎಸ್ಟೇಟ್

ಬಿ. ಹೆಚ್. ರೋಡ್ :: ತುಮಕೂರು



ಮಿತ್ರರೇ,

ನಮ್ಮ ಕಾರ್ಖಾನೆಯ ಮೂಲಕ ಚಿಕ್ಕಮಗಳೂರು ಎಸ್ಟೇಟ್ ಮತ್ತು ಪಾಲಿಟೆಕ್ನಿಕ್ ಶ್ರೀ ಸಿದ್ಧಗಂಗಾ ಇಂಜಿನಿಯರಿಂಗ್ ಕಾಲೇಜ್ ಮತ್ತು ಇಂಡಸ್ಟ್ರಿಯಲ್ ಎಸ್ಟೇಟ್ ತುಮಕೂರು ಈ ಕಡೆಗಳಲ್ಲಿ ಕಬ್ಬಿಣದ ಕೆಲಸಮಾಡಿ ಪ್ರಸಸ್ತಿ ಪಡೆದಿರುವ ನಮ್ಮ ಕಾರ್ಖಾನೆಯಲ್ಲಿ, ವ್ಯವಸಾಯಕ್ಕೆ ಉಪಯೋಗಿಸುವ ಅತಿ ಉತ್ತಮ ದರ್ಜೆಯ ಉಪಕರಣಗಳು ಮತ್ತು ಉತ್ತಮವಾದ ಗಾಣಗಳು, ಕಬ್ಬಿಣದ ಕಿಟಕಿಗಳು, ಬಾಗಿಲುಗಳು, ಟ್ರೆಸ್‌ಗಳು, ಸುಲಭ ಬೆಲೆಗೆ ಸಕಾಲದಲ್ಲಿ ದೊರೆಯುತ್ತವೆ.

ದಯವಿಟ್ಟು ಒಮ್ಮೆ ಭೇಟಿಕೊಡಿ

# ನತದೃಷ್ಟೆ

ಲೇಖಕಿ :
ಶ್ರೀಮತಿ ಸುಲೋಚನಾ ನಾಗರಾಜ್

ಹೌದು ! ನಾನು ಅಪ್ಪ ಎನ್ನುವಂತೆ ನತದೃಷ್ಟೆಯೇ ಸರಿ. ಇಲ್ಲದಿದ್ದರೆ ನನ್ನ ತಂಗಿಯರಿಗಿಲ್ಲದ ಸಮಸ್ಯೆ ನನಗೇಕೆ ಅಡ್ಡವಾಗುತ್ತಿತ್ತು? ನನಗೇನು ರೂಪಿಲ್ಲವೇ ? ಗುಣವಿಲ್ಲವೇ ? ಅಥವಾ ನಾನು ಕಪ್ಪೇ ? ಖಂಡಿತ ನಾನೇನೂ ಜಂಭದಿಂದ ಹೇಳುತ್ತಿಲ್ಲ. ನನ್ನ ತಂಗಿಯರಿಗಿಂತಲೂ ನಾನು ಚೆಲುವೆ. ಎದುರಿಗಿರುವ ಕನ್ನಡಿಯೇ ಹೇಳುತ್ತಿದೆ. "ಹೌದು, ಹೌದು" ಎಂದು. ಆದರೂ......

ನನ್ನನ್ನು ಹೊತ್ತು ಹೆತ್ತ ಹೊಟ್ಟೆಯಲ್ಲಿಯೇ ನನ್ನ ತಂಗಿಯರೂ ಹುಟ್ಟಿದ್ದಾರೆ. ನಾನು ಕುಡಿದು ಬೆಳೆದ ತಾಯಿ ಹಾಲನ್ನೇ ಅವರೂ ಕುಡಿದು ಬೆಳೆದಿದ್ದಾರೆ. ಬಹುಶಃ ಅವರಂತೆ ನಾನು ಕಾಲೇಜು ಕಟ್ಟೆ ಹತ್ತಲಿಲ್ಲ ನಿಜ. ಆಧುನಿಕ ಬೆಡಗಿ ಎಂದೂ ನನ್ನನ್ನಾರೂ ಕರೆಯಲಿಲ್ಲ. ದೊಡ್ಡದಾಗಿ ಹೆಸರಿನ ಮುಂದೆ ಕಾಣಿಸಿಕೊಳ್ಳುವ ಪದವಿಯ ವಿದ್ಯೆಯೂ ನನಗಿಲ್ಲ ನಾನೊಪ್ಪುವೆ. ಆದರೆ ನಾನು ಬಲ್ಲೆ, ಎಲ್ಲರನ್ನೂ ಎಲ್ಲವನ್ನೂ ಅರ್ಥಮಾಡಿಕೊಳ್ಳಬಲ್ಲೆ. ನಾನು ಸುಸಂಸ್ಕೃತೆಯೆಂದೂ ನಾನು ಹೆಮ್ಮೆಪಡಲಾರೆ. ಆದರೆ ನನ್ನ ಹೃದಯ ಸಂಸ್ಕಾರ ರಹಿತವಾದುದನ್ನು ಒಪ್ಪುವುದಿಲ್ಲ. ಇಷ್ಟು ಮಾತ್ರ ನಿಜ. ಆದರೂ ನನಗೇಕೆ ಈ ವೇದನೆ ?......

ಯಾವುದನ್ನು ಕುರಿತು ಮೆಚ್ಚಿ, ಹಗಲುಗನಸು ಕಂಡು, ಗಾಳಿಗೋಪುರ ಕಟ್ಟಿದ್ದೆನೋ, ಯಾವುದನ್ನು ಅಪ್ಪಿ, ಅದರ ವೈಭೋಗದಲ್ಲಿ ಮೈಮರೆತು ಸರ್ವಾರ್ಪಣ ಮಾಡಿ, ನನ್ನ ಜೀವನದ ಸಾರ್ಥಕತೆಯನ್ನು ಕಾಣಬಯಸಿದ್ದೆನೋ ಅದಿಂದು ದೂರ ದೂರ ಎಟುಕದಂತೆ ಹೋಗುತ್ತಿದೆಯಲ್ಲಾ....

o o o

ಟಕ್ ಟಕ್... ಟಕ್...

ಅದೋ ಅಪ್ಪ ಬಂದ. ಇಂದೇನೋ ವಿಶೇಷವಿರಬೇಕು. ಎಂದೇ ಅವನ ಕೈಯಲ್ಲಿ ಹೂವು ಹಣ್ಣು ತುಂಬಿದ ಬುಟ್ಟಿಯಿದೆ. ಮಾತಿನಲ್ಲಿ ಕಾತುರವಿದೆ. ಅಮ್ಮ ನನ್ನ ಕರೆಯುವ ದನಿಯಲ್ಲಿಯೇ ನನಗರ್ಥವಾಗುತ್ತಿದೆ. ವಿಶೇಷದ ಕುರುಹು. ಇಂದು ಮೃಗಾಲಯದ ಈ ಮೃಗವನ್ನು ನೋಡಲು ಯಾವನೊಬ್ಬ ಪ್ರವಾಸಿ ಬರಬಹುದು. ನೋಡಿದ ಮೇಲೆ ಆತ ಮೆಚ್ಚಲೂ ಬಹುದು. ಅದು ಅವನಿಷ್ಟ. ನನ್ನ ದುರಾದೃಷ್ಟ. ಈ ಹಿಂದೆ ನಾನೆಷ್ಟು ಮಂದಿಯ ಮುಂದೆ ಬಲಿಗೊಡ್ಡಿದ ಕುರಿಯಂತೆ ಕುಳಿತು ಬಾರದ ನಗುಮುಖ ಬರಿಸಿಕೊಂಡು ನನ್ನ ದೀನವದನವನ್ನು ತೋರಿಸಿಲ್ಲ? ಅಷ್ಟೇ ಕೋಪ ಬಂದು ಚೆನ್ನಾಗಿ ಬಾಯಿಗೆ ಬಂದಂತೆ ಅಂದು ಕಳಿಸೋಣವೆಂದು ಮನಸ್ಸು ರೋಸಿದಾಗ ಸಾಧ್ಯವಾಗದೆ ನನ್ನ ನೋವು ಕೋಪ ನಾನೇ ತಡೆದಿಟ್ಟುಕೊಂಡಿಲ್ಲ? ಇದೆಲ್ಲಾ ನನಗೆ ಹಳೆಯ ಮಾತಾಗಿದೆ. ದಿನನಿತ್ಯದ ಯಾಂತ್ರಿಕ ಚಲನೆಯಾಗಿದೆ. ಥೂ, ಅಪ್ಪ ಹೇಳುವಂತೆ ನಾನೊಬ್ಬ ನತದೃಷ್ಟೆಯೇ ನಿಜ.

ಪ್ರಪಂಚದ ಇತರೇ ಎಲ್ಲಾ ಹೆಣ್ಣುಮಕ್ಕಳಂತೆ ನಾನೂ ಒಂದು ದಿನ ಹೆಣ್ಣಾದೆ. ಯೌವನ ನನ್ನ ಅಂಗಾಂಗ ಮುತ್ತಿದೆ. ನನಗಿಂತ ಕೆಲವೇ ವರ್ಷ ಕಿರಿಯರಾದ ನನ್ನ ತಂಗಿಯರಿಬ್ಬರೂ ನನ್ನೆತ್ತರವೇ ಬೆಳೆದು ನಿಂತಿದ್ದಾರೆ. "ಎಲ್ಲದಕ್ಕೂ ಕೊಟ್ಟು ಹುಟ್ಟಬೇಕು. ಹುಟ್ಟಿ ಪಡೆದಿರಬೇಕು" ಎಂಬ ಹಿರಿಯರ ಮಾತು ಸುಳ್ಳಲ್ಲ. ಇಬ್ಬರೂ ಕಾಲೇಜು ಕಲಿತಿದ್ದಾರೆ. ಆದರೆ ನಾನು ಕಲಿತದ್ದು ಕೇವಲ ಸ್ವಲ್ಪವೇ. ಇದೂ ನನ್ನ

ದೌರ್ಭಾಗ್ಯವೇ. ಕಲಿತ ತಂಗಿಯರಿಬ್ಬರೂ ತಮ್ಮ ತಮ್ಮ ಪತಿಯರನ್ನು ತಾವೇ ನೋಡಿಕೊಂಡಿದ್ದಾರೆ ಕಾಲೇಜಿನಲ್ಲಿ. ಅವರವರು ಮೆಚ್ಚಿದ ಅವರವರ ಪತಿಯರ ಸಮಾಗಮ ನಿಂತಿರುವುದು ಕೇವಲ ನನ್ನೊಬ್ಬಳ ದೆಸೆಯಿಂದಲೇ....

ಜೋಯಿಸರು ಹೇಳುತ್ತಾರೆ–ಈ ಲಗ್ನಕ್ಕೆ ಆ ಗ್ರಹ ಅಡ್ಡವಿದ್ದಾನೆ, ಆಕೆಗೆ ಈ ಗ್ರಹ ಕಾಡುತ್ತಿದೆ ಎಂದು. ಹುಂ, ನನಗೇ ನಗು ಬರುತ್ತದೆ. ನಾನು ಹೇಳುತ್ತೇನೆ, ತಂಗಿಯರಿಗೆ ಅಡ್ಡಗೋಡೆಯಾಗಿ ನಿಂತಿದ್ದಳಕ್ಕ ಎಂದು.

ಅಮ್ಮನ ಹಠವೂ ದೊಡ್ಡದೇ. ಹಿರಿಯವಳ ಲಗ್ನವಾಗದ ಹೊರತು ಕಿರಿಯರ ಲಗ್ನವಿಲ್ಲವೆಂದು. ದೊಡ್ಡವಳ ಕರ್ಮಕ್ಕೆ ಚಿಕ್ಕವರು ಹೊಣೆಯೇ. ಈಚೀಚೆಗಿನ ವಾತಾವರಣ ಖಂಡಿತಾ ನನಗರ್ಥವಾಗುತ್ತದೆ ನಾನೇನೂ ದಡ್ಡಿಯಲ್ಲವೆಂದು ಆಗಲೇ ಹೇಳಲಿಲ್ಲವೇ ? ತಂಗಿಯರ ದುಃಖಭಾವ, ಅಪ್ಪನ ಸಿಡುಕು, ತಂಗಿಯರಿಗಾಗಿ ಕಾದು ನಿಂತ ಅವರ ಕಾಲೇಜು ಗೆಳೆಯರ ತಾತ್ಸಾರ' ನೋಟ ಎಲ್ಲಾ ನನಗರ್ಥವಾಗುತ್ತಿದೆ. ಎಂದೇ ನಾನು ಅಮ್ಮನ ಹತ್ತಿರ ದೀನವದನಳಾಗಿ ಕುಳಿತು, ಕಣ್ಣೀರು ಸುರಿಸುತ್ತಾ ಹೇಳತೊಡಗುತ್ತೇನೆ. "ನನ್ನಿಂದ ತಂಗಿಯರ ಮದುವೆ ನಿಲ್ಲಿಸುವುದು ಬೇಡ, ನನ್ನೊಬ್ಬಳ ದೆಸೆಯಿಂದ ಅವರ ಸುಖ ಸಂತೋಷಗಳಿಗೆ ಅಡ್ಡಿ ಬೇಡ. ನನ್ನ ಹಣೆ ಬರೆಹಕ್ಕೆ ಅವರು ಕಾರಣರೇ? ನನ್ನ ಹಣೆಯಲ್ಲಿ ಬರೆದಂತಾಗುತ್ತದೆ" ಎಂದು. ಆದರೆ ಅಮ್ಮನೇಕೆ ಇದನ್ನು ಅರ್ಥ ಮಾಡಿಕೊಳ್ಳುವುದಿಲ್ಲವೋ ನನಗೆ ತೋಚುವುದಿಲ್ಲ. ನನ್ನ ಮುಖವನ್ನು ನೋಡಿ "ಅಳಬೇಡ, ದೇವರು ಕಣ್ಣು ಬಿಟ್ಟಾನು. ಕುರುಡ ಕುಂಟರಿಗೇ ಮದುವೆಯಾಗುತ್ತದೆ, ನಿನ್ನದೇನು. ದೇವರು ಕಣ್ತೆರೆದರೆ ನಿನಗೂ ಒಬ್ಬ ಪತಿ ದೊರೆತಾನು" ಎನ್ನುತ್ತಾಳೆ.

ಅಪ್ಪ ಪ್ರತಿಯೊಬ್ಬ ನನ್ನನ್ನು ನೋಡಲು ಬಂದ ಮಹಾಶಯನು ನೋಡಿ ಹೋದಾಗಲೂ ಅಸಮಾಧಾನ ತಾಳುತ್ತಾನೆ. ಈ ನತದೃಷ್ಟೆಯ ಹಣೆಯಲ್ಲೇನು ಬರೆದಿದೆಯೋ ಎಂದು. ನಾನಿದನ್ನು ಹೇಗೆ ಸಹಿಸಲಿ? ಯಾವ ಜನ್ಮದ ಕರ್ಮವಿದು ?....

ಇತ್ತೀಚಿಗೆ ನನ್ನ ಹೃದಯದಲ್ಲೊಂದು ಆಶಾಕಿರಣ ಮೂಡಹತ್ತಿದೆ. ಏನೋ ಎಂತೋ ಯಾವುದೋ ಒಂದು ಅವ್ಯಕ್ತ ಶಾಂತಿ, ಆನಂದ ನನ್ನ ನರನಾಡಿಗಳನ್ನೂ ವ್ಯಾಪಿಸಹತ್ತಿದೆ.

ಎದುರು ಮನೆಯ ರೂಮಿಗೆ ಬಂದೊಬ್ಬ ತರುಣ ನನ್ನ ಹೃದಯದಲ್ಲಿ ಶಾಂತಿಯ ಅಲೆಯನ್ನೇ ಎಬ್ಬಿಸಿದ್ದಾನೆ. ಅವನನ್ನು ನೋಡುತ್ತಾ ನೋಡುತ್ತಾ ನನ್ನ ಮನಸ್ಸು ಭಾವೋದ್ವೇಗದಿಂದ ತೇಲಾಡುತ್ತದೆ. ಛೀ, ನೀನೆಂತಹಾ ನೀತಿಗೆಟ್ಟ ಹೆಣ್ಣೆನ್ನುವಿರೋ?; ಇಲ್ಲ, ಇಲ್ಲ. ಖಂಡಿತಾ ಇಲ್ಲ. ನಾನಿನ್ನೂ ಯಾರಿಗೂ ನನ್ನ ಹೃದಯವನ್ನು ಅರ್ಪಿಸಿಲ್ಲವಲ್ಲ ? ನನ್ನ ಕೊಠಡಿಯ ಮೂಲೆಯಲ್ಲಿ ನಿಂತು, ಯಾರ ಕಣ್ಣಿಗೂ ಬೀಳದಂತೆ ನಾನು ಅವನತ್ತ ಕಣ್ಣು ಹಾಯಿಸುತ್ತೇನೆ.

ಕೃಶವಾದರೂ ಸಾತ್ವಿಕತೆಯೇ ಮೂರ್ತಿವೆತ್ತ ಮುಗ್ಧಮುಖ, ಗುಂಗುರಾದ ಕೂದಲು, ಉದ್ದವೆನಿಸಿದರೂ ಆಕರ್ಷಕವಾದ ಮೈಕಟ್ಟು, ಎಲ್ಲಕ್ಕೂ ಹೆಚ್ಚಾಗಿ ಆತನ ಶುಭ್ರ ಸರಳ ಉಡಿಗೆ ನನ್ನನ್ನು ಆಕರ್ಷಿಸಿದೆ. ಹೊರಗಡೆ ಹೊರಟನೆಂದರೆ ಕತ್ತೆತ್ತಿ ಯಾವ ಹೆಣ್ಣಿನ ಮುಖವನ್ನೂ ನೋಡನಾತ. ಪಾಪ! ತನ್ನ ಬಟ್ಟೆಗಳನ್ನು ತಾನೇ ಒಗೆದುಕೊಳ್ಳುತ್ತಾನೆ. ಬಹುಶಃ ಅಡಿಗೆಯನ್ನೂ ತಾನೇ ಮಾಡಿಕೊಳ್ಳುತ್ತಾನೋ 'ಏನೋ? ಛೀ, ನನಗೇಕೆ ಇಷ್ಟು ಅಸಂಬದ್ಧ ಕಾತುರ? ಅವನು ಯಾರಾದರೇನು ? ಅವನು ಏನು ಮಾಡಿಕೊಂಡರೇನು ನನಗೇನು ? ಇದು ಮನೋವ್ಯಭಿಚಾರವಲ್ಲವೇ ? ಹೌದು, ಆದರೆ ಆದರೆ ? ನಾನು ಹೆಣ್ಣು. ದೀರ್ಘವಾದ ಆದರ್ಶ ಬಯಕೆ ಹೊತ್ತ ವಯಸ್ಸಿಗೆ ಬಂದ ಹೆಣ್ಣು. ನನಗದು ಎಟುಕದ ಹಣ್ಣೆಂದೂ ಗೊತ್ತು. ಥೂ, ನಾನಿನ್ನು ಹಾಗೆಲ್ಲಾ ಕದ್ದು ನೋಡುವುದು ತಪ್ಪು. ಅವನನ್ನು ಕುರಿತು ಯೋಚಿಸುವುದೂ ಸರಿಯಲ್ಲ. ಆತನು ನಿಮ್ಮವನೇ ಎಂಬ ಅಂಶ ತಿಳಿದ ಮೇರೆಗೆ ನನ್ನ ಹೃದಯ ಏನೇನೋ ಲೆಕ್ಕ ಹಾಕುತ್ತಿದೆ. ಆದರೆ ಅಂದಿನ ಅಪ್ಪ ಹೇಳುತ್ತಿರಲಿಲ್ಲವೇ ? ಹಿಂದೆ ಬಂದ ಮರು ಮದುವಣಿಗನೇ ಒಪ್ಪದೇಹೋದ, ಇನ್ನು ಕೈತುಂಬಾ ಸಂಬಳ ತರುವ ಈ ಆಫೀಸರು ಇವಳನ್ನು ಕನಸಿನಲ್ಲಿಯೂ ನೆನೆಯಲಾರ. ಆ ಬಗ್ಗೆ ಕುತೂಹಲ ಬೇಡ. ಅವಳ

ಹಣೆ ಬರಹ. ಇವಳು ಹುಟ್ಟದೇ ಇದ್ದರೆ ಯಾವ ದೇವರು ಅಳುತ್ತಿದ್ದನೋ ?....

ಅಮ್ಮನ ಮುಖದಲ್ಲಿ ಮೂಡಿದ ಆ ಯಾತನೆ, ಹೆತ್ತ ಕರುಳಿಗಾದ ಆ ನೋವು ನನ್ನ ಹೃದಯಕ್ಕೆ ಬಿದ್ದ ಬಲವಾದ ಹೊಡೆತವಾಗಿದೆ. ನಾನೆಂತು ಚೇತರಿಸಿ ಕೊಳ್ಳಲಿ? ಇಷ್ಟಾದ ಮೇಲೂ ನಾನಿನ್ನು ಬದುಕಿರುವುದು ಸರಿಯೇ ? ಇಲ್ಲ, ಇಲ್ಲ.

ಅದೋ ಅಪ್ಪ. ಅವನ ಅಸಮಾಧಾನ, ಆ ನೋಟವನ್ನು ನಾನೆದುರಿಸಲಾರೆ. ಕತ್ತಲು ಕೋಣೆಯ ಮೂಲೆಯೇ ಸರಿ. ನನಗೆ ಶಾಂತಿಧಾಮ.

೦ ೦ ೦

ಹೌದು, ನಾನೀ ರೂಮಿಗೆ ಬಂದು ಕೆಲವು ತಿಂಗಳುಗಳೇ ಉರುಳಿದವು. ಅಂದಿನಿಂದ ನಾನೀ ಎದುರುಮನೆಯವರನ್ನು ನೋಡುತ್ತಿದ್ದೇನೆ. ಮನೆ ಬೆಳೆದ ಹೆಣ್ಣು ಮಕ್ಕಳಿಂದಲೇ ತುಂಬಿದೆ. ಅದರಲ್ಲಿಬ್ಬರು ಬಣ್ಣದ ಚಿಟ್ಟೆಯರು ಕಾಲೇಜು ಕಟ್ಟೆ ಹತ್ತಿರುವುದೂ ನನಗೆ ಗೊತ್ತು. ನನ್ನ ಸ್ನೇಹಿತನಾದ ಕಾಲೇಜು ಅಧ್ಯಾಪಕ ಹೇಳಲಿಲ್ಲವೇ? ಕಾಲೇಜಿನಲ್ಲಿ ಅವರಿಬ್ಬರೂ ಚೆಲ್ಲಾಟವಾಡಿ, ಪ್ರೊಫೆಸರರಿಂದ ಛೀಡಿಸಿಕೊಂಡು ತಮ್ಮ ಗಂಡಂದಿರನ್ನು ತಾವೇ ಹುಡುಕಿಕೊಂಡು ಮದುವೆಗೆ ನಿಂತಿರುವುದನ್ನು ಛೀ, ನನಗೇಕೆ ಅವರ ಸುದ್ದಿ? ಅವರೇನಾದರೆ ನನಗೇನು ? ಹೆಣ್ಣಿಗೇ ಇಲ್ಲದ ಲಜ್ಜೆ, ಯೋಚನೆ ನನಗೇಕೆ ?

ಆದರೂ ಆ ಮನೆಯ ಮೋಹವೇಕೋ ನನ್ನನ್ನು ಸೆಳೆಯುತ್ತಿದೆಯಲ್ಲಾ. ನಾನು ಪ್ರತಿನಿತ್ಯ ನನ್ನ ರೂಮಿನ ದೀಪವಾರಿಸಿ ಕಿಟಕಿಯಲ್ಲಿ ನಿಂತು ಆ ಮನೆಯ ಹಿರಿಯಳನ್ನು ನೋಡುತ್ತೇನೆ. ಸಂಜೆಯಾಯಿತೆಂದರೆ ಪಾರಿಜಾತದ ಮರದಡಿ, ಮರಕ್ಕೆ ಒರಗಿಕೊಂಡು ನಿಂತು ಆಕಾಶವನ್ನೇ ದಿಟ್ಟಿಸಿನೋಡುವ ಅವಳನ್ನು ಕಂಡರೆ ಏನೋ ಒಂದು ಮಧುರ ಯಾತನೆ ನನ್ನನ್ನಾವರಿಸುತ್ತದೆ. ಬಿಳಿಯ ಬಣ್ಣ, ನೀಳವಾದ ಮೂಗು, ಕಪ್ಪಾದ ಉದ್ದವಾದ ಕೇಶರಾಶಿ, ಸುಂದರ ಮುಖ, ಯೌವನ ತುಂಬಿದ ದೇಹ ಖಂಡಿತಾ ತಂಗಿಯರಿಗಿಂತಲೂ ಆಕೆ ಚೆಲುವೆಯೆಂದೂ ಯಾರೂ ಒಪ್ಪಲೇಬೇಕು. ಆದರೂ ಆಕೆ ಎಂದೂ ಯಾರೊಡನೆಯೂ ಮಾತನಾಡಿದ್ದನ್ನೇ ನಾನು ಕಂಡಿಲ್ಲ. ಆ ಮೌನವೇ ಅವಳ ಗಾಂಭೀರ್ಯವನ್ನು ಹೆಚ್ಚಿಸಿದೆ. ನಾನು ಹೊರಗೆ ಬಂದರೆ ಕತ್ತೆತ್ತಿ ನನ್ನನ್ನವಳು ನೋಡುವುದೇ ಇಲ್ಲ. ತಂಗಿಯರಿಗೆ ಬಾರದೇಹೋದ ಲಜ್ಜೆಯನ್ನೆಲ್ಲಾ ಇವಳೇ ತುಂಬಿಕೊಂಡಿದ್ದಾಳೇನೋ. ಎಂದೇ ನನ್ನನ್ನು ಕಂಡರೆ ತಲೆ ತಗ್ಗಿಸಿ ಒಳಗೆ ಹೋಗುತ್ತಾಳೆ. ಆದರೆ ಅವಳ ದೀನ ಮುಖ, ವಿಶಾಲವಾದ ಹೊಳಪು ಕಣ್ಣುಗಳು ನನ್ನ ಹೃದಯದಲ್ಲಿ ದಂಗೆಯನ್ನೇ ಎಬ್ಬಿಸಿವೆ. ನಿಜಕ್ಕೂ ಅವಳಾವುದೋ ದುಃಖಸಾಗರದಲ್ಲಿ ಮುಳುಗಿದ; ಶಾಪಗ್ರಸ್ತ ದೇವಕನ್ಯೆ ಎನಿಸುತ್ತದೆ. ನನ್ನ ಹೃದಯ ಕಳವಳಗೊಳ್ಳುತ್ತದೆ. ಏಕೆ? ಅವಳಾರು? ನನಗೇನಾಗಬೇಕು ?....

ಮೊನ್ನೆ ನನ್ನ ಗೆಳೆಯ ಹೇಳಿದ ಸುದ್ದಿಯನ್ನು ಕೇಳಿದ ಮೇಲಂತೂ ಅವಳ ಬಗ್ಗೆ ಮರುಕ, ಅನುಕಂಪ ನನಗೆ ದಿನೇದಿನೇ ಹೆಚ್ಚಾಗುತ್ತಿದೆ. ಮೊನ್ನೆ ಹಾಗೇ ಆಯಿತಲ್ಲಾ, ಅಂದು ಸಂಜೆ ನನ್ನ ಗೆಳೆಯ ಹೇಳಿದ ಕತೆಯನ್ನೆಲ್ಲಾ ಕೇಳಿ, ಮರುಗಿ ರೂಮಿಗೆ ಬಂದೆ. ಭಾವೋದ್ವೇಗಪರವಶನಾದೆ. ಏಕೋ ಬಹಳ ದಿನಗಳಿಂದ ಬರೆಯದೆ ಬಿಟ್ಟಿದ್ದ ಡೈರಿಯನ್ನು ತೆರೆದೆ. ನನಗೇ ಅರಿವಿಲ್ಲದಂತೆ ನನ್ನ ಹೃದಯ ತುಂಬಿತ್ತು. ನನ್ನ ಲೇಖನಿ ವಿರಾಮವಿಲ್ಲದೆ ಓಡುತ್ತಿತ್ತು. ಡೈರಿಯಲ್ಲಿ ನಾನು ಏನೆಲ್ಲಾ ಬರೆದೆ ?....

ನಾನೊಬ್ಬ ಅನಾಥ. ಹುಟ್ಟಿನಲ್ಲೇ ಹೆತ್ತ ತಾಯಿಯನ್ನು ನುಂಗಿ, ಎಳೆತನದಲ್ಲಿಯೇ ತಂದೆಯನ್ನು ಬಲಿಕೊಟ್ಟು ದಿಕ್ಕಿಲ್ಲದ ಪರದೇಶಿಯಾಗಿ ಕಂಡವರ ಎರವಲು ಮಮತೆ, ಪೋಷಣೆಯಲ್ಲಿಯೇ ಬೆಳೆದೆ ಅನಾದರಣೆಯೇ ಪರಮಾನ್ನವಾಗಿತ್ತು. ತಿರಸ್ಕಾರವೇ ತೂಗುಮಂಚ! ವಾರಾನ್ನ ತಿಂದು, ಊರೂರು ಅಲೆದು ಉಪವಾಸ ಮಾಡಿ, ನೈಜಪ್ರೀತಿ ವಿಶ್ವಾಸದ ನೆಲೆಯರಿಯದೆ ಬೈಗುಳ ಆದರ, ತಿರಸ್ಕಾರಗಳ ಭೇದವರಿಯದೆ ದವನು ನಾನು. ಉಳ್ಳವರ ಕಾಲುಕಟ್ಟಿ, ಕೂಲಿಮಾಡಿ ನಂತರ ಕೆಲಸಕ್ಕೆ ಸೇರಿ ಓದಿ ಮುಂದೆಬಂದೆ. ಎಂದೇ ನಾನು ಸಿರಿವಂತನಲ್ಲ. ಕಷ್ಟದ, ಬಡತನದ ಸಂಪೂರ್ಣ ಅರಿವು ನನಗಿರುವಷ್ಟರ ಮಟ್ಟಿಗೆ ಬೇರಾರಿಗೂ ಇರಲಾರದು. ಯಾವದರ ಸುಳಿವೂ ಸೋಂಕದೆ ಬರಡಾಗಿ ನಾನು ಬೆಳೆದು ಬಂದೆನೋ ಅಂತಹ ಅಮೂಲ್ಯ, ಸೆಲೆಯುಕ್ಕುವ ನಿಶ್ಕಲ್ಮಷ ಪ್ರೇಮ, ವಿಶ್ವಾಸ ನನಗೆ ತುಂಬಾ ಬೇಕು.

ಪಟ್ಟಣ ಸೇರಿದ್ದೇನೆ. ದೊಡ್ಡ ದೊಡ್ಡ ಡಿಗ್ರಿ ಹೊತ್ತ ಕೈತುಂಬಾ ಸಂಬಳ ತರುವ ಅಧಿಕಾರಿಯೂ ನಾನಾಗಿದ್ದೇನೆ. ನವನಾಗರಿಕತೆಯನ್ನು ಕಂಡು ಬೆರ ಗಾಗಿದ್ದೇನೆ. ಕೃತಕತೆಯೇ ಮೈಗೊಂಡ ನಾಗರಿಕರನ್ನು ಕಂಡು, ಅವರ ಕಪಟ ಪ್ರೇಮ. ತೋರಿಕೆಯ ವಿಶ್ವಾಸ ಒಣ ಆಡಂಬರಗಳಿಗೆ ನನ್ನ ಮನಸ್ಸು ಹೇಸುತ್ತದೆ. ನನ್ನ ಹೃದಯಕ್ಕೆ ತಿಲ ಮಾತ್ರವೂ ನೆಮ್ಮದಿಯಿಲ್ಲ.

ಈ ಎಲ್ಲಾ ಕಪಟ, ಮೋಸ, ಕೃತ್ರಿಮತೆಯಿಂದ ವರ್ಜಿತಳಾಗಿ ಹಸುಗೂಸಿನಂತಹಾ ಮುಗ್ಧೆಯೊಬ್ಬಳು ನನ್ನ ವಳಾಗಬೇಕೆಂದು ನಾನು ಬಹುದಿನಗಳಿಂದಲೂ ಪ್ರಯತ್ನ ಪಡುತ್ತಿದ್ದೇನೆ ಏಕೋ ಏನೋ ನನ್ನ ಮನಸ್ಸಿಗೆ ಕಣ್ಣಿಗೆ ಅವಳು ಗೋಚರಿಸುತ್ತಲೇ ಇಲ್ಲ. ಗೆಳೆಯರ ಒತ್ತಾಯದ ಮೇರೆಗೆ ನಾನೀಗಾಗಲೇ ನೋಡಿದ ಹಲ ವಾರು ಹೆಣ್ಣುಗಳು ನನ್ನ ಮನಸ್ಸಿನ ಅಶಾಂತಿಯನ್ನು ಮತ್ತಷ್ಟೂ ಕೆದರಿದವು. ನಟನೆಯ ಪ್ರೀತಿ ನನಗೆ ಬೇಡ. ಆಡಂಬರವಂತೂ ನನಗೆ ಒಗ್ಗದು ಏಕೆಂದರೆ ನಾನು ಸಹಜ ಪ್ರೀತಿ—ವಿಶ್ವಾಸಗಳ ಕಡಲಲ್ಲೇ ಮುಳುಗ ಬಯಸುವವನು.

ಓಹ್! ಎಂತಹಾ ಅದೃಷ್ಟ? ಎದುರು ಮನೆಯ ಆ ದೇವಕನ್ಯೆ ನನ್ನ ಮನಸ್ಸನ್ನು ಅಪಹರಿಸಿದ್ದಾಳೆ. ಅವಳ ಸರಳತೆ, ಗಾಂಭೀರ್ಯ ನನ್ನನ್ನು ಬಹುವಾಗಿ ಆಕರ್ಷಿಸಿದೆ. ಗೆಳೆಯ ಹೇಳಿದನಲ್ಲಾ ನಿನ್ನೆ· ಬಂದ ಕನ್ಯಾರ್ಥಿಗಳಾರೂ ಅವಳನ್ನು ಮೆಚ್ಚುವುದಿಲ್ಲವಂತೆ. ಹುಂ ! ಇಂತಹ ಸೌಂದರ್ಯ, ಗಾಂಭೀರ್ಯದ ರಾಶಿ ಯನ್ನೇ ಮೆಚ್ಚದ ನಾಗರಿಕರು ಮತ್ತೇನನ್ನುತಾನೆ ಮೆಚ್ಚಿಯಾರು ? ಅದೂ ನಿಜವೇ....ಮಾನಿನ ವಾಸ ನೆಯೇ ಒಗ್ಗಿದವನಿಗೆ ಮಲ್ಲಿಗೆಯ ಕಂಪು ಹಿಡಿ ಸೀತೇ...?....

ನಾನೊಬ್ಬ ಪದವೀಧರ. ನನ್ನ ಅಂತಸ್ತು ದೊಡ್ಡದು....ಎಲ್ಲರಂತೆ ನಾನೂ ಅವಳನ್ನು ಮೆಚ್ಚಲಾರೆ ನೆಂದೇ ಅವಳ ತಾಯಿತಂದೆಗಳು ಎಣಿಸಿರಬೇಕು... ಅದಕ್ಕೇ ನನ್ನನ್ನು ಈ ಬಗ್ಗೆ ನಾನು ಎದುರಿಗೇ ಇದ್ದರೂ ಒಂದುಮಾತು ಪ್ರಸ್ತಾಪಿಸದೇ ಹೋಗಿಬಹುದು. ಆದರೆ ಅವಳು ? ಕತ್ತೆತ್ತಿ ನನ್ನನೊಮ್ಮೆ ಕಣ್ಣೆತ್ತಿಯೂ ನೋಡದ ಆ ಮುಗ್ಧೆ ನನ್ನ ಬಗ್ಗೆ ಏನನ್ನುತಾನೆ ಯೋಚಿಸಿಯಾಳು ? ನಿಜಕ್ಕೂ ಶೋಚನೀಯವೇ...

ಮೊನ್ನೆ ಒಬ್ಬ ಬಂದಿದ್ದನಲ್ಲಾ... ಬೊಚ್ಚು ಬಾಯಿಯ ಐವತ್ತು ದಾಟಿದ ಹುಡುಗ ಇಷ್ಟು ಚಿಕ್ಕ ವಯಸ್ಸಿಗೆ ಮದುವೆಯ ಹುಚ್ಚೇ ಎನಿಸುತ್ತದೆ ನನಗೆ. ಬಹುಶಃ ಮೂರನೆಯದೋ ನಾಲ್ಕನೆಯದೋ. .ಆತ ಅವಳನ್ನು ಮೆಚ್ಚಿರಲೇಬೇಕು. ಮೆಚ್ಚಿದೇನು ಮಾಡಿ ಯಾನು? ಮರು ಮಾತನಾಡಲಶಕ್ತಳಾದ ಇಂತಹ ಹೆಣ್ಣು ಸಿಕ್ಕರೆ ? ಅದಕ್ಕಾಗಿಯೇ ಇರಬೇಕು ಇಂದು ಮುಂಜಾನೆಯೂ ಬಂದಿದ್ದ. ಬರಲಿ...ಬರಲಿ...

ಎಂದಿನಂತೆ ನಾನು ಸಂಜೆ ನನ್ನ ರೂಮಿನ ಕತ್ತ ಲಲ್ಲಿ ಹೊರ ಹೊರಡಲು ಸಿದ್ಧನಾಗಿ ನಿಂತಾಗ ಅವಳು ಅದೇ ಮುಂದಡಿ ಅಶೋಕವನದ ರಾಕ್ಷಸರ ನಡುವಣ ಸೀತೆಯಂತೆ ನಿಂತು ಕಣ್ಣೀರು ಹರಿಸುತ್ತಿದ್ದಳು. ಆ ಮುದು ಮದುವಣಿಗನಿಗೆ ಅವಳನ್ನು ಬಲಿ ಕೊಡಲು ತೀರ್ಮಾನವಾಗಿರಬೇಕು. ಇನ್ನು ತನ್ನೆಲ್ಲಾ ಆಸೆ ಆಕಾಂಕ್ಷೆಗಳು ಮುಗಿದವೆಂದು ಅವಳು ನೊಂದಿರಬೇಕು. ನಾನು ನೋಡದಾದೆ.. ತಲೆಯೆತ್ತಿದೆ ಬೇಗ ಬೇಗ ಗೆಳೆ ಯನ ಮನೆಗೆ ತೆರಳಿದೆ

ಇದೀಗ ಎಲ್ಲಾ ಅರ್ಥವಾಗಿದೆ. ಇರಲಿ...ಇದೂ ಒಂದೂ ತಮಾಷಿಯೇ...ನಾನೀಗಲೇ ಅವರ ಮನೆಗೆ ಹೋಗುತ್ತೇನೆ. ನೇರವಾಗಿ ಅವಳ ತಂದೆಯ ಬಳಿ ಹೋಗಿ ಹೇಳುತ್ತೇನೆ. ನಿಮ್ಮ ಮಗಳನ್ನು ನಾನು ಮದುವೆಯಾಗಬಯುಸುತ್ತೇನೆ ಎಂದು. ಹೇಗಿರುತ್ತದೆ. ಮಜಾ ?...

ಅವಳು ನನ್ನೆಲ್ಲಾ ಆಸೆ ಆಕಾಂಕ್ಷೆಗಳನ್ನು ಅರಿತು ತನ್ನ ನಿಷ್ಕಪಟ ಪ್ರೇಮದಲ್ಲಿ ಮುಳುಗಿಸುವಳೆಂಬ ಸಂಪೂರ್ಣ ಆತ್ಮವಿಶ್ವಾಸ ನನಗಿದೆ, ಪ್ರೀತಿಯ ಬರದಿಂದ ಬರಡಾದ ನನ್ನ ಮನಸ್ಸಿಗೆ ತನ್ನ ಅಮೃತ ಸೇಚನೆಯಿಂದ ಚಿಗುರಿಸುವಳೆಂಬ ತುಂಬು ನಂಬಿಕೆ ನನಗಿದೆ. ಏಕೆಂದರೆ ಅವಳು ಕೃತ್ರಿಮ, ಆಡಂಬರವಿಲ್ಲದ ಮಾತುಬಾರದ ಮೂಗಿ.

*For Mysore Government Silks :*

They Lead in Quality–Every Inch
They Lead in Durability–Every Time
They Lead in Fashions–Every Occasion
AND
They Lead in Guarantee–Every Step



*For Your Requirements :*

CONTACT OUR SALES AND SHOWROOMS

AT



1. MYSORE GOVERNMENT SILK WEAVING FACTORY SHOWROOMS
   Mananthody Road, Mysore–4

2. MYSORE GOVERNMENT SILKS
   'Gupta Market', Kempegowda Road, Bangalore–9.

3. MYSORE GOVERNMENT SILKS
   'Mysore Silk Palace', Luz Corner, No. 92, Royapettah High Road, Mylapore, Madras–4.

4. MYSORE GOVERNMENT SILKS
   'Visvesvaraya Bhavan', No. 8, Krishnarajendra Circle, Mysore–1.

5. SOUTH KANARA CENRAL CO-OPERATIVE WHOLESALE STORES LTD.,
   Post Box No. 124, Sahakari Mahal, Mangalore–1.

## Mysore Government Silk Weaving Factory, Mysore

## ಶ್ರೀ ಕನಕದಾಸರ

# ಹರಿಭಕ್ತಿಸಾರ

ಲೇಖಕರು :
ಡಾ|| ಕೆ.ಎಂ. ಕೃಷ್ಣರಾವ್

ಕರ್ನಾಟಕದ ಮಹಾಪುರುಷರಲ್ಲಿ ಒಬ್ಬರಾದ ಕಾಗಿನೆಲೆಯ ಕನಕದಾಸರು ಅನೇಕ ಕೃತಿಗಳನ್ನು ಬಿಟ್ಟು ಹೋಗಿದ್ದಾರೆ. ಮೋಹನತರಂಗಿಣಿ, ನಳಚರಿತ್ರೆ, ರಾಮಧಾನ್ಯಚರಿತ್ರೆ ಮತ್ತು ಹರಿಭಕ್ತಿಸಾರವೆಂಬ ನಾಲ್ಕು ಇಡಿಯ ಕೃತಿಗಳು ಕೀರ್ತನೆಗಳು ಸುಮಾರು ಇನ್ನೂರ ಐವತ್ತರಷ್ಟು ದೊರೆತಿವೆ. ನರಸಿಂಹಸ್ತೋತ್ರ ದೊರೆತಿಲ್ಲ. ಇತ್ತೀಚೆಗೆ ನಡೆದ ದಾಸರ ಚತುಶ್ಶತಮಾನೋತ್ಸವ ಸಂದರ್ಭದಲ್ಲಿ ಮೈಸೂರು ಸರ್ಕಾರ ಈ ಕೃತಿಗಳನ್ನು ಸಂಪಾದಿಸಿ ಪ್ರಕಟಿಸಲು ಏರ್ಪಾಟು ಮಾಡಿದರು ಮೋಹನತರಂಗಿಣಿಯ ವಿನಹ ಉಳಿದ ಕೃತಿಗಳು ಸಂಪಾದಿತವಾಗಿ ಪ್ರಕಟವಾಗಿವೆ ಜೊತೆಗೇ ಕನಕದಾಸ ಪ್ರಶಸ್ತಿ ಎಂಬ ವಿವಿಧ ಲೇಖನಗಳ ಗ್ರಂಥವೊಂದು ಪ್ರಕಟವಾಗಿದೆ.

ಕನಕದಾಸರು ಆದರ್ಶ ಹರಿದಾಸರು-ಸಂತರು. ಹರಿದಾಸರ ಸಂತರ ಪ್ರಮುಖ ಲಕ್ಷಣ-ಗುಣ ಎಂದರೆ ಭಗವದ್ಭಕ್ತಿ. ಕನಕದಾಸರ ಭಕ್ತಿಯನ್ನು ಹೊರಸೂಸುವ ದಿವ್ಯಕೃತಿಯೆಂದರೆ ಹರಿಭಕ್ತಿಸಾರ. ಈ ಕೃತಿಯ ಕೆಲವು ಪದ್ಯಗಳನ್ನಾದರೂ ಓದದ ಕನ್ನಡ ವಿದ್ಯಾರ್ಥಿಗಳು ಇರಲಿಲ್ಲ ಹಿಂದೆ.

ಹರಿಭಕ್ತಿಸಾರ ಕನ್ನಡ ಹರಿದಾಸ ಸಾಹಿತ್ಯದ ಒಂದು ಅನರ್ಘ್ಯ ರತ್ನವೆಂದು ವಿಮರ್ಶಕರು ಕೊಂಡಾಡಿದ್ದಾರೆ.

ಹರಿಭಕ್ತಿಸಾರ ಶತಕಗ್ರಂಥ ಜಾತಿಗೆ ಸೇರಿದ್ದು. ಶತಕ ಎಂದರೆ ನೂರು. ನೂರೇ ಪದ್ಯಗಳು ನಿಖರವಾಗಿ ಏನೂ ಇರಬೇಕೆಂದಿಲ್ಲ. ಹರಿಭಕ್ತಿಸಾರದಲ್ಲಿರುವ ಪದ್ಯಗಳೆಷ್ಟು ಎಂಬ ವಿಚಾರದಲ್ಲಿ ಭಿನ್ನಾಭಿಪ್ರಾಯಗಳಿವೆ. 100. 103, 110 ಮತ್ತು 111 ಹೀಗೆಲ್ಲಾ ಈಗ ದೊರೆಯುವ ಹರಿಭಕ್ತಿಸಾರದಲ್ಲಿ ಪದ್ಯಗಳಿವೆ ನೂರಕ್ಕಿಂತ ಹೆಚ್ಚು ಇರುವ ಪದ್ಯಗಳು ಪ್ರಕ್ಷಿಪ್ತ ಎನ್ನುವುದುಂಟು. ಆ ದೃಷ್ಟಿಯನ್ನಿಟ್ಟುಕೊಂಡು ಕೆಲವರು ಆ ಹೆಚ್ಚಿನ ಪದ್ಯಗಳನ್ನು ತೆಗೆದು ಹಾಕಿರುವುದೂ ಉಂಟು. ಹಾಗೆ ತೆಗೆಯುವಾಗ ಯಾವ ಪದ್ಯಗಳು ಹೋಗಬೇಕು ಎಂಬುದೂ ಒಂದು ಸಮಸ್ಯೆಯೇ. ಪ್ರಕ್ಷಿಪ್ತ ಪದ್ಯಗಳು ಯಾವುವು ಎಂಬುದನ್ನು ಕಂಡುಹಿಡಿಯುವ ಒರೆಗಲ್ಲು ಯಾವುದು?

ಶತಕ ಎಂದರೆ ನೂರು ಎಂಬುದು ನಿಜವಾದರೂ ಶತಕದಲ್ಲಿ ನೂರೇ ಪದ್ಯಗಳಿರಬೇಕೆಂಬ ನಿಯಮವೇನೂ ಇದ್ದಂತಿಲ್ಲ. ಅನೇಕ ಇತರ ಸಂಸ್ಕೃತ-ಕನ್ನಡ ಶತಕ ಕೃತಿಗಳಲ್ಲಿ ನೂರಕ್ಕಿಂತ ಹೆಚ್ಚು ಪದ್ಯಗಳಿವೆ. ಭಕ್ತ ಕವಿಗಳು ತಮ್ಮ ದೈವವನ್ನು ಕುರಿತು ಸ್ತೋತ್ರ ರೂಪವಾದ ಶತಕಗಳನ್ನು ರಚಿಸುವ ರೂಢಿಯಿದೆ. ಈ ಭಕ್ತಿಯುಕ್ತ ಸ್ತೋತ್ರ ಸ್ರೋತ ನೂರಕ್ಕೆ ಸರಿಯಾಗಿ ಮುಗಿದು ಹೋಗಬೇಕೆ? ಹೋಗಬಹುದೆ? ಹೆಚ್ಚು ಪದ್ಯಗಳು ಬರಬಹುದು. ಈ ದೃಷ್ಟಿಯಿಂದ ಕನಕದಾಸರ ಹರಿಭಕ್ತಿಸಾರದಲ್ಲಿ ನೂರೇ ಪದ್ಯಗಳಿರಬೇಕು ಎಂದೇನೂ ಹೇಳಬೇಕಾಗಿಲ್ಲ. ನೂರ ಹನ್ನೊಂದು ಪದ್ಯಗಳಿದ್ದರೆ ತಪ್ಪೇನೂ ಅಲ್ಲ. ನೂರಹತ್ತು ಪದ್ಯಗಳಿವೆ ಎಂದು ಹಿಂದಿನ ವಿಮರ್ಶಕರು ಹೇಳಿದ್ದಾರೆ.

ಹರಿಭಕ್ತಿಸಾರ ಹಾಡಲನುಕೂಲವಾದ, ಗಮಕಕ್ಕೆ ಚೆನ್ನಾಗಿ ಒಳವಡುವ ಭಾಮಿನೀ ಷಟ್ಪದಿ ಛಂದಸ್ಸಿನಲ್ಲೇ ರಚಿತವಾಗಿದೆ. ಇದನ್ನು ಭಕ್ತಿಸಾರ—ಹರಿಭಕ್ತಿಸಾರ ಎಂಬ ಎರಡೂ ವಿಧವಾಗಿ ಕರ್ತೃಗಳೇ ಕರೆದಿದ್ದಾರೆ. "ರಕ್ಷಿಸು ನಮ್ಮನನವರತ" ಎಂದು ಪ್ರತಿ ಪದ್ಯದ ಕೊನೆಯಲ್ಲೂ ಬರುವುದೊಂದು ಇದರ ವಿಶಿಷ್ಟ ಲಕ್ಷಣವೆನ್ನಬಹುದು. ಆದರೆ ಕೊನೆಯ ಆರು ಪದ್ಯಗಳಲ್ಲಿ ಮಾತ್ರ ಇದು ಬರುವುದಿಲ್ಲ, ಪ್ರಕ್ಷಿಪ್ತ ಎನ್ನಲು ಈ ಕಾರಣ ಸಹಾಯಕವಾದರೂ ಆಗಬಹುದು.

ಭಕ್ತಿಸಾರದ ಚರಿತೆಯನು ಹರಿ
ಭಕ್ತರಾಲಿಸುವಂತೆ ರಚಿಸುವೆ
ಯುಕ್ತಿಯಲಿ ಬರೆದೋದಿದವರಿಷ್ಟಾರ್ಥಸಿದ್ಧಿಪುದು
ಪದ್ಯ 18

ಧಾರಿಣಿಯೊಳೀಭಕ್ತಿಸಾರವ
ನಾರು ಓದುವರವರಿಗನುದಿನ
ಚಾರುವರಗಳನಿತ್ತು ರಕ್ಷಿಪನಾದಿಕೇಶವನು
ಪದ್ಯ 107.

ಲೋಕದೊಳಗತ್ಯಧಿಕನೆನಿಸುವ
ಕಾಕಿನೆಲೆ ಸಿರಿಯಾದಿಕೇಶವ
ತಾಕೃಪೆಯೊಳಗೆ ನುಡಿಸಿದನು ಈ ಭಕ್ತಿಸಾರವನು
ಪದ್ಯ 108.

ಊರುಗಳ ನೂರಗ್ರಹಾರವ
ಧಾರೆಯೆಳದಿತ್ತಂತೆ ಫಲಕ್ಕೆ
ಸೇರುವುದು ಹರಿಭಕ್ತಿಸಾರದ ಕಥೆಯ ಕೇಳ್ದರಿಗೆ
ಪದ್ಯ 106

ಭಕ್ತಿಸಾರದ ಚರಿತ್ರೆ, ಹರಿಭಕ್ತಿಸಾರದ ಕಥೆ ಎಂದೂ ಇಲ್ಲಿ ಹೇಳಿದ್ದರೂ ಯಾವ ಕಥೆಯೂ ಕಾಣುವುದಿಲ್ಲ. ಕಥ್ ಎಂದರೆ ಹೇಳು ಎಂದರ್ಥ. ಇಲ್ಲಿ ಹೇಳಿರುವುದು ಭಗವಂತನ ಮಹಿಮೆಯನ್ನು ಮಾತ್ರ. ಶ್ರೀಹರಿಯ ಕರುಣೆ, ಮಹಿಮೆ, ಲೀಲೆ ಮೊದಲಾದುವುಗಳನ್ನು ಕೊಂಡಾಡುವ ಸ್ತೋತ್ರರೂಪ ಪ್ರಾರ್ಥನಾ ಪದ್ಯಗಳಿವು. ಆದರೆ ಅವುಗಳನ್ನು ಹೇಳುವಾಗ ಭಕ್ತರ ಭಗವಂತನ ಸಂಬಂಧವಾದ ಅನೇಕ ಕಥೆಗಳು ಇಲ್ಲಿ ಸೂಚಿತವಾಗಿವೆ. ಶ್ರೀ ಮದ್ರಾಮಾಯಣ, ಮಹಾಭಾರತ ಮತ್ತು ಶ್ರೀಮದ್ಭಾಗವತ, ಇತರ ಪುರಾಣಗಳ ಕತೆಗಳನ್ನು ಇಲ್ಲಿ ಸೂಚಿಸಲಾಗಿವೆ. ಇವುಗಳ ಪರಿಚಯವಿಲ್ಲದವರಿಗೆ ಆ ಪದ್ಯಗಳು ಅರ್ಥವಾಗದು. ಭಕ್ತರ–ಭಗವದ್ವೇಷಿಗಳ ಸೂಚನೆ ಈ ಪದ್ಯಗಳಲ್ಲಿ ಬಂದಾಗ ಆ ಕಥೆಗಳನ್ನು ಓದುಗರು ನೆನಪುಮಾಡಿಕೊಳ್ಳಬೇಕಾಗಿದೆ.

ಉದಾಹರಣೆಗೆ :

ಗಾಂಗೇಯ (ಭೀಷ್ಮ); ಕೌಂತೇಯ (ಅರ್ಜುನ); ದೇವಕೀತನಯ (ಶ್ರೀಕೃಷ್ಣ); ರಾವಣಾಂತಕ (ರಾವಣನ ವೈರಿ ಶ್ರೀರಾಮಚಂದ್ರ); ಭಾವಜಾರಿಪ್ರಿಯ (ಮನ್ಮಥನಿಗೆ ಶತ್ರುವಾದ ಈಶ್ವರ – ಅವನಿಗೆ ಪ್ರಿಯನಾದವನು ವಿಷ್ಣು); ಗೋಪೀಜಾರ–ನವನೀತನಚೋರ (ಶ್ರೀಕೃಷ್ಣ); ಯಶೋದೆ ನಂದನ (ಕೃಷ್ಣ); ಪ್ರಹ್ಲಾದ ರಕ್ಷಕ (ನರಸಿಂಹ – ವಿಷ್ಣು); ವಿಶ್ವಾಮಿತ್ರಕ್ರತು ಸಂರಕ್ಷಕ (ವಿಶ್ವಾಮಿತ್ರನ ಯಜ್ಞವನ್ನು ಸಂರಕ್ಷಿಸಿದವನು ಶ್ರೀರಾಮ); ಕಾಳಿಂಗ ಮರ್ದನ (ಶ್ರೀಕೃಷ್ಣ); ಬಾಣಬಾಹುಚ್ಛೇದ (ಶ್ರೀಕೃಷ್ಣ); ಬಲಿಯಬಂಧಿಸಿ (ವಾಮನ); ಸತಿಗೊಲಿದು ಅಕ್ಷಯವಿತ್ತು (ದ್ರೌಪದೀಮಾನಸಂರಕ್ಷಣೆ); ಶಿಲೆಯ ಸತಿಯಳ ಮಾಡಿ (ಅಹಲ್ಯೆಯ ಕತೆ); ತ್ರಿಪುರದ ಲಲನೆಯರ ವ್ರತ ಕೆಡಿಸಿ (ತ್ರಿಪುರನಾಶ) ಇತ್ಯಾದಿ.

ಇಲ್ಲೆಲ್ಲಾ ರಾಮಾಯಣ ಭಾರತ ಭಾಗವತಗಳ ಕತೆಯ ಪರಿಚಯವಿದ್ದರೆ ಮಾತ್ರ ಅರ್ಥ ಅನ್ವಯ ಆಗುವುದು ಸಾಧ್ಯ. ಇದರಿಂದ ಕನಕದಾಸರ ವಿದ್ವತ್ತನ್ನೂ ನಾವು ತಿಳಿಯಬಹುದು.

ಕನಕದಾಸರು ತಮ್ಮ ಹರಿಭಕ್ತಿಸಾರದಲ್ಲಿ ಅಲ್ಲಲ್ಲೇ ಕೆಲವು ತತ್ತ್ವಗಳನ್ನು ಧೈರ್ಯವಾಗಿ ಪ್ರತಿಪಾದಿಸಿದ್ದಾರೆ. ಉದಾಹರಣೆಗೆ ಕರ್ಮತತ್ತ್ವವನ್ನು ಕುರಿತು ಹೇಳುತಾರೆ.

ಎಷ್ಟು ಮಾಡಲು ಮುನ್ನ ತಾಪಡೆ
ದಷ್ಟೆಯೆಂಬುದ ಲೋಕದೊಳು ಮತಿ
ಗೆಟ್ಟಮಾನವರಾಡುತಿಹರಾ ಮಾತದಂತಿರಲಿ

ಪಟ್ಟವಾರಿಂದಾಯ್ತು ಧ್ರುವನಿಗೆ
ಕೊಟ್ಟವರ ತಪ್ಪಿತೆ ಕುಚೇಲನಿ
ಗಿಷ್ಟಬಾಂಧವ ನೀನು ರಕ್ಷಿಸು ನಮ್ಮನನವರತ
ಪದ್ಯ 41.

ಇಲ್ಲಿ ಪರಮಾತ್ಮನ ಕೃಪೆ–ಅನುಗ್ರಹ – ಮೆಚ್ಚಿಕೆಯಾಯಿತೆಂದರೆ ಜೀವರು ಉದ್ಧಾರವಾಗುವರು–ಅದು ತಡವೆಂದು ಕೇವಲ ಕರ್ಮ ಎಂದು ನಂಬಿ ಕಂಗೆಟ್ಟು ಕುಳಿತಿರಬೇಕಾದುದಿಲ್ಲ. ಭಗವಂತನ ಸ್ಮರಣೆ ಸ್ತೋತ್ರ ಭಜನೆಗಳಿಂದ ಅವನ ಕೃಪೆಯನ್ನು ನಾವು ಸಂಪಾದಿಸಿದರೆ ಉನ್ನತಪದವಿಯನ್ನು ಇಹ–ಪರಗಳಲ್ಲಿ ಗಳಿಸಿಕೊಳ್ಳ

ಬಹುದು ಉದ್ಧೃತರಾಗಬಹುದು ಎಂದು ಸೂಚಿಸಿದ್ದಾರೆ. ಧ್ರುವ ಸುದಾಮರ ದೃಷ್ಟಾಂತದಿಂದ ಅದನ್ನು ಸಮರ್ಥಿಸಿದ್ದಾರೆ.

ವಾಲ್ಮೀಕಿಮಹರ್ಷಿಯ ದೃಷ್ಟಾಂತವನ್ನು ತೆಗೆದುಕೊಂಡು ರಾಮನಾಮವೆಂಬ ಎರಡಕ್ಷರಗಳಿಂದ ಹೇಗೆ ಅವರು ಉದ್ಧೃತರಾದರೆಂಬುದನ್ನು ಮುಂದಿನ ಪದ್ಯದಲ್ಲಿ ಸ್ವಾರಸ್ಯವಾಗಿ ವರ್ಣಿಸಿದ್ದಾರೆ.

ತನ್ನ ದೇಹಾತುರದಲಡವಿಯೊ
ಳನ್ಯರನು ಸಂಹರಿಸುತಿರುತಿರೆ
ನಿನ್ನ ನಾಮದೊಳಧಿಕವೆರಡಕ್ಷರವ ಬಣ್ಣಿಸುತ
ಧನ್ಯನಾದನು ಮುನಿಕುಲದಿ ಸಂ
ಪನ್ನನಾದನು ನೀನೊಲಿದ ಬಳಿ
ಕಿನ್ನು ಪಾತಕವುಂಟೆ ರಕ್ಷಿಸು ನಮ್ಮನನವರತ

ಪರಮಾತ್ಮ ವೈಷಮ್ಯ ನೈರ್ಘೃಣ್ಯವಿದೂರ, ನಿಷ್ಪಕ್ಷಪಾತಿ ಸತ್ಯಸಂಕಲ್ಪ-ಕರುಣಾಮಯಿ. ಅವನಿಗೆ ಜೀವದ ವಿಚಾರದಲ್ಲಿ ಪೂರ್ವ ಗ್ರಹವಾಗಲಿ ಕೋಪ ತಾಪಗಳಾಗಲೀ ಎಂದಿಗೂ ಇಲ್ಲ. ವೈರಿಯ ಬಂಧುವಾದರೂ ಭಕ್ತಿಯಿದ್ದರೆ ಅವರನ್ನು ಉದ್ಧರಿಸುವನು ಎಂಬ ತತ್ತ್ವವನ್ನು ವಿಭೀಷಣನ ಉದಾಹರಣೆಯಿಂದ ಸಮರ್ಥಿಸಿದ್ದಾರೆ.

ನಿನ್ನ ಸತಿಗಳುಪಿದ ದುರಾತ್ಮನ
ಬೆನ್ನಿನಲಿ ಬಂದವನ ಕರುಣದಿ
ಮನ್ನಿಸಿದ ಕಾರಣ ದಯಂತರಮೂರ್ತಿ ಯೆಂದೆನುತ
............ಸದ್ಗುಣ
ರನ್ನು ಸಿರಿಸಂಪನ್ನ ರಕ್ಷಿಸು ನಮ್ಮನನವರತ

ಪದ್ಯ 43.

ಗೊಲ್ಲ ನಾರಿಯರೊಳು ಪ್ರವರ್ತಕ
ನಲ್ಲವೇ ಭಾವಿಸಲು ಲೋಕದೊ
ಳೆಲ್ಲರೂ ಸರಿ ನಿನಗೆ ರಕ್ಷಿಸು ನಮ್ಮ ನನವರತ

ಪದ್ಯ 38.

ಜೀವ-ಪರಮಾತ್ಮರಲ್ಲಿರುವ ಅಂತರವನ್ನು ಒಂದು ಪದ್ಯದಲ್ಲಿ ಬಹಳ ಚೆನ್ನಾಗಿ ಸಚಿತ್ರವಾಗಿ ಬಣ್ಣಿಸಿದ್ದಾರೆ.

ದೀನ ನಾನು ಸಮಸ್ತಲೋಕಕೆ
ದಾನಿ ನೀನು ವಿಚಾರಿಸಲು ಮತಿ
ಹೀನ ನಾನು ಮಹಾಮಹಿಮ ಕೈವಲ್ಯಪತಿ ನೀನು
ಏನ ಬಲ್ಲೆನು ನಾನು ನೆರೆಸು
ಜ್ಞಾನ ಮೂರುತಿ ನೀನು ನಿನ್ನ ಸ
ಮಾನರುಂಟೇ ದೇವ ರಕ್ಷಿಸು ನಮ್ಮನನವರತ

ಪದ್ಯ 49.

ಜೀವನ ದುಸ್ಥಿತಿ ಅಜ್ಞಾನ :

ಮೊದಲು ಜನನವನರಿಯೆ ಮರಣದ
ಹದನ ಕಡೆಯಲಿ ತಿಳಿಯೆ ನಾ ಮ
ಧ್ಯದಲಿ ನೆರೆ ನಾ ನಿಪುಣನೆಂದರೆ ಬಳಿಕ ನಗೆಗೇಡು
ಮೊದಲು ಕಡೆ ಮಧ್ಯಗಳ ಬಲ್ಲವ
ಮದನ ಜನಕನು ನೀನು ನಿನ್ನಯ
ಪದಯಾಗವ ಬಯಸುವೆನು ರಕ್ಷಿಸು ನಮ್ಮನನವರತ

ಪದ್ಯ 95.

ಪರಮಾತ್ಮನಲ್ಲಿ ನಾವು ಬೇಡಬೇಕಾದುದೇನು ಎಂಬುದನ್ನು ಹರಿಭಕ್ತಿ ಸಾರ ಹೀಗೆ ಹೇಳುತ್ತದೆ.

ಎತ್ತಿದೆನು ನಾನಾ ಶರೀರವ
ಹೊತ್ತು ಹೊತ್ತಲಸಿದೆನು ಸಲೆ ಬೇ
ಸತ್ತು ನಿನ್ನಯ ಪದವ ಕಾಣದೆ ತೊಳಲಿ ಬಳಲಿದೆನು
ಸತ್ತು ಹುಟ್ಟುವ ಹುಟ್ಟ ಹಿಂಗುವ
ಸುತ್ತ ತೊಡಕನು ಮಾಣಿಸೆಲೆಪುರು
ಷೋತ್ತಮನೆ ಮನವೊಲಿದು ರಕ್ಷಿಸು ನಮ್ಮನನವರತ

ಪದ್ಯ 60.

ಬ್ರಹ್ಮ ಸೃಷ್ಟಿಯಲಿ ಜೀವ ಅನೇಕಾನೇಕ ಜನ್ಮಗಳನ್ನು ಪಡೆಯುತ್ತದೆ. ಆ ವಿವಿಧ ಜನ್ಮಗಳಲ್ಲಿ ಜೀವ ಮಗುವಾಗಿ ಮಮತೆಯ ಮಾತೆಯಿಂದ ಹಾಲು ಕುಡಿದದ್ದು ಲೆಕ್ಕ ಹಾಕಿದರೆ ಅದೊಂದು ಸಮುದ್ರವೇ ಆಗಬಹುದೇನೊ ಎನ್ನುತ್ತ, ಈ ಜನ್ಮಾಂತರಗಳ ಕೋಟಲೆಯೆಂಬ ಕುಣಿಕೆಯಿಂದ ತಪ್ಪಿಸಿ ರಕ್ಷಿಸು ಎನ್ನುತ್ತಾರೆ.

ಗಣನೆಯಿಲ್ಲದ ಜನನಿಯರು ಮೊಲೆ
ಯುಣಿಸಲಾಸಯ ಬಿಂದುಗಳನದ
ನೆಣಿಸಲಳವೇ ಸಪ್ತ ಸಾಗರಕಧಿಕವೆನಿಸಿಹುದು

ಬಣುಗು ಕಮಲಜನವಕೆ ತಾನೇ
ಮಣೆಯುಗಾರನು ಈಸಮಾಡಿದ
ಕುಣಿಕೆಗಳ ನೀ ಬಿಡಿಸಿ ರಕ್ಷಿಸು ನಮ್ಮನನವರತ

ಪದ್ಯ 62.

ಇಲ್ಲಿಯು ಹಾಲಿನ ಸಮುದ್ರದ ಕಲ್ಪನೆ-ಚಿತ್ರ ಸೊಗಸಾದುದು

ಊರು ತನಗೊಂದಿಲ್ಲ ಕೊತ್ತಿಕ
ರೀರಗಳ ಮಿತಿಯಿಲ್ಲ ತಾಸಂ
ಚಾರಿಸದ ಸ್ಥಳವಿಲ್ಲ ನುಡಿಯದ ಭಾಷೆ ಮತ್ತಿಲ್ಲ
ಕೇರಿ ಹೊಸತೊಂದಿಲ್ಲ ಮಣ್ಣದ
ಸಾರವಸ್ತುಗಳಿಲ್ಲ ತನು ಸಂ
ಚಾರವೀ ಬಗೆಯಾಯ್ತು ರಕ್ಷಿಸು ನಮ್ಮನನವರತ

ಪದ್ಯ 81.

ಜೀವನ ಜನ್ಮ ಸಂಚಾರ ಎಷ್ಟೇ ಇದ್ದರೂ ಎಷ್ಟೇ ಅನುಭವಿಸಿದರೂ ತೃಪ್ತಿ ಎಂಬುದುಂಟೆ ಅದಕ್ಕೆ-ಎಂಬ ಧ್ವನಿ ರಮ್ಯ.

ಮಾನವ ದೇಹದ ರಚನೆಯ ರಹಸ್ಯವನ್ನು ಸಚಿತ್ರವಾಗಿ ಬಣ್ಣಿಸಿ ಕನಕದಾಸರು ಅದಕ್ಕೆ ಮೂಲ ಯಾರು ಎಂಬುದನ್ನು ಸೂಚಿಸುತ್ತಾರೆ.

ಐದು ತತ್ತ್ವಗಳಾದ ವೊಂದ
ಕ್ಕೈದು ಕಡೆಯಲಿ ತತ್ತ್ವ ವಿಪ್ಪ
ತ್ತೈದು ಕೂಡಿದ ತನುವಿನಲಿ ನಂಬಿಸದೆ ನೀನಿರಲು
ಭೇದಿಸದೆ ಜೀವಾತ್ಮ ತಾ ಸಂ
ಪಾದಿಸಿದ ಸಂಚಿತ ಸುಕರ್ಮವ
ನಾದರಿಸಿ ಕೈಗೊಂಡು ರಕ್ಷಿಸು ನಮ್ಮನನವರತ

ಪದ್ಯ 65.

ಎಂಟು ಗೇಣಿನ ದೇಹ ರೋಮು ಗ
ಳೆಂಟು ಕೋಟಿಯು ಕೀಲ್ಗಳರವ
ತ್ತೆಂಟು ಮಾಂಸಗಳಿಂದ ಮಾಡಿದ ಮನೆಯ ಮನವೊಲಿದು
ನೆಂಟ ನೀಸಿದ ನಗಲಿಮೊಡೆ ಒಣ
ಹೆಂಟೆಯುಲಿ ಮುಚ್ಚುವನು ದೇಹದ
ಲುಂಟೆ ಫಲಪುರುಷಾರ್ಥ ರಕ್ಷಿಸು ನಮ್ಮನನವರತ

ಪದ್ಯ 66.

ಪರಮಾತ್ಮನು ನಮ್ಮ ದೇಹದಲ್ಲಿದ್ದು ಚಲನಾದಿಗಳನ್ನು ಮಾಡಿ ಮಾಡಿಸುತ್ತಿದ್ದರೆ, ನುಡಿದು ನುಡಿಸುತ್ತಿದ್ದರೆ ಅದಕ್ಕೆ ಬೆಲೆಯೇ ಹೊರತು ಅವನು ಅಲ್ಲಿಲ್ಲದಿದ್ದರೆ ಆ ದೇಹಕ್ಕೇನು ಬೆಲೆ? ಅವನಿಲ್ಲದ ದೇಹವನ್ನು ಹೂಳುವರು ಇಲ್ಲವೆ ಸುಡುವರು-ಹದ್ದುಗಳಿಗೆ ಇಡುವವರೂ ಉಂಟು! ಈ ದೇಹವೆಂಬ ಮನೆಯಲ್ಲಿ ಮುಖ್ಯವಾಗಿ ಇರುವವನು ಅವನು. ಅಮುಖ್ಯವಾಗಿ ತತ್ತ್ವಾಭಿಮಾನಿ ದೇವತೆಗಳು, ಆಮೇಲೆ ಜೀವರು ಈ ಜೀವ ಇವರೆಲ್ಲರ ಅಧೀನದಲ್ಲಿ ಅಸ್ವತಂತ್ರನಾಗಿ ಅಲ್ಲಿರಬೇಕು— ಅವರಿರುವವರಗೆ ಮಾತ್ರ. ಪರಮಾತ್ಮ-ವಾಯುದೇವರು ಅವರ ಪರಿವಾರ ದೇವತೆಗಳು ಎಲ್ಲ ಹೊರಬಂದರೆ ಜೀವನೂ ಹೊರಬರಲೇಬೇಕು. ಇಷ್ಟವಿರಲಿ ಬಿಡಲಿ. ತಾನೊಬ್ಬನೇ ಅಲ್ಲಿ ಉಳಿಯಲು ಯೋಗ್ಯತೆಯುಳ್ಳವನೆ? ಆದ್ದರಿಂದ ಈ ದೇಹವೆಂಬ ಮನೆಯ ಯಜಮಾನ ಬೇರೆ, "ಒಡಲಿಗೊಡೆಯನು ನೀನು" ಅವನ ಕರುಣೆಯನ್ನನುಸರಿಸಿ ಉಳಿದವರು ಎಂಬ ತತ್ತ್ವವನ್ನು ಈ ಎರಡು ಪದ್ಯಗಳಲ್ಲಿ ಸೂಕ್ಷ್ಮವಾಗಿ ವಿವರಿಸಿದ್ದಾರೆ.

ಎಲ್ಲರೂ ಎಲ್ಲವೂ ಭಗವಂತನ ಅಧೀನ. ಸರ್ವತಂತ್ರ ಸ್ವತಂತ್ರನಾದವನು ಅವನೊಬ್ಬನೆ. ಅವನ ಅಧೀನದಲ್ಲಿ ಉಳಿದುದೆಲ್ಲ. "ತೇನ ವಿನಾ ತೃಣಮಪಿ ನ ಚಲತಿ" ಎಂಬುದನ್ನು ಈ ಪದ್ಯದಲ್ಲಿ ಸ್ವಾರಸ್ಯವಾಗಿ ವರ್ಣಿಸುತ್ತಾರೆ.

ನಿನ್ನ ಸೂತ್ರದೊಳಾಡುವುವು ಚೈ
ತನ್ಯ ಸಚರಾಚರಗಳೆಲ್ಲವು
ನಿನ್ನ ಸೂತ್ರವು ತಪ್ಪಿದರೆ ಮುಗ್ಗುವುವು ಪಾಪೆಗಳು
ಇನ್ನು ನಮಗೆ ಸ್ವತಂತ್ರವೆಲ್ಲಿಯ
ದನ್ಯ ಕರ್ಮ ಸುಕರ್ಮವೆಲ್ಲವ
ನಿನ್ನದೆಂದೊಪ್ಪಿಸಿದೆ ರಕ್ಷಿಸುನಮ್ಮನನವರತ

॥ 69 ॥

ಮುಕ್ತಿಗೆ ಭಕ್ತಿಯೇ ಕಾರಣ (73); ಭಕ್ತಿಗೆ ನೀನೆ ಕಾರಣ (67); ನೀನು ದೀನರನೆಂಟ, ನಿನ್ನೊಳಗುಂಟೆ

ನಿರ್ದಯ, ನಾನು ಬಂಟನಲ್ಲವೆ (71); ನಿನ್ನವೋಲ್ ನಮಗಾರು ಬಾಂಧವರುಂಟು (75); ಭಕ್ತಿವಿರುದ್ಧ ವಾಗದ ವೋಲು ರಕ್ಷಿಸು (76): ಬಾಳಬೇಕೆಂಬುವಗೆ ನೆರೆನಿನ್ನೊಳಗವ ಮಿಗೆ ಮಾಡಿ ಭಕ್ತಿಯೊಳಾಳಿ ಬದುಕುವುದುಚಿತ :(77); ಬಿದ್ದುಹೋಗುವ ಕಾಯದೀತನುವೆಂಬ ಪಾಶ (76); ಬದುಕೇನು ಸುಡು ಸುಡು–ಗಾಳಿಗೊಡ್ಡಿದ ಸೊಡರು ಈ ಸಂಸಾರದೇಳಿಗೆಯು (77): ಮೊದಲಾದ ಕನಕದಾಸರ ಹರಿಭಕ್ತಿಸಾರದ ಹೇಳಿಕೆಗಳು ಅವರ ಜ್ಞಾನ ಪರಿಪಕ್ವದೆಶೆಯನ್ನು ಸೂಚಿಸುತ್ತವೆ.

ಎಂಜಲಿನ ವಿಷಯದಲ್ಲಿ ಅವರ ಮಾತು ತುಂಬ ಸ್ವಾರಸ್ಯವಾದುದು–ಪ್ರಸಿದ್ಧವಾದುದು.

ಎಂಜಲೆಂಜಲು ಎಂಬರಾನುಡಿ
ಎಂಜಲಲ್ಲವೆ ವಾರಿಜಲಚರ
ದೆಂಜಲಲ್ಲವೆ ಹಾಲುಕರುವಿನ ಎಂಜಲೆನ್ನಿಸದೆ
ಎಂಜಲೆಲ್ಲಿಯ ದೆಲ್ಲಿಯುಂ ಪರ
ರೆಂಜಲಲ್ಲವೆ ಬೇರೆ ಭಾವಿಸ
ವೆಂಜಲುಂಟೇ ದೇವ ರಕ್ಷಿಸು ನಮ್ಮನನವರತ

ರಾಘವಾಂಕ ಕವಿಯ ಹರಿಶ್ಚಂದ್ರ ಕಾವ್ಯದಲ್ಲಿ ಬರುವ ಗಾನರಮಣಿಯರವಾದವೈಖರಿ ಇಲ್ಲಿ ಜ್ಞಾಪಕಕ್ಕೆ ಬರುತ್ತದೆ. ಅವರು ಹರಿಶ್ಚಂದ್ರನನ್ನು ಕೇಳುತ್ತಾರೆ.

ಪಾವನ ಕ್ಷೀರಮಂ ಕೊಡುವ ಕೆಚ್ಚಲಮಾಂಸ
ವಾವಲೇಸಿನಿದುಳ್ಳ ಮಧುವನೊಸೆದೀವ ನೊಳ
ವಾವಲೇಸಧಿಕ ಕಸ್ತೂರಿಯಂ ಕೊಡುವ ಮೃಗ
ನಾಭಿ ತಾನಾವಲೇಸು
ದೇವರಿಗೆ ಸಲ್ಲವೇ ಉತ್ತಮಗುಣಂಗಳಿ
ದರ್ಾವ ಕುಂದಂ ತಳೆಯಲಾರವವನೀಶ ಕೇಳ್
ಭಾವಿಸುವಡಿಂದೆಮ್ಮ ರೂಪು ಜವ್ವನವಿರಲು
ಕುಲದ ಮಾತೇಕೆಂದರು!

ರೂಪು ಜವ್ವನವಿರುವ ನಮ್ಮನ್ನು ಕೂಡು ಎಂಬ ಹೊಲತಿಯರ ವಾದ ಕನಕದಾಸರ ಈ ಎಂಜಲಿನ ವಾದ ಹೊರನೋಟಕ್ಕೆ ತರ್ಕಬದ್ಧವಾಗಿ ಕಂಡರೂ, ಕವಿಗಳ ಆಶಯ ಮಾತ್ರ ಅದಲ್ಲ ಎಂಬುದು ಸ್ಪಷ್ಟ. ಅಂತರಾರ್ಥ ಬೇರೆಯೇ ಉಂಟು. ಆದರೆ ಯಾವುದನ್ನೂ ಅತಿಮಾಡಬಾರದು, ಒಳಗಿನ ತಿರುಳು-ಸಾರ ಮುಖ್ಯ-ರೆ ಎಂಬ ಒಳ ಅರ್ಥವನ್ನು ಇಲ್ಲಿ ಗಮನಿಸಬೇಕು ನಾವು.

ಜನ್ನ ಕವಿಯ ಒಂದು ಸ್ತ್ರೀ ಪಾತ್ರ (ಅಮೃತಮತಿ ಮಹಾರಾಣಿ) ಜಾರೆಯಾಗ ಬಯಸಿ ಹೃದಯ ಹೊಲಸಿನಿಂದ ತುಂಬಿಕೊಂಡು ಹೇಳುತ್ತಾಳೆ ಸೊಗಸಾದ ಮಾತೊಂದನ್ನು "ಪೊಲ್ಲಮೆಯೆ ಲೇಸು ನಲ್ಲರ ವೈಯೊಳ್" ಎಂದು. ಈ ಮಾತೇನೊ ಮುತ್ತಿನಂತಹುದು. ವಾಕ್ಯ ಮಾಣಿಕ್ಯವೂ ಅಹುದು. ಅದು ನಿಜವೇ ಆದರೂ ಬರುತ್ತಿರುವುದು ಯಾರ ಬಾಯಿಂದ ಅದೂ ಮುಖ್ಯವೆ. ಹಾಗೆಯೇ ಕನಕದಾಸರ ಮಾತನ್ನು ಅಪಾರ್ಥ ಮಾಡಿಕೊಂಡು ಎಲ್ಲರ ಎಂಜಲನ್ನೂ ಎಲ್ಲರೂ ತಿನ್ನಬಹುದು ಎಂದು ಅದರ ಅರ್ಥ ಎಂದು ವಾದ ಮಾಡುವುದು ಮೂರ್ಖತನವಾದೀತು. ಅರ್ಥಗರ್ಭಿತವಾದ ಚಮತ್ಕಾರದ ಮಾತನ್ನು ಸರಿಯಾಗಿ ಅರ್ಥಮಾಡಿಕೊಳ್ಳುವ ಚಾತುರ್ಯ–ಬುದ್ಧಿಶಕ್ತಿಯೂ ನಮಗೆ ಇರಬೇಕಾಗುತ್ತದೆ.

ಕನಕದಾಸರು ತುಂಬ ವಿನಯದಿಂದ ತಾವು ವಿದ್ವಾಂಸರಲ್ಲ—ಜ್ಞಾನಿಯಲ್ಲ ಎಂದು ಹೇಳಿಕೊಂಡಿದ್ದಾರೆ.

ವೇದ ಶಾಸ್ತ್ರ ಪುರಾಣ ಪುಣ್ಯದ
ಹಾದಿಯನು ನಾನರಿಯೆ ತರ್ಕದ
ವಾದದಲಿ ಗುರು ಹಿರಿಯರರಿಯದ ಮೂಢ ಮತಿಯೆನಗೆ

ಆದಿ ಮೂರುತಿ ನೀನು ನೆರೆಕರು
ಣೋದಯವನು ಹೃದಯಾಂಗಣದಿ ಜ್ಞಾ
ನೋದಯವನೆನಗಿತ್ತು ರಕ್ಷಿಸು ನಮ್ಮನನವರತ

ಇದು ಔಪಚಾರಿಕವಾಗಿ ನಮ್ರತೆಯಿಂದ ಹೇಳುವುದು ಮಾತ್ರ ಎಂಬುದು ಸ್ಪಷ್ಟ–ಎಂಬ ವಿಚಾರ ಅವರ ಗ್ರಂಥಗಳನ್ನೂ ಕೀರ್ತನೆಗಳನ್ನೂ ನೋಡಿದವರಿಗೆ ಚೆನ್ನಾಗಿ ವೇದ್ಯವಾಗುವುದು. ಜ್ಞಾನಕ್ಕೆ ಮಿತಿಯುಂಟೆ? ಎಷ್ಟು ಇದ್ದರೂ ಇಲ್ಲ ಎಂದು ಹೇಳಿಕೊಂಡರೆ ಸುಳ್ಳಾ

ಗಲಾರದಲ್ಲವೆ? ಆ ವಿಶಾಲಾರ್ಥದಲ್ಲಿ ಅವರ ಮಾತನ್ನು ಅರ್ಥಮಾಡಿಕೊಳ್ಳಬೇಕು.

ಹರಿಭಕ್ತಿಸಾರದಲ್ಲಿ ಕನಕದಾಸರ ಜ್ಞಾನ, ಭಕ್ತಿ ವೈರಾಗ್ಯ ದ್ಯೋತಕವಾದ ಮಾತುಗಳು ಹೇರಳವಾಗಿ ದೊರೆಯುತ್ತವೆ. ಈಗಾಗಲೇ ಇಲ್ಲಿ ಉಧೃತವಾಗಿರುವ ಪದ್ಯಗಳಿಂದಲೂ ಅದನ್ನು ನಾವು ಚೆನ್ನಾಗಿ ತಿಳಿಯಬಹುದು,

"ಭಕ್ತಿಸಾರದಲ್ಲಿ ಕನಕದಾಸರು ಭಕ್ತಿ ನೀತಿ ವೈರಾಗ್ಯಗಳ ತುಟ್ಟ ತುದಿಯನ್ನು ತಲುಪಿರುವರೆಂದು ಅನ್ನಬಹುದು. ಈ ಕಾವ್ಯವು ಭರ್ತೃಹರಿಯ ನೀತಿ ವೈರಾಗ್ಯ ಶತಕಗಳ ಕುಲಕ್ಕೆ ಸೇರಿದುದು" (ಕವಿ ಕನಕದಾಸರು" — ಪುಟ 117)

ಕನಕದಾಸರು ಒಳ್ಳೆಯ ಕವಿ–ಸತ್ಪುರುಷ, ಭಗವದ್ಭಕ್ತ ಜೀವನ್ಮುಕ್ತ, ಸಿದ್ಧ ಪುರುಷ ಎಂದು ಹರಿಭಕ್ತಿಸಾರದಿಂದಲೇ ಹೇಳಬಹುದು. ಓದುಗರ ಹೃದಯವನ್ನು ಪರಿಪಕ್ವಗೊಳಿಸುವ ಶಕ್ತಿ ಈ ಶತಕದಲ್ಲಿದೆ. ಅದು ಭಗವಂತನಲ್ಲಿ ಭಕ್ತಿಯನ್ನು ಬೆಳೆಸುತ್ತದೆ.

ಕನಕದಾಸರ ಪರಿಪಕ್ವವೂ ಭಕ್ತಿಪುಂಜವೂ ವಿರಕ್ತಿಯುತವೂ ನಿರ್ಲಿಪ್ತವೂ ಜ್ಞಾನ ಬುಗ್ಗೆಯೂ ಆದ ಶ್ರೀಮಂತ ಹೃದಯದಿಂದ ತಾನೇ ತಾನಾಗಿ ಹೊರಹೊಮ್ಮಿದ ಆಶುಕವಿತೆಯಂತಹ ರಚನೆ ಹರಿಭಕ್ತಿಸಾರ ಎಂದರೆ ಅತಿಶಯೋಕ್ತಿಯಲ್ಲ. ಈ ಷಟ್ಪದಿ ಶತಕಕ್ಕೆ ಅವರು ಆರಿಸಿರುವ ಶೀರ್ಷಿಕೆಯೂ ರಸಭರಿತವಾಗಿ ಯಥೋಚಿತವಾಗಿ ಯೋಗ್ಯವೂ ಅರ್ಥವತ್ತೂ ಆಗಿದೆ ಭಕ್ತಿಯ ಸಾರವನ್ನು ಈ ಪದ್ಯಗಳಲ್ಲಿ ಅವರು ಹಿಂಡಿ ಕೊಟ್ಟಿದ್ದಾರೆ. ಈ ಪದ್ಯಗಳನ್ನು ಓದುವ ಕನ್ನಡಿಗರ ಹೃದಯ ಆದರ್ಶವಾಗಿ ಪುನೀತವಾಗಿರುತ್ತದೆ. ಅಂತೆಯೇ ಕನಕದಾಸರ ಕೃತಿ ರಚನೆಯೂ ಸಾರ್ಥಕವಾಗಿದೆ. ತನ್ನ ಆತ್ಮೋನ್ನತಿಯನ್ನೂ ಓದುಗರ ಉದ್ಧಾರವನ್ನೂ ಒಟ್ಟಿಗೇ ಸಾಧಿಸುವ ಸಾರ್ಥಕ ಸಾಹಿತ್ಯವಿದು ಕನ್ನಡದ ಸಂಪತ್ತು.



## ಸಿದ್ಧಗಂಗಾ ಪತ್ರಿಕೆಗೆ ಆರ್ಥಿಕ ಸಹಾಯ

ನೆಲಮಂಗಲದ ಮಾಜಿ ಪುರಸಭಾಧ್ಯಕ್ಷರೂ, ನೆಲಮಂಗಲದ ಎಜುಕೇಷನ್ ಸೊಸೈಟಿಯ ಸ್ಥಾಪಕ ಕಾರ್ಯದರ್ಶಿಗಳೂ, ಉಜ್ವಲ ವಿದ್ಯಾಭಿಮಾನಿಗಳೂ, ಆದ ಶ್ರೀ ಕೆ.ಎನ್. ಸದಾಶಿವಾರಾಧ್ಯ ಅವರು "ಸಿದ್ಧಗಂಗಾ" ತ್ರೈಮಾಸಿಕದ "ಪ್ರೋತ್ಸಾಹಕ"ರಾಗಿ 150 ರೂಪಾಯಿಗಳನ್ನು ನೀಡಲೊಪ್ಪಿರುವುದಾಗಿ ನಾವು ತುಂಬಾ ಆಭಾರಿಗಳಾಗಿದ್ದೇವೆ.

— ಪ್ರಕಾಶಕರು

## ಚಂದಾರರಲ್ಲಿ ವಿನಂತಿ

ಚಂದಾದಾರರು ತಮ್ಮ ಚಂದಾಹಣ ಬಾಕಿಯಿದ್ದಲ್ಲಿ ಕೂಡಲೇ ಕಳುಹಿಸಿ ಪಾವತಿಮಾಡುವುದರ ಮೂಲಕ ಹಾಗೂ ವಿಳಾಸದ ಬದಲಾವಣೆಯಿದ್ದಲ್ಲಿ ಹೊಸವಿಳಾಸವನ್ನು ತಿಳಿಸುವುದರ ಮೂಲಕ ಸಹಕರಿಸಿ ಉಪಕರಿಸಬೇಕಾಗಿ ಪ್ರಾರ್ಥಿಸಿಕೊಳ್ಳುತ್ತೇವೆ.

ದಯವಿಟ್ಟು ಚಂದಾದಾರರು ತಮ್ಮ ಚಂದಾನಂಬರನ್ನು ತಪ್ಪದೆ ನಮೂದಿಸಿ ವ್ಯವಹರಿಸಲು ಪ್ರಾರ್ಥನೆ.

— ಪ್ರಕಾಶಕರು

# ತಾಲ್ಲೋಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ಲಿ.,

**ಕೊ ರ ಟ ಗೆ ರೆ**

ರಿ. ನಂ. 1865 ಸ್ಥಾಪನೆ: 17-5-60

## ಆಹಾರ ಧಾನ್ಯಗಳು, ಸೀಮೆಗೊಬ್ಬರ, ಕಬ್ಬಿಣ ಮತ್ತು ಉಕ್ಕು

ಇವುಗಳ ಅಧಿಕೃತ ಮಾರಾಟಗಾರರು

| | | |
|---|---|---|
| ಅಧಿಕೃತ ಷೇರು ಬಂಡವಾಳ | ರೂ. | 100000 - |
| ವಸೂಲಾದ ಷೇರು ಬಂಡವಾಳ | ರೂ. | 50320 - |
| ಫಂಡುಗಳು | ರೂ. | 2691 /- |
| ದುಡಿಯುವ ಬಂಡವಾಳ | ರೂ. | 231595 /- |

ರೈತರ ಸೌಲಭ್ಯಕ್ಕಾಗಿ ಲಾರಿ ಸೌಕರ್ಯವನ್ನು ಏರ್ಪಡಿಸಲಾಗಿದೆ.

ಎ. ಪಿ. ಪುಟ್ಟಣ್ಣ, ಬಿ.ಎ., ಬಿ.ಎಲ್.,
ಪ್ರೆಸಿಡೆಂಟ್.

ಟಿ. ಆರ್. ಮುನಿಸ್ವಾಮಿ,
ಸೆಕ್ರೆಟರಿ.

# ತುಮಕೂರು ಜಿಲ್ಲಾ ಅಡಿಕೆ ಮಾರಾಟ ಸಹಕಾರ ಸಂಘ ಲಿ., ತುಮಕೂರು

**ಹೊಸ ಮಂಡಿ ಪೇಟೆ, ತುಮಕೂರು.**

ಜಿಲ್ಲೆಯ ಅಡಿಕೆ ಬೆಳೆಗಾರರ ಮತ್ತು ಕೊಳ್ಳುವವರ ಏಕೈಕ ಹಿತೈಷಿಗಳು ಹುಣಸೇಹಣ್ಣು, ಸೀಗೆಕಾಯಿ, ರಾಸಾಯನಿಕ ಗೊಬ್ಬರ, ಕ್ರಿಮಿನಾಶಕಗಳು, ಸ್ಪ್ರೇಯರು ಮತ್ತು ಗೋಣಿ ಚೀಲ ಗಳಿಗೆ ವಿಚಾರಿಸಿರಿ.

ಸರ್ಕಾರದ ನಾಮಿನಿ :— ಆಹಾರ ಧಾನ್ಯ ವಿತರಣೆಗಾರರು, ಜನರಲ್ ಆಸ್ಪತ್ರೆ ಮತ್ತು ಜಿಲ್ಲಾ ಜೈಲಿಗೆ ಆಹಾರ ಮತ್ತು ಅವಶ್ಯಕ ವಸ್ತುಗಳನ್ನು ಪೂರೈಸುವವರು.

ಸಂಘವು ಭಾವಿ ಕೊರೆಯುವ ಯಂತ್ರದ ಸೌಲಭ್ಯವನ್ನು ರಿಯಾಯಿತಿ ದರದಲ್ಲಿ ಒದಗಿಸಲು ಏರ್ಪಡಿಸಿದೆ. ಈ ಸದವಕಾಶ ಉಪಯೋಗಿಸಿಕೊಳ್ಳಲು ಕೋರಿದೆ.

ಒಮ್ಮೆ ತಮ್ಮ ಬೇಡಿಕೆಗಳಿಗೆ ಭೇಟಿಯಿತ್ತು ವಿಚಾರಿಸಿರಿ.

ಬಿ. ಆರ್. ಬಸಪ್ಪ
ಕಾರ್ಯದರ್ಶಿ.

ಡಿ. ಸಿ. ಶಿವಾನಂದಯ್ಯ
ಅಧ್ಯಕ್ಷರು.

# *Insist On Quality Implements*









MANUFACTURES OF HIGH GRADE IMPLEMENTS AND TOOLS. MADE OUT OF HIGH CARBON STEEL. BEST HEAT TREATED AND TEMPERED. SUBJECT TO RIGID TESTS BEFORE DELIVERY. BEST INVESTMENT FOR THE MONEY SINCE THEY ARE STRONG, STURDY AND BUILT TO LAST AND TO ENDURE STRAIN.

ENQUIRIES SOLICITED DIRECT TO THE FACTORY OR ZONAL AGENTS.





## THE MYSORE IMPLEMENTS FACTORY, HASSAN

(GOVERNMENT OF MYSORE UNDERTAKING)

# ಸುದ್ದಿ ಸಂಗ್ರಹ

1) ದಿನಾಂಕ 6-7-66ರಂದು ಶ್ರೀ ಶ್ರೀಗಳವರ ದಿವ್ಯ ಅಧ್ಯಕ್ಷತೆಯಲ್ಲಿ ಕನ್ನಡ ಪಂಡಿತ್ ತರಗತಿಯ "ವ್ಯಾಸಂಗ ಗೋಷ್ಠಿಯ" ಪ್ರಾರಂಭೋತ್ಸವವು ಜರುಗಿತು ಸಂಸ್ಕೃತ ಕಾಲೇಜಿನ ಪ್ರಾಧ್ಯಾಪಕರಾದ ವಿದ್ವಾನ್ ಬಿ. ಗಂಗಪ್ಪನವರು ಹಾಗೂ ಸಂಸ್ಕೃತ ಕಾಲೇಜಿನ ಪ್ರಿನ್ಸಿಪಾಲರಾದ ವಿದ್ವಾನ್ ಎಸ್. ಸುಬ್ಬರಾಯ ಎಂ.ಎ., ಇವರು ವಿದ್ಯಾರ್ಥಿಗಳನ್ನುದ್ದೇಶಿಸಿ ಉಪನ್ಯಾಸ ವಿತ್ತರು.

2) ದಿನಾಂಕ 17-7-66 ರಂದು ಶ್ರೀರಂಗಪಟ್ಟಣ ತಾಲ್ಲೂಕು ಚಿನ್ನೇನಹಳ್ಳಿ ಗ್ರಾಮದ ಶ್ರೀ ಬಸವಲಿಂಗಪ್ಪನವರ ಮನೆಯಲ್ಲಿ ಶ್ರೀ ಶ್ರೀಗಳವರ ಪೂಜೆ.

3) ದಿನಾಂಕ 18-7-66 ರಂದು ಅದೇ ಗ್ರಾಮದ ಪ॥ ಚನ್ನೇಗೌಡರ ಮನೆಯಲ್ಲಿ ಪೂಜೆ.

4) ದಿನಾಂಕ 20-7-66ರಂದು ತಿಪಟೂರಿನ ಡಾ॥ ನಂದೀಶ್‌ರವರ ಮನೆಯಲ್ಲಿ ಪೂಜೆ.

5) ದಿನಾಂಕ 21-7-66ರಂದು ಬೆಂಗಳೂರಿನ ಮಾಧವನಗರ ಬಡಾವಣೆಯಲ್ಲಿರುವ ಶ್ರೀಮತಿ ಬೈರಮ್ಮನವರ ಮನೆಯಲ್ಲಿ ಪೂಜೆ.

6) ದಿನಾಂಕ 30-7-66 ರಂದು ಇಲ್ಲಿನ ಹೈಯರ್ ಸೆಕೆಂಡರಿ ಶಾಲೆಯ ವಿದ್ಯಾರ್ಥಿ ಸಂಘದ ಆಶ್ರಯದಲ್ಲಿ ಶಾಲೆಯ ಸಂಸ್ಕೃತ ಪಂಡಿತರಾದ ವಿದ್ವಾನ್ ಕೆ. ಎನ್. ಶಿವನಂಜಯ್ಯನವರ ಅಧ್ಯಕ್ಷತೆಯಲ್ಲಿ ಶಾಲಾಧ್ಯಾಪಕರಾದ ಶ್ರೀ ಕೆ. ವಿ. ಸುಬ್ಬರಾವ್ ಇವರು "ಕುಮಾರ ವ್ಯಾಸನ ಕರ್ಣ" ಎಂಬ ವಿಷಯವಾಗಿ ಉಪನ್ಯಾಸ ಮಾಡಿದರು

7) ದಿನಾಂಕ ೦-8-66ರಂದು ಇಲ್ಲಿನ ಪ್ರೌಢಶಾಲಾ ವಿದ್ಯಾರ್ಥಿ ಸಂಘದ ಆಶ್ರಯದಲ್ಲಿ ಶಾಲೆಯ ಮುಖ್ಯೋಪಾಧ್ಯಾಯರಾದ ಶ್ರೀ ಸಿ. ಎಸ್. ಸಿದ್ಧಲಿಂಗಯ್ಯ ಎಂ.ಎಸ್‌ಸಿ., ಬಿ.ಇ.ಡಿ., ಇವರ ಅಧ್ಯಕ್ಷತೆಯಲ್ಲಿ ಕಲಾವಿದ ಬಸವರಾಜು ಇವರು ತಮ್ಮ ಏಕಪಾತ್ರಾಭಿನಯ ಪ್ರದರ್ಶನವನ್ನಿತ್ತರು. ಅವರಿತ್ತ ಸತ್ಯಹರಿಶ್ಚಂದ್ರ ನಾಟಕದ ಕೆಲವು ದೃಶ್ಯಗಳ ಅಭಿನಯ ತುಂಬ ಹೃದಯಸ್ಪರ್ಶಿಯಾಗಿತ್ತು.

8) ದಿನಾಂಕ 11-8-66ರಂದು ಶ್ರೀ ಶ್ರೀಗಳವರ ದಿವ್ಯ ಸಮ್ಮುಖದಲ್ಲಿ ಶ್ರೀಕ್ಷೇತ್ರದ ವಿವಿಧ ವಿದ್ಯಾರ್ಥಿ ಸಂಘಗಳ ಆರಂಭ ಭಾಷಣವನ್ನು "ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಇಲಾಖೆಯ ಅಧ್ಯಕ್ಷರಾದ ಡಾ॥ ರಂ. ಶ್ರೀ ಮುಗಳಿ ಎಂ.ಎ., ಬಿ.ಟಿ., ಡಿ.ಲಿಟ್., ಇವರು ಮಾಡಿದರು ವಿದ್ಯಾ ಇಲಾಖೆಯ ಆಡಿಷನಲ್ ಡೈರೆಕ್ಟರ್‌ರವರಾದ ಶ್ರೀ ವಿ. ಬಿ. ದೇಸಾಯ್ ಬಿ.ಎ., (ಆನರ್ಸ್), ಬಿ.ಟಿ., ಡಿ.ಪಿ.ಇಡಿ., ಎಂ.ಇಡಿ., ಇವರು ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಅತಿಥಿಗಳೀರ್ವರೂ ಅಂದು ಶ್ರೀ ಕ್ಷೇತ್ರದ "ಸಿದ್ಧಗಂಗಾ" ಪತ್ರಿಕಾಲಯಕ್ಕೆ ಭೇಟಿಯಿತ್ತು ಉಪಯುಕ್ತ ಸಲಹೆಗಳನ್ನಿತ್ತರಲ್ಲದೆ, ಪತ್ರಿಕೆಯ ಪ್ರಗತಿಯ ಬಗ್ಗೆ ತಮ್ಮ ಮೆಚ್ಚಿಗೆಯನ್ನು ವ್ಯಕ್ತಪಡಿಸಿದರು.

9) ದಿನಾಂಕ 14-8-66ರಂದು ಬೆಂಗಳೂರು, ರಾಜಾಜೀ ನಗರದ ಶ್ರೀ ಲಾಲ್‌ಬಹದ್ದೂರ್ ಶಾಸ್ತ್ರಿ ಸ್ಮಾರಕ ನರ್ಸರಿ ಶಾಲೆಯ ವಾರ್ಷಿಕೋತ್ಸವ ಸಮಾರಂಭವು ಶ್ರೀ ಶ್ರೀಗಳವರ ದಿವ್ಯ ಅಧ್ಯಕ್ಷತೆಯಲ್ಲಿ ನೆರವೇರಿತು. ವಿದ್ಯಾ ಇಲಾಖೆಯ ಡೈರೆಕ್ಟರ್ ಶ್ರೀ ಜೇವೂರ್ ರವರು ಸಮಾರಂಭದ ಮುಖ್ಯ ಅತಿಥಿಗಳಾಗಿದ್ದರು

10) ದಿನಾಂಕ 15-8-66ರಂದು ಶ್ರೀಕ್ಷೇತ್ರದ ವಿವಿಧ ವಿದ್ಯಾರ್ಥಿ ಸಂಘಗಳ ಆಶ್ರಯದಲ್ಲಿ ಪೂಜ್ಯಪಾದರ ದಿವ್ಯ ಸಮ್ಮುಖದಲ್ಲಿ ಸ್ವಾತಂತ್ರ್ಯೋತ್ಸವವನ್ನು ಬಹಳ ವಿಜೃಂಭಣೆಯಿಂದ ಆಚರಿಸಲಾಯಿತು. ಪ್ರಾತಃಕಾಲ 9 ಗಂಟೆಗೆ ವಿದ್ಯಾ ಇಲಾಖೆಯ ಜಾಯಿಂಟ್ ಡೈರೆಕ್ಟರ್ ರವರಾದ ಶ್ರೀ ಟಿ. ವಿ. ತಿಮ್ಮೆಗೌಡ ಬಿ.ಎಸ್.ಸಿ., ಬಿ.ಟಿ., ಎಂ.ಎ., (London) (offg) ಇವರು ಧ್ವಜಾರೋಹಣ ಮಾಡಿದರು. ಗೃಹಸಚಿವರಾದ ಶ್ರೀ ಎಂ. ವಿ. ರಾಮರಾವ್ ಇವರು ವಿದ್ಯಾರ್ಥಿಗಳಿಗೆ ಹಿತವಚನವನ್ನಿತ್ತರು.

11) ದಿನಾಂಕ 20-8-66ನೆಯ ಶನಿವಾರ ಇಲ್ಲಿನ ಪ್ರೌಢಶಾಲೆಯ ವಿದ್ಯಾರ್ಥಿ ಸಂಘದ ಆಶ್ರಯದಲ್ಲಿ ಶಾಲೆಯ ಅಧ್ಯಾಪಕರಾದ ಶ್ರೀ ಪಿ.ರುದ್ರಪ್ಪ ಬಿ.ಎಸ್‌ಸಿ., ಇವರ ಅಧ್ಯಕ್ಷತೆಯಲ್ಲಿ ಶಾಲಾಧ್ಯಾಪಕರಾದ ಶ್ರೀ ಬಿ. ವಿ. ಮಲ್ಲಿಕಾರ್ಜುನಯ್ಯನವರು "ಮಾನಿನಿಂದ ಮಾನವನೆಡೆಗೆ" ಎಂಬ ವಿಷಯವಾಗಿ ಭಾಷಣ ಮಾಡಿದರು.

12) ದಿನಾಂಕ 28-8-66ರಂದು ಹುಬ್ಬಳ್ಳಿಯಲ್ಲಿನ ಮೂರು ಸಾವಿರ ಮಠದ ವಿದ್ಯಾರ್ಥಿ ನಿಲಯದ ಉದ್ಘಾಟನೆಯನ್ನು ಶ್ರೀಮನ್ನಿರಂಜನ ಪ್ರಣವ ಸ್ವರೂಪಿ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರು ನೆರವೇರಿಸಿದರು. ಶ್ರೀ ಬಂಥನಾಳು ಶಿವಯೋಗಿಗಳವರು ಅಂದಿನ ಉಪನ್ಯಾಸಕಾರರಾಗಿದ್ದರು.

13) ದಿನಾಂಕ 2-9-66 ರಂದು ವಾಣೀವಿಲಾಸ ಸಾಗರದಲ್ಲಿ ನಡೆದ "ಗಂಗಾಪೂಜಾ" ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ ಶ್ರೀಗಳವರು ವಹಿಸಿದ್ದರು.

14) ದಿನಾಂಕ 5-9-66ರಂದು ತುಮಕೂರಿನಲ್ಲಿ ಆಚರಿಸಿದ "ಶಿಕ್ಷಕರ ದಿನಾಚರಣೆಯ" ಸಮಾರಂಭದಲ್ಲಿ ಶ್ರೀ ಶ್ರೀಗಳವರು ಉಪನ್ಯಾಸವಿತ್ತರು.

15) ದಿನಾಂಕ 5-9-66ರಂದು ಶ್ರೀಕ್ಷೇತ್ರದ ವಿವಿಧ ವಿದ್ಯಾರ್ಥಿ ಸಂಘಗಳ ಆಶ್ರಯದಲ್ಲಿ ಶಿಕ್ಷಕರ ದಿನಾಚರಣೆಯನ್ನು ಆಚರಿಸಲಾಯಿತು. ಇಲ್ಲಿನ ಉಪಾಧ್ಯಾಯ ಶಿಕ್ಷಣ ಶಾಲೆಯ ಸೂಪರಿಂಟೆಂಡೆಂಟ್‌ರವರಾದ ಶ್ರೀ ಎಸ್. ಬಿ. ರೇವಣ್ಣ ಬಿ.ಎಸ್.ಸಿ., ಎಂ.ಇಡಿ. ಇವರು ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಇಲ್ಲಿನ ಸಂಸ್ಕೃತ ಕಾಲೇಜಿನ ಪ್ರಿನ್ಸಿಪಾಲರಾದ ಶ್ರೀ ಎಸ್. ಸುಬ್ಬರಾಯ ಎಂ.ಎ., ಇವರು ಅಂದಿನ ಉಪನ್ಯಾಸಕಾರರಾಗಿದ್ದರು.

16) ದಿನಾಂಕ 7-9-66ರಂದು ಬೆಂಗಳೂರು ಗಾಂಧೀನಗರದ ಭವಾನೀ ಕಲ್ಯಾಣ ಮಂದಿರದಲ್ಲಿ ನಡೆದ "ರಾಮಾಯಣ ದರ್ಶನ ಕಾರ್ಯಕ್ರಮ"ದ ಮುಕ್ತಾಯ ಸಮಾರಂಭವು ಪೂಜ್ಯ ಶ್ರೀ ಶ್ರೀಗಳವರ ದಿವ್ಯ ಅಧ್ಯಕ್ಷತೆಯಲ್ಲಿ ಹೈಕೋರ್ಟ್ ನ್ಯಾಯಾಧೀಶರಾದ ಶ್ರೀ ಹೊಂಬೇಗೌಡರವರ ಸಮಾರೋಪ ಭಾಷಣದೊಡನೆ ನೆರವೇರಿತು. ದಿನಾಂಕ 8-9-66ರಂದು ತಿ.ನಂ. ಶ್ರೀಕಂಠಯ್ಯನವರ ನಿಧನದ ಬಗ್ಗೆ ಪಂಡಿತ್ ಡಿ. ಗಂಗರಾಜುರವರು ವಿದ್ಯಾರ್ಥಿಗಳನ್ನುದ್ದೇಶಿಸಿ ತಿ. ನಂ. ಶ್ರೀಕಂಠಯ್ಯನವರ ಜೀವನ ಚರಿತ್ರೆಯ ಬಗ್ಗೆ ಉಪನ್ಯಾಸ ಮಾಡಿದರು.

17) ದಿನಾಂಕ 12-9-66ರಂದು ಚಿಕ್ಕ ಬೆಳವಂಗಲ ಗ್ರಾಮದಲ್ಲಿ ಶ್ರೀ ಶ್ರೀಗಳವರ ದಿವ್ಯ ಹಸ್ತದಿಂದ ವಿದ್ಯುದ್ದೀಪದ ಪ್ರಾರಂಭೋತ್ಸವವು ಜರುಗಿತು.

18) ದಿನಾಂಕ 14-9-66ರಂದು ಶ್ರೀ ಶ್ರೀಗಳವರ ದಿವ್ಯ ಸಮ್ಮುಖದಲ್ಲಿ ತುಮಕೂರಿನ ಶ್ರೀ ಸಿದ್ಧಗಂಗಾ ತಾಂತ್ರಿಕ ಶಿಕ್ಷಣ ಕಾಲೇಜಿನ ವಿದ್ಯಾರ್ಥಿನಿಲಯದ ಅಸ್ತಿಭಾರವನ್ನು ಕರ್ಣಾಟಕ ವಿಶ್ವವಿದ್ಯಾನಿಲಯದ ಉಪಕುಲಪತಿಗಳಾದ ಡಾ|| ಡಿ. ಸಿ. ಪಾವಟೆಯವರು, ವಿದ್ಯಾಮಂತ್ರಿಗಳಾದ ಶ್ರೀ ಎಸ್. ಆರ್. ಕಂಠಿ ಇವರ ಅಧ್ಯಕ್ಷತೆಯಲ್ಲಿ ನೆರವೇರಿಸಿದರು.

19) ದಿನಾಂಕ 15-9-66 ರಂದು ಪ್ರಾತಃಕಾಲ 8 ಗಂಟೆಗೆ ಶ್ರೀ ಶ್ರೀಗಳವರ ದಿವ್ಯ ಸನ್ನಿಧಿಯಲ್ಲಿ ಕರ್ಣಾಟಕ ವಿಶ್ವವಿದ್ಯಾನಿಲಯದ ಉಪಕುಲಪತಿ ಡಾ|| ಡಿ. ಸಿ. ಪಾವಟೆಯವರು ಕ್ಷೇತ್ರದ ವಿದ್ಯಾರ್ಥಿಗಳನ್ನುದ್ದೇಶಿಸಿ ಉಪದೇಶವಿತ್ತರು. ಅಂದಿನ ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ ಕೆ.ತಿಪ್ಪೆರುದ್ರಯ್ಯನವರು ವಹಿಸಿದ್ದರು.

20) ದಿನಾಂಕ 18-9-66ರಂದು ಶ್ರೀಕ್ಷೇತ್ರದ ವಿವಿಧ ವಿದ್ಯಾರ್ಥಿ ಸಂಘಗಳ ಆಶ್ರಯದಲ್ಲಿ ಬೆಳಿಗ್ಗೆ 9 ಗಂಟೆಗೆ ವಿದ್ಯಾಗಣಪತಿಯ ಪ್ರತಿಷ್ಠಾಪನಾ ಮಹೋತ್ಸ

ವವೂ ಅಂದು ಸಂಜೆ ಇಲ್ಲಿನ ಶಾಲಾಧ್ಯಾಪಕರಾದ ಶ್ರೀ ಕೆ. ವಿ. ಸುಬ್ಬರಾವ್ ಬಿ.ಎ., ಇವರ ಅಧ್ಯಕ್ಷತೆ ಯಲ್ಲಿ ಸಂಸ್ಕೃತ ಕಾಲೇಜಿನ ಪ್ರಾಧ್ಯಾಪಕರಾದ ವಿದ್ವಾನ್ ಶ್ರೀ ಸಿ. ಎಂ. ರುದ್ರಾರಾಧ್ಯಶರ್ಮ ಇವರಿಂದ ''ಶ್ಯಮಂತಕೋಪಾಖ್ಯಾನ"ವೂ ಜರುಗಿದವು.

21) ದಿನಾಂಕ 19-9-66ರಂದು ಸಾಯಂ ಕಾಲ ಗಣೇಶೋತ್ಸವದ ಅಂಗವಾಗಿ ವಿಧಾನ ಸಭಾ ಸದ ಸ್ಯೆಣಿ ಶ್ರೀಮತಿ ಜಿ. ಸಿ. ಭಾಗೀರಥಮ್ಮನವರ ಅಧ್ಯಕ್ಷತೆ ಯಲ್ಲಿ ತುಮಕೂರು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ ಗಳಾದ ಶ್ರೀ ಜಿ. ಸೋಮಶೇಖರಪ್ಪ ಎಂ.ಎ.,ಬಿ.ಎಲ್. ಇವರ ಉಪನ್ಯಾಸವನ್ನು ಏರ್ಪಡಿಸಲಾಗಿದ್ದಿತು.

22) ದಿನಾಂಕ 20-9-66ರಂದು ಸಂಜೆ ಗಣ ಪತಿಯ ಉತ್ಸವದ ಅಂಗವಾಗಿ ಶ್ರೀ ಶ್ರೀಗಳವರ ದಿವ್ಯ ಅಧ್ಯಕ್ಷತೆಯಲ್ಲಿ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶ ರಾದ ಶ್ರೀ ಜಿ. ಎನ್. ಸಬಾಹಿತ್‌ರವರು ''ವಿದ್ಯಾ ಗಣಪತಿಯ ಸಾಕಾರ ಹಾಗೂ ನಿರಾಕಾರ ರೂಪಗಳ ಸಾಂಕೇತಿಕ ಅರ್ಥ" ಎಂಬ ವಿಷಯವಾಗಿ ಉಪನ್ಯಾಸ ಮಾಡಿದರು. ನ್ಯಾಯಾಧೀಶರು ಇಲ್ಲಿನ ಪ್ರೌಢಶಾಲೆಯ ಕನ್ನಡ ಅಧ್ಯಾಪಕ ಹಾಗೂ ಲೇಖಕ ಶ್ರೀ ಹೆಚ್. ವಿ. ವೀರಭದ್ರಯ್ಯ (ಹರತಿ ವೀರೇಶ) ಎಂ. ಎ., ಇವರ ಕವನ ಸಂಕಲನ ''ಹೇಮಲತೆ"ಯನ್ನು ಶ್ರೀ ಶ್ರೀಗಳವರ ದಿವ್ಯ ಆದೇಶದಂತೆ ಬಿಡುಗಡೆ ಮಾಡಿದರು.

23) ದಿನಾಂಕ 22-9-66 ರಂದು ಸಂಜೆ ವಿದ್ಯಾಗಣಪತಿಯ ಸಾನ್ನಿಧ್ಯದಲ್ಲಿ ಸಂಸ್ಕೃತ ಕಾಲೇಜಿನ ಪ್ರಿನ್ಸಿಪಾಲರಾದ ವಿದ್ವಾನ್ ಶ್ರೀ ಎಸ್. ಸುಬ್ಬರಾಯ ಎಂ.ಎ., ಇವರು ಉಪನ್ಯಾಸವಿತ್ತರು. ಸಮಾರಂಭದ ಅಧ್ಯಕ್ಷತೆಯನ್ನು ಸಂಸ್ಕೃತ ಕಾಲೇಜಿನ ಪ್ರಾಧ್ಯಾಪಕರಾದ ವಿದ್ವಾನ್ ಶ್ರೀ ವಾಸುದೇವಾ ಚಾರ್ಯ ಇವರು ವಹಿ ಸಿದ್ದರು. ಕ್ಷೇತ್ರದ ವಿದ್ಯಾರ್ಥಿಗಳಿಂದ ''ಭಕ್ತಿ ಗೀತೆಗಳ" ಕಾರ್ಯಕ್ರಮವು ಏರ್ಪಟ್ಟಿದ್ದಿತು.

24) ದಿನಾಂಕ 22-9-66ರಂದು ನಿಟ್ಟೂರಿ ನಲ್ಲಿ ವಿದ್ಯಾಗಣಪತಿಯ ಉತ್ಸವವು ಶ್ರೀ ಶ್ರೀಗಳವರ ನೇತೃತ್ವದಲ್ಲಿ ನೆರವೇರಿತು.

25) ದಿನಾಂಕ 23-9-66 ರಂದು ಸಂಜೆ ಶ್ರೀ ಶ್ರೀಗಳವರ ದಿವ್ಯ ಸಮ್ಮುಖದಲ್ಲಿ ತುಮಕೂರು ಜಿಲ್ಲಾ ವಿದ್ಯಾಧಿಕಾರಿಗಳಾದ ಶ್ರೀ ಎಲ್. ಎಸ್. ನಾರಾಯಣ್ ಬಿ.ಎಸ್‌ಸಿ , ಬಿ.ಟಿ., ಇವರ ಅಧ್ಯಕ್ಷತೆಯಲ್ಲಿ, ತುಮ ಕೂರಿನ ಸಿದ್ಧಗಂಗಾ ಸೈನ್ಸ್ ಕಾಲೇಜಿನ ಕನ್ನಡಾಧ್ಯಾ ಪಕರಾದ ಶ್ರೀ ಕೆ. ಜಿ. ನಾಗರಾಜಪ್ಪ ಎಂ.ಎ., ಇವರ ಉಪನ್ಯಾಸದೊಡನೆ ವಿದ್ಯಾಗಣಪತಿಯ ವಿಸರ್ಜನಾ ಮಹೋತ್ಸವವು ಜರುಗಿತು. ಈ ಸಮಾರಂಭದಲ್ಲಿ ವಿದ್ಯಾ ಇಲಾಖೆಯ ಡೆಪ್ಯುಟಿ ಡೈರೆಕ್ಟರ್‌ರವರಾದ ಶ್ರೀಮತಿ ರಹಮತುನ್ನಿಸಾ ಬೇಗಂರವರು ಭಾಗವಹಿ ಸಿದ್ದರು.

26) ದಿನಾಂಕ 23-9-66ರಂದು ತುಮಕೂ ರಿನ ಸಿದ್ಧಗಂಗಾ ಸೈನ್ಸ್ ಕಾಲೇಜಿನಲ್ಲಿ ವಿದ್ಯಾಗಣ ಪತಿಯ ಮಹೋತ್ಸವವು ಸಂಜೆ ಶ್ರೀ ಶ್ರೀಗಳವರ ದಿವ್ಯ ನೇತೃತ್ವದಲ್ಲಿ ನೆರವೇರಿತು.

27) ದಿನಾಂಕ 24-9-66ರಂದು ತುಮಕೂ ರಿನ ಶ್ರೀ ಸಿದ್ಧಗಂಗಾ ಪ್ರೌಢಶಾಲೆಯಲ್ಲಿ ಶ್ರೀ ಶ್ರೀಗಳ ವರ ದಿವ್ಯ ಸನ್ನಿಧಿಯಲ್ಲಿ ಗಣೇಶೋತ್ಸವವು ಜರುಗಿತು. ವಿಸರ್ಜನಾ ಮಹೋತ್ಸವದಲ್ಲಿ ಭಾಗವಹಿಸಿದ್ದ ಶ್ರೀ ಶ್ರೀಗಳ ವರು ಉಪದೇಶವನ್ನಿತ್ತರು.

28) ದಿನಾಂಕ 25-9-66 ರಂದು ಸಕಲೇಶ ಪುರದಲ್ಲಿ ಶ್ರೀ ಶ್ರೀಗಳವರ ನೇತೃತ್ವದಲ್ಲಿ ವಿದ್ಯಾಗಣ ಪತಿಯ ಉತ್ಸವವು ನೆರವೇರಿತು.

29) ದಿನಾಂಕ 25-9-66ರ ಬೆಳಿಗ್ಗೆ 10 ಗಂಟೆಗೆ ಶ್ರೀ ಕ್ಷೇತ್ರದ ಹಳೆಯ ವಿದ್ಯಾರ್ಥಿ ಸಂಘದ ಕಾರ್ಯಕಾರೀ ಸಮಿತಿಯು ವಿದ್ವಾನ್ ಶ್ರೀ ಸಿ. ಎಂ. ರುದ್ರಾರಾಧ್ಯ ಶರ್ಮರ ಅಧ್ಯಕ್ಷತೆಯಲ್ಲಿ ಸಮಾವೇಶ ಗೊಂಡು 22-10-66ರಂದು ಪ್ರಸಕ್ತ ಸಾಲಿನ ಸರ್ವ ಸದಸ್ಯರ ಮಹಾ ಸಭೆಯನ್ನು ಕರೆಯಬೇಕೆಂಬ ನಿರ್ಣ ಯವನ್ನು ಕೈಗೊಂಡಿತು. ಅದೇ ದಿನ ಮಧ್ಯಾಹ್ನ ''ಸಿದ್ಧಗಂಗಾ" ತ್ರೈಮಾಸಿಕದ ಪತ್ರಿಕಾ ಸಮಿತಿಯು ಪತ್ರಿಕೆಯ ಉಪ ಸಂಪಾದಕರಾದ ಶ್ರೀ ಕೆ. ರಾಜೀವ ಲೋಚನ್ ಎಂ.ಎ., ಇವರ ಅಧ್ಯಕ್ಷತೆಯಲ್ಲಿ ಸಮಾವೇಶ ಗೊಂಡು ಪತ್ರಿಕೆಯ ಪ್ರಗತಿಯ ಬಗ್ಗೆ ಮೆಚ್ಚಿಗೆ ವ್ಯಕ

ಪಡಿಸಿತಲ್ಲದೆ ಈ ಪತ್ರಿಕೆಯನ್ನು ಶಾಲಾ ಸಂಸ್ಥೆಗಳು ತೆಗೆದುಕೊಳ್ಳಲು ಮಂಜೂರಾತಿಯನ್ನು ನೀಡಿದ್ದಕ್ಕಾಗಿ ವಿದ್ಯಾ ಇಲಾಖೆಯ ಡೈರೆಕ್ಟರ್ ಹಾಗೂ ಸಂಬಂಧಿತ ಮಹನೀಯರುಗಳಿಗೆ ಕೃತಜ್ಞತೆಯನ್ನು ಸೂಚಿಸಬೇಕೆಂಬ ನಿಲುವಳಿಯನ್ನು ಕೈಗೊಂಡಿತು.

30) ದಿನಾಂಕ 26-9-66ರಂದು ಗೂಳೂರಿನ ಪ್ರೌಢಶಾಲೆಯಲ್ಲಿ ಶ್ರೀ ಶ್ರೀಗಳವರ ದಿವ್ಯ ಸನ್ನಿಧಿಯಲ್ಲಿ ವಿದ್ಯಾಗಣಪತಿಯ ಉತ್ಸವವು ಜರುಗಿತು.

31) ದಿನಾಂಕ 29-9-66 ರಂದು ಶಿರಾ ತಾಲ್ಲೂಕು ತರೂರು ಪ್ರೌಢಶಾಲೆಯಲ್ಲಿ ಶ್ರೀ ಶ್ರೀಗಳವರ ದಿವ್ಯ ನೇತೃತ್ವದಲ್ಲಿ ವಿದ್ಯಾಗಣಪತಿಯ ಉತ್ಸವವು ನಡೆಯಿತು.

32) ದಿನಾಂಕ 2-10-66ರಂದು ಶ್ರೀಕ್ಷೇತ್ರದ ವಿವಿಧ ವಿದ್ಯಾರ್ಥಿ ಸಂಘಗಳ ಆಶ್ರಯದಲ್ಲಿ "ಗಾಂಧೀ ಜಯಂತಿ"ಯನ್ನು ಶ್ರೀ ಶ್ರೀಗಳವರ ದಿವ್ಯ ಸಮ್ಮುಖದಲ್ಲಿ ಆಚರಿಸಲಾಯಿತು. ಶ್ರೀಮತಿ ವಿಶಾಲಾಕ್ಷಮ್ಮ ಲಕ್ಷ್ಮಣಗೌಡ ಇವರು ಅಧ್ಯಕ್ಷತೆ ವಹಿಸಿದ್ದರು. ಶ್ರೀಮತಿ ಸುಲೋಚನಾದೇವಿ ಆರ್ ಎಸ್. ಆರಾಧ್ಯ ಇವರು ವಿದ್ಯಾರ್ಥಿಗಳನ್ನುದ್ದೇಶಿಸಿ ಭಾಷಣ ಮಾಡಿದರು. ತುಮಕೂರಿನ ಸರ್ಕಾರೀ ಬಾಲಿಕಾ ಪ್ರೌಢಶಾಲೆಯ ಹಿಂದೀ ಅಧ್ಯಾಪಕಿ ಶ್ರೀಮತಿ ಶಾರದಮ್ಮನವರು ಈ ಸಂದರ್ಭದಲ್ಲಿ ವಿದ್ಯಾರ್ಥಿಗಳನ್ನುದ್ದೇಶಿಸಿ ಗಾಂಧೀಜಿಯವರ ಜೀವನ ಚರಿತ್ರೆಯ ಬಗ್ಗೆ ಉಪನ್ಯಾಸ ಮಾಡಿದರು.




## ಏಜೆಂಟರು ಬೇಕಾಗಿದ್ದಾರೆ

ಉನ್ನತ ಮಟ್ಟದ ಜ್ಞಾನಪೀಠವೆಂದೂ, ಗುರುಕುಲವೆಂದೂ. ದಾಸೋಹ ಮಠವೆಂದೂ ಸುಪ್ರಸಿದ್ಧವಾಗಿರುವ ಶ್ರೀ ಸಿದ್ಧಗಂಗಾ ಕ್ಷೇತ್ರದಿಂದ "ಸಿದ್ಧಗಂಗಾ" ತ್ರೈಮಾಸಿಕ ಪ್ರಕಾಶಿತವಾಗಿ ದಿನೇ ದಿನೇ ಜನಪ್ರಿಯತೆ ಗಳಿಸುತ್ತಿದೆ. ಈ ಪತ್ರಿಕೆಯ ಖ್ಯಾತಿಯನ್ನು ಮತ್ತಷ್ಟು ಹೆಚ್ಚಿಸಬೇಕೆಂಬ ಸಂಕಲ್ಪದಿಂದ ಕನ್ನಡ ನಾಡಿನಾದ್ಯಂತ ಏಜೆಂಟರ ನೆರವನ್ನು ಹೃತ್ಪೂರ್ವಕವಾಗಿ ಆಶಿಸಲಾಗಿದೆ. ಏಜೆಂಟರಿಗೆ ಆಕರ್ಷಕ ಕಮಿಷನ್ನನ್ನೂ ಕೊಡಲಾಗುವುದರಿಂದ ಈ ಕೆಳಕಂಡ ವಿಳಾಸದೊಡನೆ ವ್ಯವಹರಿಸಬೇಕಾಗಿ ಪ್ರಾರ್ಥನೆ.

ಪ್ರಕಾಶಕರು :
"ಸಿದ್ಧಗಂಗಾ"
ಶ್ರೀ ಸಿದ್ಧಗಂಗಾ ಕ್ಷೇತ್ರ
ತುಮಕೂರು ಜಿಲ್ಲಾ

## ಆಜೀವ ಸದಸ್ಯರು

H. V. ರಾಚೂಟಪ್ಪ ಶ್ರೀ ಶಿವಪ್ರಸಾದ್ ವೀವಿಂಗ್ ಫ್ಯಾಕ್ಟರಿ, ದೊಡ್ಡಬಳ್ಳಾಪುರ ಇವರು ಪತ್ರಿಕೆಗೆ 100 ರೂಪಾಯಿಗಳನ್ನು ಕೊಟ್ಟು ಆಜೀವ ಸದಸ್ಯರಾಗಲು ಒಪ್ಪಿಕೊಂಡಿದ್ದಾರೆ.

---

ಸ್ಥಾಪನೆ: 1957 ರಿ. ನಂ. 926

## ಸರ್ವೀಸ್ ಕೋ-ಆಪರೇಟಿವ್ ಸೊಸೈಟಿ, ಲಿಮಿಟೆಡ್

**ಕಂಬಾಳು**

**ನೆಲಮಂಗಲ ತಾಲ್ಲೋಕು**

ಆಹಾರ ಧಾನ್ಯಗಳು, ವ್ಯವಸಾಯೋಪಕರಣಗಳು ಸೀಮೆಗೊಬ್ಬರ ಇತ್ಯಾದಿಗಳಿಗೆ ಅಧಿಕೃತ ಮಾರಾಟಗಾರರು. ಅಲ್ಲದೆ ವ್ಯವಸಾಯಗಾರರಿಗೆ ಅಲ್ಪಾವಧಿ ಮತ್ತು ಮಧ್ಯಮಾವಧಿ ಸಾಲದ ವ್ಯವಸ್ಥೆಯನ್ನೂ ಸಹ ಏರ್ಪಡಿಸಲಾಗದೆ.

ಜಿ. ತಿಮ್ಮಪ್ಪ
ಅಧ್ಯಕ್ಷರು.

ಸಿ. ಬಸಪ್ಪ
ಕಾರ್ಯದರ್ಶಿಗಳು

---

## ಸರ್ವೀಸ್ ಕೋ-ಆಪರೇಟಿವ್ ಸೊಸೈಟಿ, ಲಿಮಿಟೆಡ್

**ಶಿವಗಂಗಾ, ನೆಲಮಂಗಲ ತಾಲ್ಲೋಕು.**

ಆಹಾರ ಧಾನ್ಯಗಳು, ವ್ಯವಸಾಯೋಪಕರಣಗಳು ಸೀಮೆಗೊಬ್ಬರ ಇತ್ಯಾದಿಗಳಿಗೆ ಅಧಿಕೃತ ಮಾರಾಟಗಾರರು. ಅಲ್ಲದೆ ವ್ಯವಸಾಯಗಾರರಿಗೆ ಅಲ್ಪಾವಧಿ ಮತ್ತು ಮಧ್ಯಮಾವಧಿ ಸಾಲದ ವ್ಯವಸ್ಥೆಯನ್ನೂ ಸಹ ಏರ್ಪಡಿಸಲಾಗಿದೆ.

ಎನ್. ಆರ್. ರೇವಣ್ಣಸಿದ್ದಪ್ಪ
ಅಧ್ಯಕ್ಷರು.

ಹೆಚ್. ಆರ್. ರಂಗಸ್ವಾಮಯ್ಯ
ಕಾರ್ಯದರ್ಶಿಗಳು.

---

## ಸೇವಾ ಸಹಕಾರ ಸಂಘ

**ದೇವರಾಯಪಟ್ಟಣ, ತುಮಕೂರು ತಾಲ್ಲೋಕು**

ರೈತರ ಅಭಿವೃದ್ಧಿಗೆ ಉಪಯುಕ್ತವಾದ ಸೀಮೆಗೊಬ್ಬರಕ್ಕೆ ಅಧಿಕೃತ ಮಾರಾಟಗಾರರು. ರೈತರ ಅಭಿವೃದ್ಧಿಗಾಗಿ ಸಾಲ ಕೊಡುವ ಏರ್ಪಾಡನ್ನೂ ಸಹ ಮಾಡಲಾಗಿದೆ.

ವಿದ್ವಾನ್ ಹೇಚ್. ಬಿ. ಗುರುಬಸವದೇವರು
ಅಧ್ಯಕ್ಷರು.

ಡಿ. ಎಸ್. ಹುಚ್ಚಪ್ಪ
ಕಾರ್ಯದರ್ಶಿಗಳು.

# ತುರುವೇಕೆರೆ ಮರ್ಚೆಂಟ್ಸ್ ಕೋ-ಆಪರೇಟೀವ್ ಬ್ಯಾಂಕ್ ಲಿಮಿಟೆಡ್

## ತುರುವೇಕೆರೆ

ತಾರೀಖು 30-9-66

| | | | |
|---|---|---|---|
| 1. | ಬ್ಯಾಂಕಿನ ರಿಜಿಸ್ಟ್ರೇಷನ್ ನಂಬರು D. Y. R. 371 of 18-6-64 | | |
| 2. | ಬ್ಯಾಂಕು ಓಪನ್ ಆದ ತಾರೀಖು 28-9-64 | | |
| 3. | ಬ್ಯಾಂಕಿನ ನಿಗದಿ ಷೇರು ಬಂಡವಾಳ (1000 ಷೇರುಗಳು) .... | ರೂ. | 2,50,000-00 |
| 4. | ಪಾವತಿ ಆಗಿರುವ ಷೇರು ಬಂಡವಾಳ (557 ಷೇರುಗಳು) .... | ರೂ. | 1,39,250-00 |
| 5. | ಷೇರುದಾರರ ಸಂಖ್ಯೆ .... 294 | | |
| 6. | ಹಾಲಿ ಇರುವ ಎಲ್ಲಾ ವಿಧವಾದ ಡಿಪಾಜಿಟ್ಟುಗಳು .... | ರೂ. | 89,041-19 |
| 7. | ಖಾತರಿ ಸೆಕ್ಯೂರಿಟಿಗಳ ಮೇಲೆ ಕೊಟ್ಟಿರುವ ಸಾಲ .... | ರೂ. | 3,01,753-08 |
| 8. | ಜಾಯಿಂಟು ಖಾತರಿ ಮೇಲೆ ಕೊಟ್ಟಿರುವ ಸಾಲಗಳು .... | ರೂ. | 3,68,713-47 |
| 9. | ಬ್ಯಾಂಕಿನ ವ್ಯವಹಾರದ ಬಂಡವಾಳ ...... .... | ರೂ. | 6,97,761-99 |
| 10. | ಬ್ಯಾಂಕಿನ ಇತರೆ ಫಂಡುಗಳು ...... ..... | ರೂ. | 3,080-06 |
| 11. | ಇತರೆ ಇನ್‌ವೆಸ್ಟ್‌ಮೆಂಟುಗಳು ...... .... | ರೂ. | 15,000-00 |
| 12. | ಬ್ಯಾಂಕು D. C. C. ಬ್ಯಾಂಕಿಗೆ ಪಾವತಿ ಮಾಡಬೇಕಾದ ಸಾಲ .... | ರೂ. | 4,53,611-41 |
| 13. | ಡಿಪಾಜಿಟ್ಟುಗಳ ಮೇಲೆ ಬ್ಯಾಂಕು ಕೊಡತಕ್ಕ ಬಡ್ಡಿ ದರಗಳು : | | |

| | | | | |
|---|---|---|---|---|
| 1) | ಕಾಲ್ ಡಿಪಾಜಿಟ್ಟುಗಳ ಮೇಲೆ | 4 ರಿಂದ 12 | ತಿಂಗಳವರಿಗೆ | ಶೇ॥ 5½ |
| 2) | ಸೇವಿಂಗ್ಸ್ ಬ್ಯಾಂಕು ಡಿಪಾಜಿಟ್ಟು | 1 ರಿಂದ 12 | ,, | ಶೇ॥ 4½ |
| 3) | ಫಿಕ್ಸೆಡ್ ಡಿಪಾಜಿಟ್ಟುಗಳ ಮೇಲೆ | 3 ರಿಂದ 6 | ,, | ಶೇ॥ 5½ |
| 4) | ,, | 6 ರಿಂದ 12 | ,, | ಶೇ॥ 6 |
| 5) | ,, | 12 ರಿಂದ 24 | ,, | ಶೇ॥ 6½ |
| 6) | ,, | 24 ರಿಂದ 36 | ,, | ಶೇ॥ 7 |
| 7) | ,, | 36 ರಿಂದ 48 | ,, | ಶೇ॥ 7½ |
| 8) | ,, | 48 ರಿಂದ 60 | ,, | ಶೇ॥ 8 |
| 9) | ,, | 60 ತಿಂಗಳು ಅದಕ್ಕೆ ಮೇಲ್ಪಟ್ಟು | | ಶೇ॥ 8½ |

ಧರ್ಮ ಸಂಸ್ಥೆಗಳ ಡಿಪಾಜಿಟ್ಟುಗಳ ಮೇಲೆ ಮೇಲ್ಕಂಡ ದರಗಳಿಗೆ ಶೇಕಡಾ ಅರ್ಧದಷ್ಟು ಹೆಚ್ಚಾಗಿ ಬಡ್ಡಿ ಕೊಡಲಾಗುತ್ತೆ.
ಡಿಪಾಜಿಟ್ಟುಗಳ ಮೇಲೆ ಶೇಕಡಾ ಒಂದು ರೂಪಾಯಿ ಜಾಸ್ತಿ ಬಡ್ಡಿ ದರದಲ್ಲಿ ಸಾಲ ಕೊಡಲಾಗುತ್ತೆ.

*Directors :*

T. R. Thiyambaka Murty, Turuvekere.
T. Sannalingappa, Turuvekere.
D Singanna, Turuvekere.
S. Siddaramaiah, Turuvekere.
D. Lakshminarayana Rao, Doddenahalli.
B. Channegowda, Ramadihalli.
S. G. Siddalingaiah, Sampige.
T. N. Mahalingaiah, Talavaranahalli.
M. P. Vajranabhaiah, Mayasandra

C. Sivananjappa
President.

T. Nanjunda Setty
Vice President.

Siddabasaviah
Treasurer.

B. Sanganabasappa
Manager.

" ಆಸೆಯೆಂಬುದು ಅರಸಿಂಗಲ್ಲದೆ ಶಿವಶರಣರಿಗುಂಟೆ ಎಲೆ ಅಯ್ಯ; ರೋಷವೆಂಬುದು ಯಮನದೂತರಿಗಲ್ಲದೆ ಶಿವಶರಣರಿಗುಂಟೆ ಎಲೆ ಅಯ್ಯ; ಈಸಕ್ಕಿಯ ಆಸೆ ನಮಗೇಕೆ ? ಮಾರಯ್ಯ ಪ್ರಿಯ ಅಮಳೇಶ್ವರಲಿಂಗ ಒಪ್ಪದ ಮಾತು. "

—ಲಕ್ಕಮ್ಮ (ಶಿವಶರಣೆ)




ಸ್ಥಳ ದಾನಮಾಡಿದವರು :

**ಟಿ. ಎಸ್. ಶಿವಪ್ಪ ಮತ್ತು ಪುತ್ರರು**

(ಸಿಲ್ಕ್ ಬಟ್ಟೆ ತಯಾರಿಸುವವರು)

**ಮೈನ್ ರೋಡ್ :: ದೊಡ್ಡಬಳ್ಳಾಪುರ**


" ವ್ಯಾಧನೊಂದು ಮೊಲನ ತಂದರೆ ಸಲುವ ಹಾಗಕ್ಕೆ ಬಲಿವರಯ್ಯ; ನೆಲನಾಳ್ವನ ಹೆಣನೆಂದರೆ ಒಂದಡಿಕೆಗೆ ಕೊಂಬುವರಿಲ್ಲ; ಆ ಮೊಲಕಿಂತ ಕರಕಷ್ಟ ನರನ ಬಾಳುವೆ ಕೂಡಲ ಸಂಗಮದೇವಾ. "

—ಬಸವೇಶ್ವರ




ಸ್ಥಳ ದಾನಮಾಡಿದವರು :

**ಟಿ. ಜಿ. ಯಡಿಯೂರಪ್ಪ ಮತ್ತು ಸಹೋದರರು**

**ಜ್ಯೋತಿ ಎಲೆಕ್ಟ್ರಿಕ್ ಸ್ಟೋರ್ಸ್**

ಎಂ. ಜಿ. ರೋಡ್, — ತುಮಕೂರು.

*Visit*

**SRI SIDDAGANGA**

# PETROL & DIESEL BUNK

**KYATSANDRA**

[ Managed by the Mutt ]

*The profit is for the benefit of the Poor Students*

GARRAGE FACILITIES GIVEN

" ಕೃತಯುಗದಲ್ಲಿ ಶ್ರೀ ಗುರು ಶಿಷ್ಯಂಗೆ ಬಡಿದು ಬುದ್ಧಿಯ ಕಲಿಸಿದರೆ ಆಗಲಿ ಮಹಾಪ್ರಸಾದವೆಂದೆನಯ್ಯಾ; ತ್ರೇತಾಯುಗದಲ್ಲಿ ಶ್ರೀ ಗುರು ಶಿಷ್ಯಂಗೆ ಬೈದು ಬುದ್ಧಿಯ ಕಲಿಸಿದರೆ ಆಗಲಿ ಮಹಾಪ್ರಸಾದವೆಂದೆನಯ್ಯಾ; ದ್ವಾಪರ ಯುಗದಲ್ಲಿ ಶ್ರೀ ಗುರು ಶಿಷ್ಯಂಗೆ ಝಂಕಿಸಿ ಬುದ್ಧಿಯ ಕಲಿಸಿದರೆ ಆಗಲಿ ಮಹಾ ಪ್ರಸಾದವೆಂದೆನಯ್ಯಾ; ಈ ಕಲಿಯುಗದಲ್ಲಿ ಶ್ರೀ ಗುರು ಶಿಷ್ಯಂಗೆ ವಂದಿಸಿ ಬುದ್ಧಿಯ ಕಲಿಸಿದರೆ ಆಗಲಿ ಮಹಾ ಪ್ರಸಾದವೆಂದೆನಯ್ಯಾ; ನಿಮ್ಮ (ಕಲಿ) ಕಾಲದ ಕಟ್ಟಳೆಯನೇನೆಂಬೆನಯ್ಯಾ ಗುಹೇಶ್ವರಾ. "

—ಅಲ್ಲಮಪ್ರಭು

ಸ್ಥಳ ದಾನಮಾಡಿದವರು :

**ಕಮಲ ಎಲೆಕ್ಟ್ರಿಕಲ್ಸ್**

ಎಂ. ಜಿ. ರೋಡ್,

ತುಮಕೂರು.

# Best Quality & Prompt Service...

- Scientific Apparatus Glassware and Chemicals
- Maps, Charts, Globes and Geographical Apparatus
- Models, Speciman, Skeletons & Skulls
- Teaching and Visual Aids
- General Equipment



**VASA SCIENTIFIC CO.,**

Krishna Buildings (Upstairs), Avenue Road,

BANGALORE-2.

*Telegrams* : "MYSIRON"

*Telephone No.* : 27

# THE MYSORE IRON & STEEL LTD.,
## BHADRAVATI

# WE ARE THE ONLY MANUFACTURERS OF PURE CHARCOAL PIG IRON AND FERROSILICON IN INDIA

**We are glad to announce that Ferro - silicon is exported by us for the first time to Holland, United Kingdom, Japan and other countries.**



SPECIAL STEELS will also be manufactured in the near future.

*Steel Castings* :

*a*) Manganese Steel Castings.
*b*) Cast Steel Castings.
*c*) Grinding Media.
*d*) High Carbon Steel Castings.
*e*) Heat-Resisting Steel Castings.

Mild Steel Sections.
Baling Hoops.
Chamundi Brand Portland and Slag Cement.
Cast Iron Pipes and Specials.
Cast Iron Spun Pipes.

*Enquiries solicited – especially for*
*Steel Castings, Ferrosilicon and Charcoal Pig Iron.*

Printed by T. B. Dharanendraiah at Prithvi Printers, 102, Balepet, Bangalore-2.